# ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಬಲೀಕರಣ ಪ್ರಕ್ರಿಯೆ: ಒಂದು ಅಧ್ಯಯನ

ಅಭಿವೃದ್ಧಿ ಅಧ್ಯಯನ (ಸಮಾಜ ವಿಜ್ಞಾನ ನಿಕಾಯ) ವಿಷಯದಲ್ಲಿ
ಪಿ.ಹೆಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿದ್ಯಾಲಯಕ್ಕೆ ಸಾದರ ಪಡಿಸಿದ
ಸಂಶೋಧನಾ ಮಹಾಪ್ರಬಂಧ


ಸಂಶೋಧಕರು

**ಶ್ರೀಮತಿ ಮಧುಮಾಲಾ ಕೆ.**

ಸಹ ಪ್ರಾಧ್ಯಾಪಕರು
ಸ್ನಾತಕೋತ್ತರ ಸಮಾಜ ಕಾರ್ಯ ವಿಭಾಗ
ಆಳ್ವಾಸ್ ಕಾಲೇಜು, ಮೂಡಬಿದ್ರೆ—೫೭೪೨೨೭
ನೋಂದಣಿ ಸಂಖ್ಯೆ : KTSM00136

ಮಾರ್ಗದರ್ಶಕರು

ಡಾ। ವೈ. ರವೀಂದ್ರನಾಥ್ ರಾವ್

ಉಪ ಪ್ರಾಂಶುಪಾಲರು ಮತ್ತು ಮುಖ್ಯಸ್ಥರು
ಸಮಾಜ ಕಾರ್ಯ ವಿಭಾಗ
ಸೈಂಟ್ ಮೇರಿಸ್ ಸಿರಿಯನ್ ಕಾಲೇಜು
ಪಿ. ಬಿ. ನಂ. 1, ಬ್ರಹ್ಮಾವರ, ಉಡುಪಿ ಜಿಲ್ಲೆ




ಮಾನ್ಯತಾ ಕೇಂದ್ರ
ಕರ್ನಾಟಕ ಥಿಯೋಲೋಜಿಕಲ್ ಸೊಸೈಟಿ
ಮಂಗಳೂರು

ಮಾನ್ಯತೆ
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೧೪

# ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಶಕ್ತೀಕರಣ ಪ್ರಕ್ರಿಯೆ: ಒಂದು ಅಧ್ಯಯನ

ಅಭಿವೃದ್ಧಿ ಅಧ್ಯಯನ (ಸಮಾಜ ವಿಜ್ಞಾನ ನಿಕಾಯ) ವಿಷಯದಲ್ಲಿ
ಪಿ.ಹೆಚ್.ಡಿ ಪದವಿಗಾಗಿ ಹಂಪಿ ಕನ್ನಡ ವಿದ್ಯಾಲಯಕ್ಕೆ ಸಾದರ ಪಡಿಸಿದ
ಸಂಶೋಧನಾ ಮಹಾಪ್ರಬಂಧ



**ಸಂಶೋಧಕರು**

**ಶ್ರೀಮತಿ ಮಧುಮಾಲಾ ಕೆ.**
ಸಹ ಪ್ರಾಧ್ಯಾಪಕರು
ಸ್ನಾತಕೋತ್ತರ ಸಮಾಜ ಕಾರ್ಯ ವಿಭಾಗ
ಆಳ್ವಾಸ್ ಕಾಲೇಜು
ಮೂಡಬಿದ್ರೆ – 574227
ನೋಂದಣಿ ಸಂಖ್ಯೆ : KTSM 00136

**ಮಾರ್ಗದರ್ಶಕರು**

**ಡಾ। ವೈ ರವೀಂದ್ರನಾಥ್ ರಾವ್**
ಉಪ ಪ್ರಾಂಶುಪಾಲರು ಮತ್ತು ಮುಖ್ಯಸ್ಥರು
ಸಮಾಜ ಶಾಸ್ತ್ರ ವಿಭಾಗ
ಸ್ಯೆಂಟ್ ಮೇರಿಸ್ ಸಿರಿಯನ್ ಕಾಲೇಜು
ಪಿ.ಬಿ.ನಂ.1, ಬ್ರಹ್ಮಾವರ, ಉಡುಪಿ ಜಿಲ್ಲೆ



**ಮಾನ್ಯತಾ ಕೇಂದ್ರ**
ಕರ್ನಾಟಕ ಥಿಯೋಲೋಜಿಕಲ್ ಸೊಸೈಟಿ
ಮಂಗಳೂರು

**ಮಾನ್ಯತೆ**
ಕನ್ನಡ ವಿಶ್ವ ವಿದ್ಯಾಲಯ ಹಂಪಿ
೨೦೧೪

# ಅಭ್ಯರ್ಥಿಯ ಪ್ರಮಾಣ ಪತ್ರ

**ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಶಕ್ತೀಕರಣ ಪ್ರಕ್ರಿಯೆ : ಒಂದು ಅಧ್ಯಯನ,** ಎಂಬ ಮಹಾಪ್ರಬಂಧವನ್ನು ಡಾ। ವೈ ರವೀಂದ್ರನಾಥ್ ರಾವ್ ಉಪ ಪ್ರಾಂಶುಪಾಲರು ಮತ್ತು ಮುಖ್ಯಸ್ಥರು, ಸಮಾಜ ಶಾಸ್ತ್ರ ವಿಭಾಗ, ಸೈಂಟ್ ಮೇರಿಸ್ ಸಿರಿಯನ್ ಕಾಲೇಜು, ಬ್ರಹ್ಮಾವರ ಇವರ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದೇನೆ. ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪಿ.ಹೆಚ್.ಡಿ ಪದವಿಗಾಗಿ ಮಂಗಳೂರಿನ ಕರ್ನಾಟಕ ಥಿಯೋಲೋಜಿಕಲ್ ಸೊಸೈಟಿ – ಮಾನ್ಯತಾ ಕೇಂದ್ರದ ಮೂಲಕ ಹಂಪಿಯ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಇದನ್ನು ಈ ಹಿಂದೆ ಯಾವುದೇ ಪದವಿ ಅಥವಾ ಡಿಪ್ಲೊಮೊ ಗಳಿಸಲು, ಬೇರೆ ಯಾವುದೇ ವಿಶ್ವವಿದ್ಯಾಲಯಕ್ಕೆ ಅಥವಾ ಇತರ ಸಂಶೋಧನಾ ಸಂಸ್ಥೆಗಳಿಗೆ ಭಾಗಶಃವಾಗಿಯಾಗಲಿ, ಪೂರ್ಣವಾಗಿಯಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢಪಡಿಸುತ್ತೇನೆ.

ಸ್ಥಳ : ಮಂಗಳೂರು

ದಿನಾಂಕ : 24. 12. 2014

ಶ್ರೀಮತಿ ಮಧುಮಾಲಾ ಕೆ.
(ಸಂಶೋಧನಾ ವಿದ್ಯಾರ್ಥಿನಿ)
ಸಹ ಪ್ರಾಧ್ಯಾಪಕರು
ಸ್ನಾತಕೋತ್ತರ ಸಮಾಜ ಕಾರ್ಯ ವಿಭಾಗ
ಆಳ್ವಾಸ್ ಕಾಲೇಜು
ಮೂಡಬಿದ್ರೆ – 574227

# ದೃಢೀಕರಣ ಪತ್ರ

ಹಂಪಿ ವಿಶ್ವವಿದ್ಯಾಲಯಕ್ಕೆ ಅರ್ಪಿಸುತ್ತಿರುವ **ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಶಕ್ತೀಕರಣ ಪ್ರಕ್ರಿಯೆ : ಒಂದು ಅಧ್ಯಯನ** – ಶೀರ್ಷಿಕೆಯ ಈ ಸಂಶೋಧನಾ ಮಹಾಪ್ರಬಂಧವನ್ನು ಶ್ರೀಮತಿ ಮಧುಮಾಲಾ ಕೆ. ಅವರು ನನ್ನ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ಸಿದ್ಧಪಡಿಸಿದ್ದಾರೆ. ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪಿ.ಹೆಚ್.ಡಿ ಪದವಿಗಾಗಿ ಮಂಗಳೂರಿನ ಕರ್ನಾಟಕ ಥಿಯೋಲೋಜಿಕಲ್ ಸೊಸೈಟಿ ಎಂಬ ಮಾನ್ಯತಾ ಕೇಂದ್ರದ ಮುಖಾಂತರ ಹಂಪಿಯ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಈ ಮೊದಲು ಈ ಮಹಾಪ್ರಬಂಧವನ್ನು ಭಾಗಶಃವಾಗಿಯಾಗಲಿ, ಪೂರ್ಣವಾಗಿಯಾಗಲಿ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೊಮೊಗಳಿಸಲು, ಯಾವ ಭಾಷೆಯಲ್ಲೂ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

ಡಾ। ವೈ ರವೀಂದ್ರನಾಥ್ ರಾವ್

**ದಿನಾಂಕ :** 24. 12. 2014

ಉಪ ಪ್ರಾಂಶುಪಾಲರು ಮತ್ತು ಮುಖ್ಯಸ್ಥರು
ಸಮಾಜ ಶಾಸ್ತ್ರ ವಿಭಾಗ
ಸೈಂಟ್ ಮೇರಿಸ್ ಸಿರಿಯನ್ ಕಾಲೇಜು
ಪಿ.ಬಿ.ನಂ.1, ಬ್ರಹ್ಮಾವರ, ಉಡುಪಿ ಜಿಲ್ಲೆ

Dr. Y. Ravindranath Rao,
M. ., Ph. D.,
Prof. & Head, Dept. of Sociology.
ST. MARY'S SYRIAN COLLEGE,
BRAHMAVAR - 576 213. (D. K.)

# ಕೃತಜ್ಞತೆಗಳು

ನನ್ನ ಅಧ್ಯಯನಕ್ಕೆ ಅಪಾರ ತಾಳ್ಮೆಯಿಂದ ಮಾರ್ಗದರ್ಶನ ನೀಡಿದ ಸಂಶೋಧನಾ ಮಾರ್ಗದರ್ಶಕರಾದ ಡಾ। ವೈ ರವೀಂದ್ರನಾಥ್‌ರಾವ್ ಉಪ ಪ್ರಾಂಶುಪಾಲರು ಮತ್ತು ಮುಖ್ಯಸ್ಥರು, ಸಮಾಜ ಶಾಸ್ತ್ರ ವಿಭಾಗ, ಸೈಂಟ್ ಮೇರೀಸ್ ಸಿರಿಯನ್ ಕಾಲೇಜು, ಬ್ರಹ್ಮಾವರ, ಇವರಿಗೆ,_ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟು ಹುರಿದುಂಬಿಸಿದ ಆಳ್ವಾಸ್ ಶಿಕ್ಷಣ ಪ್ರತಿಷ್ಠಾನದ ಅಧ್ಯಕ್ಷರಾದ ಡಾ।ಎಂ ಮೋಹನ್ ಆಳ್ವ ಮತ್ತು ಪ್ರತಿಷ್ಠಾನದ ಆಡಳಿತ ಮಂಡಳಿಯ ಎಲ್ಲಾ ಸದಸ್ಯರಿಗೆ, ಅಧ್ಯಯನಕ್ಕೆ ಸ್ಪೂರ್ತಿ ಹಾಗೂ ಸಲಹೆಗಳನ್ನು ನೀಡಿದ ಕಾಲೇಜಿನ ಪ್ರಾಂಶುಪಾಲರಾದ ಪ್ರೊ।ಕುರಿಯನ್ ಮತ್ತು ಶ್ರೀಮತಿ ಪ್ರೇಮ ಹಾಗೂ ನನ್ನ ಆತ್ಮೀಯ ಸಹೋದ್ಯೋಗಿಗಳಾದ ಪ್ರೊ।ಕೃಷ್ಣ ಮೂರ್ತಿ, ಪ್ರೊ।ಸಪ್ನಾ ಆಳ್ವ, ಪ್ರೊ।ಮೂಕಾಂಬಿಕ, ಪ್ರೊ।ಶ್ರೀದೇವಿ, ಶ್ರೀಮತಿ ಪವಿತ್ರ ಶ್ರೀಮತಿ ಸವಿತಾ ಇವರಿಗೆ,

ಧಾರವಾಡ, ಕರ್ನಾಟಕ ಯೂನಿವರ್ಸಿಟಿಯ ಸಮಾಜ ಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ।ಧ್ರುವ, ಎಂ.ಜಿ.ಎಂ ಕಾಲೇಜಿನ ಆರ್. ಆರ್. ಸಿ. ಯ ಸಂಶೋಧಕರಾದ ಡಾ।ಅಶೋಕ್ ಆಳ್ವ, ಸೈಂಟ್ ಅಲೋಶಿಯಸ್ ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾದ ಡಾ।ರಿಚರ್ಡ್ ಪಾಯ್ಸ್, ಕಸ್ತೂರ್ಬಾ ಮೆಡಿಕಲ್ ಕಾಲೇಜು ಮಂಗಳೂರು ಇಲ್ಲಿನ ಸಂಖ್ಯಾಶಾಸ್ತ್ರಜ್ಞ ಡಾ।ಎಂ ಎಸ್ ಕೋಟ್ಯಾನ್ ಇವರಿಗೆ, ಸಕಾಲದಲ್ಲಿ ಸೂಕ್ತ ಸಲಹೆಗಳನ್ನಿತ್ತ ಕರ್ನಾಟಕ ಥಿಯೋಲೋಜಿಕಲ್ ಸಂಶೋಧನಾ ಕೇಂದ್ರದ ಪ್ರೊ।ಎ.ವಿ.ನಾವಡ ಹಾಗೂ ನಿರ್ದೇಶಕರಾದ ಡಾ।ರತ್ನಾಕರ ಸದಾನಂದ ಹಾಗೂ ಡಾ। ಎಂ ಚಂದ್ರಪೂಜಾರಿ ಇವರಿಗೆ, ಸಂತ ಫಿಲೋಮಿನಾ ಕಾಲೇಜಿನ ಪ್ರೊಫೆಸರ್ ಆದ ಪೌಲ್ ಹೆರಾಲ್ಡ್ ರೋಡ್ರಿಗಸ್ ಮತ್ತು ಪ್ರೊಫೆಸರ್ ನೊರ್ಬರ್ಟ್ ಡಿಸೋಜ ಇವರಿಗೆ

ಈ ಕೆಳಗೆ ನಮೂದಿಸಿದ ಎಲ್ಲಾ ಗ್ರಂಥಾಲಯದ ಗ್ರಂಥಪಾಲಕರಿಗೂ ಮತ್ತು ಸಿಬ್ಬಂದಿ ವರ್ಗದವರಿಗೆ, ಮಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯ ಮಂಗಳ ಗಂಗೋತ್ರಿ,

ಆಳ್ವಾಸ್ ಕಾಲೇಜು – ಗ್ರಂಥಾಲಯ, ಮೂಡುಬಿದಿರೆ ನಗರ ಕೇಂದ್ರ ಗ್ರಂಥಾಲಯ – ಕರ್ನಾಟಕ ಥಿಯೋಲೋಜಿಕಲ್ ಕಾಲೇಜು ಗ್ರಂಥಾಲಯ, ಬಲ್ಮಠ, ಮಂಗಳೂರು ಜಿಲ್ಲಾ ಕೇಂದ್ರ ಗ್ರಂಥಾಲಯ. ಮೂಡಬಿದಿರೆ, ಗ್ರಂಥಾಲಯ ಸಮಗ್ರ ಗ್ರಾಮೀಣ ಆಶ್ರಮ

ಪೆರ್ನಾಲು ಹಾಗೂ ಎಲ್ಲಾ ಸಿಬ್ಬಂದಿ ವರ್ಗಕ್ಕೆ, ಗ್ರಂಥಾಲಯ, ಕವನ ಸಂಸ್ಥೆ – ಪಿರಿಯಾಪಟ್ಟಣ ಹಾಗೂ ಎಲ್ಲಾ ಸಿಬ್ಬಂದಿ ವರ್ಗಕ್ಕೆ, ಗ್ರಂಥಾಲಯ, ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ

ಗ್ರಂಥಾಲಯ, ಸೈಂಟ್ ಮೇರೀಸ್ ಸಿರಿಯನ್ ಕಾಲೇಜು ಬ್ರಹ್ಮಾವರ

ಐ.ಟಿ.ಡಿ.ಪಿ ಇಲಾಖೆ ಮಂಗಳೂರು,

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಳ್ತಂಗಡಿ.

ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಮಾಹಿತಿ ನೀಡಿದ ಎಲ್ಲಾ ಬುಡಕಟ್ಟು ಮಹಿಳೆಯರಿಗೆ, ಸಂಗಬೆಟ್ಟು ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀಯುತ ಪ್ರಭಾಕರ ಪ್ರಭು ಮತ್ತು ಸಿಬ್ಬಂದಿ ವರ್ಗಕ್ಕೆ,

ಎಡಪದವು ಗ್ರಾಮ ಪಂಚಾಯತ್ ಸದಸ್ಯೆ ಶ್ರೀಮತಿ ಮಾಲತಿ,

ಹೊಸಂಗಡಿ ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ಹರಿಪ್ರಸಾದ್ ,

ಸುಳ್ಯ ತಾಲೂಕು ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ವಿಮಲಾ ರಂಗಯ್ಯ,

ಬಿಲ್ಲವ ಸಂಘ, ಪುಂಜಾಲಕಟ್ಟೆಯ ಗೌರವ ಅಧ್ಯಕ್ಷರಾದ ಶ್ರೀಯುತ ರಮೇಶ್ ಪೂಜಾರಿ

ಎಂ.ಜಿ.ಎಂ ಕಾಲೇಜಿನ ಆರ್.ಆರ್.ಸಿಯ ತಾಂತ್ರಿಕ ತಜ್ಞ ಶ್ರೀಯುತ ಲಜ್ಜೇಂದ್ರ,

ಕ್ಷೇತ್ರ ಕಾರ್ಯದಲ್ಲಿ ಸಲಹೆ ನೀಡಿದ ಬಲ್ನಾಡು ದೇವಪ್ಪ ನಾಯ್ಕ , ಬಾಬು ನಾಯ್ಕ, (ಆಟೋ ಚಾಲಕರು) ನೆಲ್ಲಿ ವಸಂತನಾಯ್ಕ, ವಿಠಲ ನಾಯ್ಕ, ದರೆಗುಡ್ಡೆಯ ಶ್ರೀಮತಿ ಶಾಂತ, ಎಡಪದವು ಗ್ರಾಮದ ಶ್ರೀ ಗೋಪಾಲಗೌಡ, ಕು.ಪದ್ಮಾವತಿ ಗಂಜಿಮಠ, ಕರ್ಪೆಯ ಶಶಿಧರ ನಾಯ್ಕ, ಶ್ರೀಮತಿ ಹರಿಣಾಕ್ಷಿ ನಡ್ತಿಕಲ್ಲು, ಉಮೇಶ ಪುತ್ತೂರು, (ಆಟೋಚಾಲಕರು) ಕೆ.ಎನ್.ಗೌಡ, ಹಿರಿಯ ಸಂಯೋಜಕರು ಶ್ರೀರಾಮ್ ಚಿಟ್ ಫಂಡ್ಸ್, ಬೆಳ್ತಂಗಡಿ

ಶ್ರೀಮತಿ ಶಶಿಕಲಾ ಸಚ್ಚೇರಿ ಪೇಟೆ,  ಕೊರಗ ಒಕ್ಕೂಟ ಸಂಘಟನೆ ಅಧ್ಯಕ್ಷರು,

ಶ್ರೀಮತಿ ಮುತ್ತಮ್ಮ ಶಿಕ್ಷಕಿ ಕಟ್ಟ ಪಲ್ಕೆ ಅಂಗನವಾಡಿ ಬೆಳ್ತಂಗಡಿ,

ಸಮಾಜ ಕಾರ್ಯ ವಿಭಾಗದ ವಿದ್ಯಾರ್ಥಿಗಳಾದ ಅಕ್ಕರೆಯ ಪ್ರೀತಿ, ಕಿಶನ್, ಮನೋಜ್,

ರಾಜೇಶ್ ಕುಮಾರ್, ಸ್ವಪ್ನ, ಸಂಗೀತ, ಆತ್ಮಶ್ರೀ, ಮಧುಮತಿ, ಚಂದ್ರಕಾಂತಿ – ಇವರೆಲ್ಲರಿಗೆ

ಅಂದವಾದ ಬೆರಳಚ್ಚು ಮುದ್ರಣದಲ್ಲಿ ಸಹಕರಿಸಿದ ಶ್ರೀಮತಿ ಆರತಿ ಇವರಿಗೆ ಮತ್ತು ಅಂದವಾದ ನಕ್ಷೆಯನ್ನು ರಚಿಸಿ ಕೊಟ್ಟ ಶ್ರೀ ಮಹಾವೀರ್ ಇವರಿಗೆ,

ಸಂಶೋಧನಾ ಕಾರ್ಯದಲ್ಲಿ ಸಕಾಲದಲ್ಲಿ ಸಹಕರಿಸಿದ ಆತ್ಮೀಯರಾದ ಶ್ರೀಯುತ ಕಿಶನ್ ಎಕ್ಸಿಕ್ಯುಟಿವ್ ಸೇಲ್ಸ್, ಕೋನೆ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ,

ನನ್ನ ವೈಯಕ್ತಿಕ ಹಾಗೂ ವೃತ್ತಿ ಜೀವನದಲ್ಲಿ ಶಿಸ್ತು, ಕರ್ತವ್ಯ ನಿಷ್ಠೆ ಬೆಳೆಸಿ, ನನ್ನೆಲ್ಲಾ ಯಶಸ್ಸಿಗೆ ಕಾರಣಕರ್ತರಾದ ನನ್ನ ಪೂಜ್ಯ ತಂದೆ ನಿವೃತ್ತ ಪಂಚಾಯತ್ ವಿಸ್ತರಣಾಧಿಕಾರಿ ಶ್ರೀಯುತ ದಾಮೋದರ್.ಕೆ

ಅಧ್ಯಯನದ ಅವಧಿಯಲ್ಲಿ ನನ್ನೆಲ್ಲಾ ಪ್ರಯತ್ನಗಳಿಗೆ ಸ್ಪಂದಿಸಿದ ನನ್ನ ಬಾಳ ಸಂಗಾತಿ ಶ್ರೀ ಗೋಪಾಲ್, ಅಧ್ಯಯನದುದ್ದಕ್ಕೂ ಪ್ರೋತ್ಸಾಹಿಸಿದ ನನ್ನ ಸೋದರ, ಸೋದರಿ ಮತ್ತು ಕುಟುಂಬ ಸದಸ್ಯರಾದ ಶ್ರೀಮತಿ ಕುಶಲಾ ವಿಶ್ವನಾಥ್, ಶ್ರೀಮತಿ ರೂಪಕಲಾವಿಠಲ್, ಶ್ರೀಮತಿ ಪ್ರೇಮಾ ಪ್ರಶಾಂತ್, ಶ್ರೀಮತಿ ವಾಣಿಶ್ರೀದೇವರಾಜ್, ಶ್ರೀಮತಿ ಆಶಾ ಮತ್ತು ಶ್ರೀ ಪ್ರಸನ್ನ, ಕುಮಾರಿ ಪವಿತ್ರ ಹಾಗೂ ಅಧ್ಯಯನದ ಅವಧಿಯಲ್ಲಿ ನನ್ನ ಸಾಮಿಪ್ಯದ ಕೊರತೆಯನ್ನು ನಗುತ್ತಲೇ ಸಹಿಸಿ, ನನಗೆ ಪ್ರೋತ್ಸಾಹಿಸಿದ ನನ್ನ ಪುಟಾಣಿ ಕುಮಾರಿ ಭೂಮಿಕಾಳಿಗೆ

ಹಂಪಿ ವಿಶ್ವವಿದ್ಯಾಲಯ                                        ಶ್ರೀಮತಿ ಮಧುಮಾಲಾ ಕೆ

# ಪರಿವಿಡಿ

# ಅನುಬಂಧಗಳು

# ಅಧ್ಯಯನಕ್ಕೆ ಸಂಬಂಧಿಸಿದ ಕೋಷ್ಟಕಗಳ ಪಟ್ಟಿ

# ನಕ್ಷೆಯ ಪಟ್ಟಿ

# ಅಧ್ಯಾಯ – ಒಂದು

# ಪ್ರಸ್ತಾವನೆ

1.1 ಪ್ರಸ್ತಾವನೆ.

1.2 ಸಮಸ್ಯೆಯ ಹೇಳಿಕೆ

1.3 ಪರಿಕಲ್ಪನಾತ್ಮಕ ಮತ್ತು ತಾತ್ವಿಕ ಚೌಕಟ್ಟು

1.4 ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ ಮತ್ತು ವ್ಯಾಪ್ತಿ.

1.5 ಅಧ್ಯಯನದ ಮಾದರಿ ಮತ್ತು ಅಧ್ಯಯನಕ್ಕೆ ಬಳಸಿಕೊಂಡ ತಂತ್ರಗಳು

1.6 ಕ್ಷೇತ್ರ ಅಧ್ಯಯನದಲ್ಲಿ ಎದುರಾದ ಸಮಸ್ಯೆಗಳು

1.7 ಅಧ್ಯಯನದ ಮಿತಿಗಳು.

1.8 ಅಧ್ಯಯನದ ರೂಪುರೇಷೆಗಳು.

# ಅಧ್ಯಾಯ -ಒಂದು

## ಪ್ರಸ್ತಾವನೆ

**ಬುಡಕಟ್ಟು ಸಮುದಾಯ :** ಒಂದು ದೇಶದ ಮೂಲನಿವಾಸಿಗಳಿಗೆ **ಆದಿವಾಸಿಗಳು** ಎನ್ನುತ್ತೇವೆ. ಆದಿವಾಸಿಗಳು ಶ್ರೀಮಂತ ಸಂಸ್ಕೃತಿಯನ್ನು ಹೊಂದಿರುವುದಾದರೂ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದಿದ್ದು ಅರಣ್ಯ, ಗುಡ್ಡಗಾಡು, ಆಳವಾದ ಕಣಿವೆಗಳಲ್ಲಿ ವಾಸಿಸುತ್ತಿದ್ದು ಆರು ಖಂಡಗಳಲ್ಲಿಯೂ ಇವರು ಚದುರಿ ಹೋಗಿದ್ದಾರೆ. ಅಲೆಮಾರಿಗಳಾದ ಇವರು ತಮಗೂ ತಮ್ಮ ದನಕರುಗಳಿಗೂ ಆಹಾರ ಹುಡುಕಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ಜೀವನ ನಿರ್ವಹಣೆಗಾಗಿ ಗೆಡ್ಡೆ ಗೆಣಸು, ಕಾಯಿ, ಸೊಪ್ಪು, ಜೇನು ಮೊದಲಾದವುಗಳನ್ನು ಸಂಗ್ರಹಿಸುವುದು ಪ್ರಾಣಿಗಳನ್ನು ಬೇಟೆಯಾಡುವುದು ಸಾಮಾನ್ಯ.

ಸುಮಾರು 30,000 ವರ್ಷಗಳ ಹಿಂದೆ ಮಾನವ ಗುಂಪಾಗಿ ಬದುಕಿ ಗುಂಪಿನ ಹಿತಾಸಕ್ತಿಗಾಗಿ ಹೋರಾಡಿದ. ಇದರ ಫಲವಾಗಿ ಬುಡಕಟ್ಟುಗಳು ಉಗಮವಾಯಿತು. ಪ್ರತಿಯೊಂದು ಬುಡಕಟ್ಟು ಒಬ್ಬ ಪೂರ್ವಜನ ರಕ್ತ ಸಂಬಂಧಿಗಳಾಗಿದ್ದು ನೂರಾರು ಸಂಖ್ಯೆಯಲ್ಲಿರುತ್ತಿದ್ದು, ಅವರೆಲ್ಲ ಒಂದೇ ಗುಹೆಯಲ್ಲಿ ವಾಸವಾಗಿರುತ್ತಿದ್ದರು. ಪುರುಷರು ಬೇಟೆಯಾಡಿದರೆ ಮಹಿಳೆಯರು ಮಕ್ಕಳ ಲಾಲನೆ ಪಾಲನೆ ಮಾಡುತ್ತಿದ್ದು, ಕುಲದ ಹಿರಿಯರು ಮತ್ತು ಅನುಭವಿಗಳು ಬೇಟೆಯ ವಿಧಿ ವಿಧಾನಗಳನ್ನು ಹಂಚುತ್ತಿದ್ದರು. ಹೀಗೆ ಎಲ್ಲಾ ರಕ್ತ ಸಂಬಂಧಿಗಳು ಜೊತೆಗೂಡಿ ಗುಂಪಿನಲ್ಲಿಯೇ ಕೂಡಿ ಕೆಲಸ ಮಾಡುವುದರೊಂದಿಗೆ ಎಲ್ಲರು ಒಟ್ಟಾಗಿ ಆಸ್ತಿಯನ್ನು ಹೊಂದಿ ಅನುಭವಿಸುವವರಿಗೆ ಕುಲದವರು ಅಥವಾ ಕುಲ ಸಮುದಾಯದವರೆಂದು ಕರೆಯುವರು. ಗುಂಪು ಜೀವನಕ್ಕಿಂತ ರಕ್ತ ಸಂಬಂಧದ ಕುಲದ ಸಂಘಟನೆ ಹೆಚ್ಚಿನ ಮಹತ್ವದ್ದಾಗಿತ್ತು. ಮತ್ತು ಅಭಿವೃದ್ಧಿ ಪೂರಕವಾಗಿದ್ದು ಈ ಜೀವನ ಕ್ರಮಕ್ಕೆ ಆದಿವಾಸಿ ಜೀವನ ಕ್ರಮ ಎನ್ನಲಾಯಿತು.

ಯುರೋಪಿಯನ್ನರು ಭಾರತಕ್ಕೆ ಬರುವ ಮೊದಲು ಆರ್ಯರು. ಅವರಿಗಿಂತ ಮೊದಲು ದ್ರಾವಿಡರು. ದ್ರಾವಿಡರನ್ನು ಭಾರತದ ಮೂಲ ನಿವಾಸಿಗಳೆಂದು ಕರೆಯಬಹುದಾಗಿದೆ. ಇವರಿಗೂ ಮೊದಲು ಅಥವಾ ಇವರೊಂದಿಗಿದ್ದವರನ್ನು **"ಕೋಲರು" "ನೀಗ್ರೋಯಿಡ್"** ಜನರೆಂದು ಗುರುತಿಸಲಾಗಿತ್ತು. ಪ್ರಧಾನವಾಗಿ ಅಲೆಮಾರಿಗಳು ಆಹಾರ ಮತ್ತು ವಸತಿಗಾಗಿ

ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗುತ್ತಿದ್ದವರು. ಪಂಗಡಗಳಲ್ಲಿ ವಾಸಿಸುತ್ತಿದ್ದರು. ಹೊಟ್ಟೆ ಪಾಡಿಗಾಗಿ ಬೇಟೆಯನ್ನು, ಅರಣ್ಯಗಳಲ್ಲಿ ನೈಸರ್ಗಿಕವಾಗಿ ದೊರೆಯುವ ಗೆಡ್ಡೆ ಗೆಣಸುಗಳನ್ನು ತಮ್ಮ ಆಹಾರಕ್ಕಾಗಿ ಅವಲಂಬಿಸಿದವರು.

ತರುವಾಯ ಪಶುಪಾಲನೆ ಮತ್ತು ಇದರ ಜೊತೆಗೆ ಬೇಸಾಯವನ್ನು ಮಾಡುವುದನ್ನು ಕೈಗೊಂಡು ಒಂದು ಕಡೆ ನೆಲೆ ನಿಂತರು. ಮೊದಲಿಗೆ ಅನೇಕ ಸಮಸ್ಯೆಗಳು ಹಾಗೂ ಸಂಘರ್ಷಗಳನ್ನು ಎದುರಿಸಿ ಆದಿವಾಸಿಗಳು ಬದುಕುತ್ತಿದ್ದರು. ಕೆಲವು ಬಾರಿ ಸಾವು ನೋವುಗಳನ್ನು ಎದುರಿಸಲಾಗದೆ ತಮ್ಮ ಹಟ್ಟಿಗಳನ್ನು ತೊರೆದು ಅರಣ್ಯ ಅಥವಾ ಕಾಡುಗಳನ್ನು ಸೇರುತ್ತಿದ್ದರು. ಇಂಥವರನ್ನು ಆದಿವಾಸಿಗಳು, ಸಂಚಾರಿ ಜನಾಂಗ, ಗಿರಿಜನರು ಅರಣ್ಯವಾಸಿಗಳು ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಇವರು ಬೇಟೆ, ಮೀನು ಹಿಡಿಯುವುದು, ಕೂಲಿ ಕಾರ್ಮಿಕ, ಕೃಷಿ ಕಾರ್ಮಿಕರಾಗಿ ಹಾಗೂ ಸರಳ ರೀತಿಯ ಬೇಸಾಯ ಮಾಡಿ ಜೀವಿಸುತ್ತಿದ್ದಾರೆ.

ಆದಿವಾಸಿ ಎಂದರೆ ಭಾರತದ ಮೂಲನಿವಾಸಿಗಳು ಎಂದು ಅರ್ಥೈಸಬಹುದಾಗಿದೆ. ಅವರಿಗೆ ಪ್ರತ್ಯೇಕವಾದ ಭಾಷೆ, ಸಾಮಾಜಿಕ ಆಚರಣೆಗಳಿದ್ದು ಆಫ್ರಿಕಾ ಮತ್ತು ಅಮೇರಿಕಾದ ಆದಿವಾಸಿಗಳಿಗೆ ಭಾರತದ ಆದಿವಾಸಿಗಳನ್ನು ಹೋಲಿಸಬಹುದಾಗಿದೆ. ಇವರ ಕಸುಬುಗಳು ಜನರು ವಾಸಿಸುವ ಪರಿಸರವನ್ನು ಅವಲಂಬಿಸಿದೆ. ಆದಿವಾಸಿಗಳು ಭಾರತದಾದ್ಯಂತ ಚದುರಿದ್ದು ಜೈವಿಕ, ಭೌಗೋಳಿಕ ಮತ್ತು ಸಾಂಸ್ಕೃತಿಕ ಭಿನ್ನತೆಯನ್ನು ನಾವು ಗುರುತಿಸಬಹುದಾಗಿದೆ. ಬುಡಕಟ್ಟು ಎನ್ನುವುದಕ್ಕೆ ಪ್ರತ್ಯೇಕ ವ್ಯಾಖ್ಯೆಗಳಿಲ್ಲ. ಒಂದು ನಿರ್ದಿಷ್ಟ ಪ್ರದೇಶದಲ್ಲಿ ಪ್ರತ್ಯೇಕವಾಗಿ ತಮ್ಮದೇ ಭಾಷೆ, ಆಚಾರ, ವಿಚಾರಗಳೊಂದಿಗೆ ಬದುಕುವವರು. ಸಮಾಜದ ಸಾಮಾನ್ಯ ಸಂಸ್ಕೃತಿಯಿಂದ ಭಿನ್ನವಾದ ಸಂಸ್ಕೃತಿಯನ್ನು ನಾವಿಲ್ಲಿ ಕಾಣಬಹುದು. "ಸಮುದಾಯ ಕಾಳಜಿ ಮತ್ತು ನಾವು ಎಂಬ ಭಾವನೆ"ಬುಡಕಟ್ಟು ಜನಾಂಗದಲ್ಲಿ ದಟ್ಟವಾಗಿರುತ್ತದೆ.

**'ಬುಡಕಟ್ಟು'** ಎಂಬ ಪದವನ್ನು ಸಮಾಜ ಶಾಸ್ತ್ರಜ್ಞರು ಮತ್ತು ಮಾನವ ಶಾಸ್ತ್ರಜ್ಞರು ಹಾಗೂ ಇತಿಹಾಸಕಾರರು ನಾನಾ ಅರ್ಥದಲ್ಲಿ ಬಳಸಿದ್ದಾರೆ. ಕಿಟೆಲ್ಲರು ತಮ್ಮ ಅರ್ಥ ಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ **'ಕುಟುಂಬ' ಹಾಗೂ 'ಕುಲ'** ಎಂಬ ಅರ್ಥ ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯ **'ಟ್ರೈಬ್'** ಎಂಬ ಪದಕ್ಕೆ ಸಮನಾರ್ಥಕವಾಗಿ ಬಳಸಲಾಗುತ್ತದೆ. ಇದು ಲ್ಯಾಟಿನ್ ಭಾಷೆಯ **'ಟ್ರೈಬಸ್'** ಎಂಬ ಪದದಿಂದ ಉಗಮವಾಗಿದೆ.

ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತ ಸಂಬಂಧಿಯ ಕುಲಗಳು ಆಧಾರ ಸ್ತಂಭಗಳಾಗಿರುವುದರಿಂದ ಕುಟುಂಬ ಹಾಗೂ ರಕ್ತ ಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ '**ಬುಡಕಟ್ಟು**' ಎಂಬ ಪದ ಬಳಕೆಯಾಗಿರುವುದು ಸೂಕ್ತವಾಗಿದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ, ಪ್ರಾಚೀನ ಜನಾಂಗಗಳು, ಅರಣ್ಯವಾಸಿಗಳು ಎಂಬ ಹೆಸರಿನಿಂದಲೂ ಕರೆಯಲಾಗುತ್ತದೆ. "ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ, ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದು ಲಂಡನ್ನಿನ ರಾಯಲ್ ಆಂತ್ರೊ ಪಾಲೋಜಿಕಲ್ ಇನ್ಸಿಟ್ಯೂಟ್ ವ್ಯಾಖ್ಯಾನಿಸಿದೆ.

ವೈಜ್ಞಾನಿಕ ದೃಷ್ಟಿಯಲ್ಲಿ **"ಬುಡಕಟ್ಟು"** ಎಂಬ ಪದಕ್ಕೆ ಅನೇಕ ವಂಶಾನುಗತ ಲಕ್ಷಣಗಳನ್ನು ಸಮಾನವಾಗಿ ಪಡೆದಿರುವ ಜನರ ಗುಂಪು ಎಂದು ವಿದ್ವಾಂಸರು ಅರ್ಥ ನಿರೂಪಿಸಿದ್ದಾರೆ. ಆದರೆ ಬುಡಕಟ್ಟು ಎಂಬ ಪದವು ಜೀವಶಾಸ್ತ್ರಕ್ಕೆ ಮಾತ್ರ ಸೀಮಿತವಾಗಿದೆಯೆಂದು ಮಾನವ ಶಾಸ್ತ್ರಜ್ಞರ ಕಲ್ಪನೆಯಾಗಿದೆ. ಮಾನವ ಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ವಂಶಾನುಗತವಾಗಿ ಸಾಗಿ ಬಂದಿರುವ ದೈಹಿಕ ಲಕ್ಷಣಗಳನ್ನು ಸಮಾನವಾಗಿ ಪಡೆದಿರುವ ಜನರ ಗುಂಪು **"ಬುಡಕಟ್ಟು"** ಎನಿಸಿಕೊಳ್ಳುತ್ತದೆ. ಒಂದೇ ವಂಶಾನುಕ್ರಮದಿಂದ ಸಂಬಂಧ ಹೊಂದಿ, ಒಂದೇ ವಿಧವಾದ ದೈಹಿಕ ಲಕ್ಷಣಗಳಿಂದ ಕೂಡಿ, ಒಂದು ಭೌಗೋಳಿಕ ಪ್ರದೇಶದಲ್ಲಿ ವಾಸಿಸುವ ಜನರ ಗುಂಪಿಗೆ **"ಬುಡಕಟ್ಟು"** ಎಂದು ಹೆಸರು.

ಸಾಮಾನ್ಯವಾಗಿ ಮಾನವ ಬುಡಕಟ್ಟುಗಳನ್ನು ತಲೆಯ ಆಕಾರ ಮತ್ತು ಗಾತ್ರ, ಚರ್ಮದ ಸ್ವಭಾವ ಮತ್ತು ಬಣ್ಣ, ಕೂದಲಿನ ಬಣ್ಣ ಮತ್ತು ಲಕ್ಷಣದ ಆಧಾರದ ಮೇಲೆ ಗುರುತಿಸುತ್ತಾರೆ. ಇತ್ತೀಚೆಗೆ ದೇಹ ಸಂಬಂಧವಾದ ರಸಾಯನ ಶಾಸ್ತ್ರದಲ್ಲಿ ನೆತ್ತರ ವರ್ಗ, (ಬ್ಲಡ್ ಗ್ರೂಪ್) ಜೀವದ್ರವ್ಯ ಪರಿಣಾಮ (ಮೆಟಬಾಲಿಸಂ) ಮೊದಲಾವುಗಳ ಬಗ್ಗೆ ಹೊಸತಾಗಿ ಕಂಡು ಹಿಡಿದಿರುವ ವ್ಯತ್ಯಾಸಗಳು ಬುಡಕಟ್ಟಿನ ಬಗ್ಗೆ ಹೊಸ ಕಲ್ಪನೆಗಳನ್ನು ರೂಢಿಸುತ್ತವೆ. ಗ್ರೀಕ್ ಮತ್ತು ರೋಮನ್ ಲೇಖಕರು ಲ್ಯಾಟಿಯಂ ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟಿನವರಿಗೆ ಪ್ರಪ್ರಥಮವಾಗಿ **"ಟ್ರೈಬ್"** ಎಂಬ ಪದ ಬಳಸಿರುವುದು ವೇದ್ಯವಾಗುತ್ತದೆ. ಸಮಾಜ ರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತ ಸಂಬಂಧಿಯ ಕುಲಗಳ ಕೂಟಕ್ಕೆ ಕನ್ನಡದಲ್ಲಿ **"ಬುಡಕಟ್ಟು"** ಎಂಬ ಪದ ಬಳಸಿರುವುದು ಸಮಂಜಸವಾಗಿದೆ.

ಭಾರತದ ಪ್ರಸಿದ್ಧ ಮಾನವ ವಿಜ್ಞಾನಿ ಹಾಗೂ ಸಮಾಜ ಶಾಸ್ತ್ರಜ್ಞರಾದ ಜಿ.ಎಸ್ ಘುರ್ಯೆರವರು ಬುಡಕಟ್ಟು ಜನರನ್ನು **ಹಿಂದುಳಿದ ಹಿಂದುಗಳು** ಎಂದಿದ್ದಾರೆ. ವೆರಿಯರ್ ಎಲ್ವಿನ್‌ರವರು **ಆದಿವಾಸಿಗಳು ಅಥವಾ ಮೂಲನಿವಾಸಿಗಳೆಂದು** ಕರೆದಿದ್ದಾರೆ. ಆದಿವಾಸಿ ಸಮುದಾಯದ ಸಂಸ್ಕೃತಿಗಳ ಅಧ್ಯಯನ ಹಾಗೂ ವೈಜ್ಞಾನಿಕ ಸಮೀಕ್ಷೆ ನಡೆಸಿ ಬುಡಕಟ್ಟು ಪದದ ಅರ್ಥವನ್ನು ಅತಿ ಸರಳವಾಗಿ ಸುಪ್ರಸಿದ್ಧ ಮಾನವ ಶಾಸ್ತ್ರಜ್ಞರಾದ ಎ. ಎಲ್. ಕ್ರೋಬರ್‌ರವರು ಈ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. "ಬುಡಕಟ್ಟು ಸಮುದಾಯವು ಚಿಕ್ಕದಾಗಿ, ಒಂಟಿಯಾಗಿ, ಸಾಂಸ್ಕೃತಿಕವಾದ ಸಂಬಂಧಗಳನ್ನು ಅಳವಡಿಸಿಕೊಂಡು ಸುವ್ಯವಸ್ಥಿತವಾಗಿ ರೂಪಿಸಿಕೊಂಡಿರುವ ಒಂದು ಸಮಾಜ" ಎಂದಿದ್ದಾರೆ. ಡಿ. ಎನ್. ಮಜುಮ್‌ದಾರರ ಪ್ರಕಾರ "ಬುಡಕಟ್ಟು ಅಥವಾ ಆದಿವಾಸಿಗಳೆಂದರೆ ಹಲವಾರು ನಿರ್ದಿಷ್ಟ ಭೂ ಪ್ರದೇಶದಲ್ಲಿ ನೆಲೆಸಿರುವ, ವಿಶಿಷ್ಟ ಭಾಷೆಯನ್ನಾಡುವ, ಪರಸ್ಪರ ಸಹಕಾರ ಹಾಗೂ ತಿಳುವಳಿಕೆ ಮೇಲೆ ನೆಲೆಸಿರುವ ಜನ ಸಮುದಾಯಗಳೇ **ಆದಿವಾಸಿಗಳು ಅಥವಾ ಬುಡಕಟ್ಟು** ಎಂಬುದಾಗಿದೆ.

ಮಾನವ ಶಾಸ್ತ್ರಜ್ಞರು ಇಡೀ ಮಾನವ ಕುಲವನ್ನು ದೈಹಿಕ ಲಕ್ಷಣಗಳ ಮೇಲೆ ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಅದನ್ನು ಮೂರು ದೊಡ್ಡ ಬುಡಕಟ್ಟುಗಳಾಗಿ ವಿಂಗಡಿಸಿದ್ದಾರೆ. ಅವು ಯಾವುವೆಂದರೆ **ಕಕೇಶಿಯನ್, ಮಂಗೋಲಿಯನ್ ಮತ್ತು ನೀಗ್ರೋ**. ಈ ಪಂಗಡಗಳನ್ನು ಕ್ರಮವಾಗಿ ಬಿಳಿಯರು, ಹಳದಿಯರು, ಮತ್ತು ಕಪ್ಪು ಜನರು ಎಂದು ಕರೆಯುತ್ತಾರೆ.

1) **ಕಕೇಶಿಯನ್(ಕಾಕೆಸೈಡ್)**: ಬುಡಕಟ್ಟಿಗೆ ಸೇರಿದ ಜನರು ಶ್ವೇತವರ್ಣಿಯರು. ಈ ಬುಡಕಟ್ಟಿನ ಜನರು ಯುರೋಪ್ ಉತ್ತರ ಹಾಗೂ ದಕ್ಷಿಣ ಅಮೇರಿಕಾ, ಇರಾನ್, ಬಲೂಚಿಸ್ಥಾನ, ಉತ್ತರ ಭಾರತ ಮುಂತಾದ ಕಡೆಗಳಲ್ಲಿ ಕಂಡು ಬರುತ್ತಾರೆ. ಕಕೇಶಿಯನ್ ಬುಡಕಟ್ಟಿನಲ್ಲಿ ನಾರ್ಡಿಕ್ ಅಲ್‌ಫೈನ್, ಮೆಡಿಟರೇನಿಯನ್ ಮತ್ತು ಹಿಂದು ಎಂಬ ನಾಲ್ಕು ಉಪಪಂಗಡಗಳಿವೆ.

2) **ಮಂಗೋಲಿಯನ್(ಮಾಂಗೋಲ್ಯಾಡ್)**: ಬುಡಕಟ್ಟಿಗೆ ಸೇರಿದ ಜನ ಪೀತವರ್ಣಿಯರು. ಈ ಬುಡಕಟ್ಟಿನ ಜನರು ಏಷ್ಯಾಖಂಡದ ಪೂರ್ವಭಾಗದಲ್ಲಿಯೂ, ಮಲಯ ಪರ್ಯಾಯ ದ್ವೀಪದಲ್ಲಿಯೂ ಮತ್ತು ಅಮೆರಿಕಾದಲ್ಲಿಯೂ ಇದ್ದಾರೆ. ಈ ಬುಡಕಟ್ಟಿನಲ್ಲಿ ಮಂಗೋಲಿಯನ್, ಮಲೇಶಿಯನ್ ಮತ್ತು ಅಮೇರಿಕನ್ ಇಂಡಿಯನ್ ಎಂಬ ಮೂರು ಉಪ ಪಂಗಡಗಳಿವೆ.

3) **ನೀಗ್ರೋ(ನೀಗ್ರೋ ಲ್ಯಾಡ್)**: ಬುಡಕಟ್ಟಿಗೆ ಸೇರಿದ ಜನರು, ಆಫ್ರಿಕಾ, ಆಸ್ಟ್ರೇಲಿಯಾ ಮತ್ತು ಭಾರತ ಈ ಭೂಭಾಗಗಳಲ್ಲಿದ್ದಾರೆ. ಈ ಬುಡಕಟ್ಟಿನಲ್ಲಿ ಮಲೇಶಿಯನ್ನರು, ನೀಗ್ರಿಟೊ ಮತ್ತು ಕರಿಯ ಬಣ್ಣದ ಕುಳ್ಳರು ಎಂಬ ಮೂರು ಉಪಪಂಗಡಗಳಿವೆ.

ಪ್ರತ್ಯೇಕ ಸಂಸ್ಕೃತಿ, ರಕ್ತ ಸಂಬಂಧದ ಅತಿಯಾದ ಅವಲಂಬನೆ, ಬೇರೆಯವರನ್ನು ಸಂದೇಹದಿಂದ ನೋಡುವ ದೃಷ್ಟಿ, ದೈವದ ವಿಶಿಷ್ಟ ಕಲ್ಪನೆ, ಭಕ್ತಿ, ಅತಿಯಾದ ಪಾವಿತ್ರ್ಯ, ಪ್ರತ್ಯೇಕ ಭಾಷೆ ಹಾಗೂ ಕಾಡಿನಲ್ಲಿ ಬದುಕು ಇವು ಬುಡಕಟ್ಟು ಜನರ ಮುಖ್ಯ ಲಕ್ಷಣಗಳಾಗಿವೆ.

ಬುಡಕಟ್ಟಿನ ರಕ್ತ ಸಂಬಂಧದ ಮೂಲ ಕೊಂಡಿಯ **ಬಳಿ ಅಥವಾ ಕುಲ**, ಇವು ಬುಡಕಟ್ಟಿನ ಸಾಂಸ್ಕೃತಿಕ ಚರಿತ್ರೆ ಕಟ್ಟಿಕೊಡುವಲ್ಲಿಯೂ ಸಹಕಾರಿಯಾಗುವುವು. ಇವುಗಳ ಆಧಾರದ ಮೇಲೆ ಬುಡಕಟ್ಟಿನ ಮೂಲ ಪತ್ತೆ ಹಚ್ಚಬಹುದಾಗಿದೆ. ಸಾಂಸ್ಕೃತಿಕ ವೀರರು, ಪರಿಸರ, ಪ್ರಾಣಿ, ಪಕ್ಷಿ, ಗಿಡ, ಮರ, ಹೂ ಬಳ್ಳಿಗಳು, ಸ್ಥಳ, ಪ್ರದೇಶ, ಕಾಯಕ ಇತ್ಯಾದಿಗಳು ಬುಡಕಟ್ಟಿನ ಬಳಿ ಅಥವಾ ಕುಲಕ್ಕೆ ಸಂಬಂಧಿಸಿದ್ದಾಗಿರಬಹುದು. ಹಾಗೆಂದರೆ ಒಂದರ್ಥದಲ್ಲಿ ಬುಡಕಟ್ಟುಗಳ ಮೂಲ ಕುರುಹು ಎಂದರ್ಥ. ಇವು ರಕ್ತ ಸಂಬಂಧಿಗಳಲ್ಲಿ ಆಚರಣಾತ್ಮಕವಾಗಿ ತಲೆತಲಾಂತರದಿಂದ ಮುಂದುವರಿಯುತ್ತದೆ.

ಸಾಮಾನ್ಯವಾಗಿ ಬುಡಕಟ್ಟಿನವರು ಸರ್ವಚೇತನವಾದಿಗಳು. ಆದರೆ ಇತ್ತೀಚೆಗೆ ಇವರು ಗ್ರಾಮೀಣ, ನಗರ ಪ್ರದೇಶಗಳೊಂದಿಗೆ ಬೆರೆಯುವುದರಿಂದ ಅಲ್ಲಿಯವರ ಧಾರ್ಮಿಕ ಆಚರಣೆಗಳು ಮತ್ತು ದೈವಗಳು ಇವರ ಮೇಲೆ ಪ್ರಭಾವ ಬೀರುತ್ತದೆ. ಪ್ರಕೃತಿಯ ಕ್ರೂರವಾದ ಪ್ರಾಣಿಗಳನ್ನು ದೈವವೆಂದು ನಂಬಿ ಆರಾಧಿಸುತ್ತ ಬಂದವರು.

ಬುಡಕಟ್ಟು ಜನರು ತಮ್ಮದೆ ವಿಧಿ ವಿಧಾನಗಳಿಂದ ಹಬ್ಬಗಳನ್ನು ಆಚರಿಸುವರು. ಆಚರಿಸಲ್ಪಡುತ್ತಿರುವ ಎಲ್ಲ ಹಬ್ಬಗಳ ಹುಟ್ಟಿಗೆ ಬುಡಕಟ್ಟು ಧರ್ಮ, ನಂಬಿಕೆಗಳೇ ಕಾರಣ. ಕಾಲಾಂತರದಲ್ಲಿ ಬಹು ಸಂಸ್ಕೃತಿಯ ಜನರಿಂದ ಹಬ್ಬಾಚರಣೆಗಳು ಮಾರ್ಪಾಡು ಹೊಂದುತ್ತ ಬುಡಕಟ್ಟಿನಿಂದ ವಿಮುಖಗೊಂಡವು. ಆದರೂ ಅನೇಕ ಹಬ್ಬಾಚರಣೆಗಳು ಇನ್ನೂ ಬುಡಕಟ್ಟು ಮಾದರಿಯಲ್ಲೇ ಮುಂದುವರಿಯುತ್ತಿವೆ. ಬೇಟೆ, ಪಶುಪಾಲನೆ, ಮೀನುಗಾರಿಕೆ, ಕೃಷಿ ಸಂಬಂಧಿ ಹಬ್ಬಾಚರಣೆಗಳು ತಮ್ಮ ಸಂಸ್ಕೃತಿಯ ಇತಿಹಾಸವನ್ನು ತೆರೆದಿಡುತ್ತವೆ.

ಬೇಟೆ, ಆಹಾರ ಸಂಗ್ರಹಣೆ, ಪಶುಪಾಲನೆ, ಕೃಷಿ ಇತ್ಯಾದಿಗಳು ಬುಡಕಟ್ಟು ಸಮುದಾಯದ ಕಾಯಕಗಳು. ಈ ಹಿನ್ನಲೆಯಲ್ಲಿ ಬೆಳೆಯುವುದನ್ನೇ ಬುಡಕಟ್ಟಿನವರು ಸೇವಿಸುತ್ತಾರೆ. ಇಂದು ಬುಡಕಟ್ಟು ಜನರಿಗೆ ಆದಾಯದ ಕೊರತೆಯಿಂದಾಗಿ ಪೌಷ್ಟಿಕ

ಆಹಾರದ ಕೊರತೆ ಉಂಟಾಗಿದೆ. ಬೇಟೆಯ ಕೊರತೆಯಿಂದಾಗಿ ಸಸ್ಯಾಹಾರ ದಿನನಿತ್ಯದ ಆಹಾರವಾದರೆ, ಮಾಂಸಾಹಾರ ಸಾಂದರ್ಭಿಕ ಆಹಾರವಾಗಿ ಮಾರ್ಪಟ್ಟಿದೆ.

ಬುಡಕಟ್ಟು ಸಮುದಾಯದ ಜನರ ಶವ ಸಂಸ್ಕಾರ ಪದ್ಧತಿಯಲ್ಲೂ ಬದಲಾವಣೆಗಳಾಗುತ್ತಿವೆ. ದ್ರಾವಿಡರಲ್ಲಿ ಶವವನ್ನು ಹೂಳುತ್ತಾರೆ. ಆದರೆ ಹಲವು ಬುಡಕಟ್ಟುಗಳ ಮೇಲೆ ವೈಷ್ಣವರ ಪ್ರಭಾವ ಬೀರಿ ಶವವನ್ನು ಸುಡುವುದು ರೂಢಿಸಿಕೊಂಡರು.

ಸಂಸ್ಕೃತೀಕರಣ, ನಗರೀಕರಣ, ಔದ್ಯೋಗಿಕರಣ, ಪಾಶ್ಚಾತೀಕರಣ ಇತ್ಯಾದಿಗಳು ಬುಡಕಟ್ಟು ಜನರ ಮೇಲೆ ತನ್ನದೆ ಪ್ರಭಾವ ಬೀರಿ ಬುಡಕಟ್ಟುಗಳನ್ನು ಸ್ಥಿತ್ಯಂತರಗೊಳಸುತ್ತಿವೆ. ಕಸುಬು, ಊಟೋಪಚಾರ, ಭಾಷೆ, ಉಡುಗೆ– ತೊಡುಗೆ ಇತ್ಯಾದಿಗಳು ಬುಡಕಟ್ಟು ಬದುಕಿನಲ್ಲಿ ಬದಲಾವಣೆ ತರುತ್ತಿದೆ. ಸಂಸ್ಕೃತಿ, ಸಮಾಜರಚನೆ ಸಾಮಾಜಿಕ ಜವಾಬ್ದಾರಿಗಳು, ಲೋಕರೂಢಿ, ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳಲ್ಲಿಯೂ ಬದಲಾವಣೆಯ ಅಲೆಗಳು ಇಂದು ಅನಿವಾರ್ಯವಾಗಿವೆ.

ಆದುದರಿಂದ ಯಾವ ಜನ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸುಖವಾಗಿ ಬದುಕಲು ಬಯಸುತ್ತಿತ್ತೊ, ಬಯಸುವುದೋ, ಹಾಗೂ ಪ್ರಕೃತಿ ಜನ್ಯ ಉತ್ಪನ್ನಗಳನ್ನೇ ಅವಲಂಬಿಸಿರುವುದೋ, ತನ್ನದೇ ಆದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯ ಹೊಂದಿ, ಆ ರೀತಿಯಲ್ಲೇ ಜೀವನ ನಡೆಸುವುದೋ ಆ ಜೀವನಕ್ಕೆ ಆದಿವಾಸಿ ಅಥವಾ ಬುಡಕಟ್ಟು ಎಂದು ಕರೆಯಬಹುದು.

ಭಾರತವು ಜಗತ್ತಿನ ಅತೀ ದೊಡ್ಡ ಎರಡನೇ ಬುಡಕಟ್ಟು ಜನಸಂಖ್ಯೆಯಿರುವ ದೇಶವಾಗಿದೆ. ಮೊದಲನೇ ಸ್ಥಾನದಲ್ಲಿ ಆಫ್ರಿಕಾ ಇದೆ. ಭಾರತದಲ್ಲಿ ಸುಮಾರು ೮೦೦ರಷ್ಟು ಬುಡಕಟ್ಟುಗಳದ್ದು, ಪ್ರತೀ ಬುಡಕಟ್ಟುಗಳೂ ತಮ್ಮದೇ ಆದ ವೈವಿಧ್ಯಮಯ ಬದುಕಿನೊಂದಿಗೆ ಜೀವಿಸುತ್ತವೆ. ೨೦೦1ರ ಜನಗಣತಿಯಂತೆ ಭಾರತದಲ್ಲಿ ಬುಡಕಟ್ಟು ಜನಸಂಖ್ಯೆ ೨.5% (೮4 ಮಿಲಿಯನ್) ಇದ್ದು ಪ್ರತ್ಯೇಕತೆಯಿಂದಾಗಿ ಇವರು ಮುಖ್ಯವಾಹಿನಿಯಿಂದ ದೂರವಿರುವುದರಿಂದ ಇವರನ್ನು ಪ್ರಾಚೀನ ಬುಡಕಟ್ಟು ಸಮುದಾಯ (**ಪ್ರಿಮಿಟಿವ್ ಟ್ರೈಬ್**) ಎಂದು ಕರೆಯಲಾಯಿತು. ಬುಡಕಟ್ಟು ಜನಾಂಗದಲ್ಲಿಯೇ ಮತ್ತೆ ಹಿಂದುಳಿದವರನ್ನು ಪಿ.ಟಿ.ಜಿ (Primitive Tribal Group) ಎಂದು ವರ್ಗೀಕರಿಸಲಾಗಿದೆ. ಭಾರತದಲ್ಲಿ 75ರಷ್ಟು ಬುಡಕಟ್ಟು ಜನಾಂಗಗಳನ್ನು ಈ ವರ್ಗಕ್ಕೆ ಸೇರಿಸಲಾಗಿದೆ.

ಭಾರತದ ಸಂವಿಧಾನ ಪರಿಚ್ಛೇದ 342ರ ಪ್ರಕಾರ ಸಂವಿಧಾನವು ಬುಡಕಟ್ಟು ಜನರನ್ನು **'ಪರಿಶಿಷ್ಟ ಪಂಗಡ'** ಎಂದು ಗುರುತಿಸಿದ್ದು ಭಾರತದಲ್ಲಿ 636 ಗಿರಿಜನ ಪಂಗಡಗಳಿವೆ. ಇದರಲ್ಲಿ ಒಟ್ಟು 1,707,748 ಮಹಿಳೆಯರು ಮತ್ತು 1,756,238 ಪುರುಷರು ಇದ್ದು 1,000ಕ್ಕೆ 1991 ರಲ್ಲಿ 961 ಇದ್ದ ಮಹಿಳೆಯ ಸಂಖ್ಯೆ 2001ಕ್ಕೆ 972ಕ್ಕೆ ಹೆಚ್ಚಿದೆ. 1991ರ ಪ್ರಕಾರ ಬುಡಕಟ್ಟು ಸಾಕ್ಷರತೆ 36% ಇದ್ದು 2001ಕ್ಕೆ 48.3% ಹೆಚ್ಚಿರುವುದು ಗಮನಾರ್ಹವಾಗಿದೆ. ಕರ್ನಾಟಕದಲ್ಲಿ 49 ಬುಡಕಟ್ಟುಗಳಿದ್ದು ಇದರ ಜನಸಂಖ್ಯೆ 3,463,986 ಎಂದು ಅಂದಾಜಿಸಲಾಗಿದೆ.(6.6%)

ಪರಿಶಿಷ್ಟ ಜನಾಂಗಗಳ ಒಟ್ಟು ಸಂಖ್ಯೆ ಬಹಳಷ್ಟಿದ್ದರೂ ಅವುಗಳಲ್ಲಿ ಏಳು ಪ್ರಧಾನ ಬುಡಕಟ್ಟುಗಳೆಂದರೆ ಗೊಂಡರು, ಸಂತಾಲರು, ಬಿಲ್ಲರು, ಒರಾಯನ್ನರು, ಖೊಂಡರು ಮುಂಡರು, ಚೆಂಚುಗಳು. ಭಾರತದಲ್ಲಿ ಬುಡಕಟ್ಟುಗಳನ್ನು ಈ ಕೆಳಗಿನಂತೆ ಮೂರು ವಲಯಗಳಲ್ಲಿ ವಿಂಗಡಿಸಲಾಗಿದೆ.

1) **ಉತ್ತರ ಮತ್ತು ಉತ್ತರ ಪೂರ್ವ ವಲಯ:** ಹಿಮಾಲಯದ ಉಪಗಿರಿ ಕಂದರ ಶ್ರೇಣಿಯಲ್ಲಿ ನಾಗಾ ಬುಡಕಟ್ಟಿನ ಕೊನ್ಯಾಕ್, ರೆಂಗ್ಮಾ, ಸೆಂಗ್ಮಾ, ಆರೋ, ಅಂಗಾಮ, ಲ್ಹೋಟಾ ಪೋವೆ, ಚಾಂಗ, ಕಾಬುಲ, ಕುಕಿ ಬುಡಕಟ್ಟಿನ ಲುಶಾಮಿ, ಲಾಖೇರ ಚಿನ್ಸ್, ಗಾರೋ ಕಚಾರಿ, ಭೂಟಿಮಾ, ರಾಭಾ, ಥಾರು, ಖಾಸ, ಚೇನಿ ಇತ್ಯಾದಿ ಸಮುದಾಯಗಳನ್ನೊಳಗೊಂಡಿದೆ.

2) **ಕೇಂದ್ರೀಯ ಅಥವಾ ಮಧ್ಯವಲಯ:** ಇಲ್ಲಿ ಪಶ್ಚಿಮ ಬಂಗಾಳ, ಬಿಹಾರ, ಒರಿಸ್ಸ, ದಕ್ಷಿಣದ ಉತ್ತರ ಪ್ರದೇಶ, ಉತ್ತರ ಮಹಾರಾಷ್ಟ್ರ, ಮಧ್ಯಪ್ರದೇಶ, ಉತ್ತರ ರಾಜಸ್ಥಾನಗಳಲ್ಲಿ ಸಂತಾಲರು, ಮುಂಡರು, ಓರ್ಯಾನ್, ಭೂಮಿಜ, ಕೋಯಿ, ಲೋಧಿ, ಸಾಹುರ, ಜವಂಗ, ಖೊಂಡ, ಕೊರ್ಕು, ಗೊಂಡ, ಬಿಲ್ ಬಿರಹಾರ್, ಕೋಲ್, ಮಾಲೇರ, ಅಸುರ, ಬೈಗಾ ಪ್ರಧಾನ, ಅಗೇರಿಯಾ ಹಿಲ್ ಮಾರಿಯಾ ಇತ್ಯಾದಿಗಳು ಪ್ರಮುಖವಾಗಿವೆ.

3) **ದಕ್ಷಿಣ ವಲಯ** : ಈ ವಲಯದಲ್ಲಿ ಕೇರಳ, ತಮಿಳ್ನಾಡು, ಆಂಧ್ರಪ್ರದೇಶ, ಕರ್ನಾಟಕ ರಾಜ್ಯಗಳಲ್ಲಿ ಚೆಂಡು, ತೋಡ, ಬಡಗ, ಕೋಟ, ಪಣಿಯನ್, ಇರುಳ, ಕುರುಮನ್ ಕುರುಂಬ, ಗೊಂಡ, ನಾಯಕ, ಸೋಲಿಗ, ಕುರುಬ, ಕಾಡು ಕುರುಬ, ಜೇನುಕುರುಬ ಹಕ್ಕಿ ಪಿಕ್ಕಿ ಬುಡಕಟ್ಟುಗಳು ಮುಖ್ಯವಾಗಿವೆ. ಈ ಬುಡಕಟ್ಟುಗಳು ನಿರ್ದಿಷ್ಟ ನೆಲೆ, ಸಮುದಾಯ ಭಾವನೆ, ನಿರ್ದಿಷ್ಟ ಹೆಸರು, ಸಾಮಾನ್ಯ ಭಾಷೆ, ಸಾಮಾನ್ಯ ಸಂಸ್ಕೃತಿ, ಒಳ ಬಾಂಧವ್ಯದ ಘಟಕ, ರಕ್ತ ಸಂಬಂಧಗಳಲ್ಲಿ ಬಲವಾದ ನಂಬಿಕೆ, ಮುಖ್ಯ ಸ್ಥಾನ, ಅಧಿಕಾರಕ್ಕೆ ಆದ್ಯತೆ,

ಸೌಂದರ್ಯೋಪಾಸನೆ, ಸರಳತೆ ಮತ್ತು ಸ್ವಯಂ ಪರಿಪೂರ್ಣತೆ ಮತ್ತು ಜೀವನ ಸಂಗಾತಿಯನ್ನು ಆಯ್ಕೆ ಮಾಡುವಲ್ಲಿ ಹಲವಾರು ಕ್ರಮಗಳು ಮುಂತಾದವು ತಮ್ಮದೇ ಆದ ಲಕ್ಷಣಗಳನ್ನು ಹೊಂದಿವೆ.

ಭಾರತದ ಪ್ರತೀ ಬುಡಕಟ್ಟು ಪಂಗಡದ ಬಗ್ಗೆ ಗಮನಿಸಬೇಕಾದ ಅಂಶವೆಂದರೆ ಸ್ವಾವಲಂಬಿಯಾಗಿರುವುದು ಹಾಗೂ ಇದ್ದುದರಲ್ಲೇ ಜೀವನ ತೃಪ್ತಿಯನ್ನು ಕಾಣುವುದು.

## ಕರ್ನಾಟಕದಲ್ಲಿ ಬುಡಕಟ್ಟು ಜನಾಂಗ :

ದಕ್ಷಿಣ ಭಾರತದಲ್ಲಿ (ಕರ್ನಾಟಕದಲ್ಲಿ ಬುಡಕಟ್ಟುಗಳು ದಕ್ಷಿಣ ಭಾರತ ಬುಡಕಟ್ಟು ಜನಾಂಗಕ್ಕೆ ಒಳಪಡುವವರು) ಪ್ರಧಾನವಾಗಿ ತೋಡ, ಬಡಗ, ಸೋಲಿಗ, ಕಾಡುಕುರುಬ, ಉರಲಿ, ಕಣಿಕರ್, ಮುತ್ತುವನ್, ಇರುಳ, ಕುರುಬ, ಗೊಂಡ, ನಾಯಕ, ಕುರುಬ, ಜೇನು ಕುರುಬ, ಕೊರಗ, ಕುಡುಬಿ, ಮಲೆಕುಡಿಯ, ಕಾಡು ಗೊಲ್ಲರು, ಕಂಡು ಬರುತ್ತಾರೆ. ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ಅಂಡಮಾನಿ ಮತ್ತು ನಿಕೋಬಾರಿ, ಅಂಗೆ ಮತ್ತು ಜಾರವ ಕುಟುಂಬಗಳಿವೆ.

ಭಾರತದ ಇತರ ವಲಯಗಳ ಬುಡಕಟ್ಟುಗಳಿಗೆ ಹೋಲಿಸುವಾಗ ದಕ್ಷಿಣ ಭಾರತದ ಬುಡಕಟ್ಟುಗಳು ಅತ್ಯಂತ ಹಿಂದುಳಿದ ಬುಡಕಟ್ಟುಗಳಾಗಿವೆ. ಇನ್ನೂ ಅನೇಕ ಬುಡಕಟ್ಟುಗಳು ಪ್ರಾಚೀನ ಸ್ಥಿತಿಯಲ್ಲಿವೆ ಮತ್ತು ಅಲೆಮಾರಿತನದ ಜೀವನ ನಡೆಸುತ್ತಿವೆ. ಕರ್ನಾಟಕದ ಬುಡಕಟ್ಟುಗಳಲ್ಲಿ ಅನನ್ಯತೆಯ ಲಕ್ಷಣಗಳನ್ನು ಗಮನಿಸಬಹುದು. ಕರ್ನಾಟಕದಲ್ಲಿ ಬಯಲು ಸೀಮೆ, ಪಶ್ಚಿಮ ಘಟ್ಟ, ಕರಾವಳಿ ಮತ್ತು ಮಲೆನಾಡಿನ ತಪ್ಪಲಲ್ಲಿ ಬುಡಕಟ್ಟು ಜನರು ಜೀವಿಸುತ್ತಿದ್ದಾರೆ.

ಕರ್ನಾಟಕದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ಕಂಡುಬರುವ ಬುಡಕಟ್ಟುಗಳೆಂದರೆ ನಾಯಕ(69%), ಕಾಡುಕುರುಬ(11%), ಮರಾಠಿನಾಯ್ಕರು(4%), ಗೊಂಡರು(3%), ಕೋರಿಡಾರ್(2%), ಜೇನುಕುರುಬ(2%), ಕೋಯ(2%), ಯರವ(1%), ಸೋಲಿಗ(1%) ಮಲೆಕುಡಿಯ(1%) ಹಸಲರು(1%) ಹಾಗೂ ಕೊರಗರು 1% ಕ್ಕಿಂತಲೂ ಕಡಿಮೆ ಸಂಖ್ಯೆಯಲ್ಲಿರುವವರು.

**ಬುಡಕಟ್ಟು ಜನರ ಕೌಟುಂಬಿಕ ಜೀವನ :**

ಬುಡಕಟ್ಟು ಜನರ ಕುಟುಂಬ ಜೀವನವು ಬಹಳ ಸರಳವಾಗಿದ್ದು ಆತ್ಮೀಯತೆ, ಭಾವನಾತ್ಮಕತೆ ಹಾಗೂ ಸಹಜತೆಗಳಿಂದ ಕೂಡಿರುತ್ತದೆ. ಇವರಲ್ಲಿ ಪಿತೃ ಪ್ರಧಾನ ಮತ್ತು ಮಾತೃ ಪ್ರಧಾನ ವ್ಯವಸ್ಥೆ ರೂಢಿಯಲ್ಲಿದೆ. ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ತಂದೆಯದ್ದೇ ಪ್ರಧಾನ ಪಾತ್ರವಿದ್ದು ಪತ್ನಿ ಮತ್ತು ಮಕ್ಕಳ ಮೇಲೆ ಅಪಾರ ಅಧಿಕಾರವನ್ನು ಹೊಂದಿರುತ್ತಾರೆ. ಪತ್ನಿ ತನ್ನ ಪತಿಯ ಮನೆಯಲ್ಲಿರುತ್ತಾಳೆ. ಆಕೆಗೆ ಯಾವುದೇ ಸ್ವಾತಂತ್ರ್ಯವಿರುವುದಿಲ್ಲ.

ಮಾತೃ ಪ್ರಧಾನ ವ್ಯವಸ್ಥೆಯಲ್ಲಿ ಮಾತೆಯೇ ಮನೆಯ ಅಧಿಪತಿ. ಅವಳ ಹೆಸರಲ್ಲೇ ಎಲ್ಲಾ ವ್ಯವಹಾರ ನಡೆಯುತ್ತದೆ. ಆದಾಗ್ಯೂ ಆಕೆಯ ತಂದೆ ಅಥವಾ ಸೋದರರ ಉಸ್ತುವಾರಿಯೂ ಇರುತ್ತದೆ. ಆಕೆಯ ಪತಿಯು ಕೇವಲ ಒಬ್ಬ ಪ್ರತಿಷ್ಠಿತ ಅತಿಥಿಯಂತೆ ಆಕೆಯ ಮನೆಗೆ ಭೇಟಿ ಕೊಡುತ್ತಾನೆ.

**ಧಾರ್ಮಿಕ ಜೀವನ**

ಆದಿವಾಸಿಗಳು ಸಚೇತನವಾದಿಗಳು. ವಿಗ್ರಹಪೂಜೆ, ಪ್ರಾಣಿ, ಪಕ್ಷಿ, ಗಿಡ ಇಲ್ಲವೇ ಮರಗಳನ್ನು ತಮ್ಮ ಪೂರ್ವಜರೆಂದು ನಂಬಿ ಅದನ್ನು ಭಕ್ತಿಯಿಂದ ಆರಾಧಿಸುತ್ತಾರೆ, ಮಳೆ, ಗಾಳಿ, ಬೆಂಕಿ, ಭೂಮಿ, ಆಕಾಶ, ಪ್ರಕೃತಿಯ ಆರಾಧಕರಿವರು.

ಮಾಂತ್ರಿಕ ವಿದ್ಯೆಯಲ್ಲೂ ನಂಬಿಕೆಯಿಡುವ ಆದಿವಾಸಿಗಳು ಮುಗ್ಧರು ಮತ್ತು ಮೂಢನಂಬಿಕೆಯುಳ್ಳವರಾಗಿದ್ದು ವೈಜ್ಞಾನಿಕ ಮನೋಭಾವ ಹಾಗೂ ವಿಚಾರವಂತಿಕೆಗಳ ಪರಿಚಯವಿಲ್ಲದೆ ಎರಡು ಪ್ರಕಾರಗಳ ಮಾಂತ್ರಿಕ ವಿದ್ಯೆಯನ್ನು ನಂಬುತ್ತಾರೆ. **ಶುದ್ಧಾಚಾರ** ಮಾಂತ್ರಿಕ ವಿದ್ಯೆ ಮೊದಲನೆಯದು. ಇದನ್ನು ಸಾಮಾನ್ಯವಾಗಿ ಆರೋಗ್ಯ ಸುಧಾರಣೆ, ಪ್ರಯತ್ನದಲ್ಲಿ ಯಶಸ್ಸು ಪಡೆಯುವುದು, ಯುದ್ಧದಲ್ಲಿ ಜಯಗಳಿಸುವುದು, ಪ್ರವಾಹ ನಿಯಂತ್ರಣ ಮೊದಲಾದುವುದಕ್ಕೆ ನಡೆಸಿದರೆ, ಎರಡನೆಯ **ವಾಮಾಚಾರ** ಮಾಂತ್ರಿಕ ವಿದ್ಯೆಯನ್ನು ಸಾಮಾನ್ಯವಾಗಿ ಭೂತ ಪಿಶಾಚಿಗಳನ್ನು ಬಿಡಿಸುವುದು ಹಾಗೂ ಇತರರಿಗೆ ಕೆಡುಕುಂಟು ಮಾಡಲು ನಡೆಸಲಾಗುತ್ತದೆ.

**ಆರ್ಥಿಕ ಜೀವನ:**

ಆದಿವಾಸಿಗಳ ಆರ್ಥಿಕ ಜೀವನವು ಬಹಳ ವೈವಿಧ್ಯತೆಯಿಂದ ಮತ್ತು ಸರಳತನದಿಂದ ಕೂಡಿದೆ. ಅರಣ್ಯ ಪದಾರ್ಥಗಳನ್ನು ಸಂಗ್ರಹಿಸುವುದು, ಮೀನು ಹಿಡಿಯುವುದು,

ಬೇಟೆಯಾಡುವುದು, ಸಾಂಪ್ರದಾಯಿಕ ಶೈಲಿಯ ಚಿತ್ರ ಮಾಡುವುದು ಮುಂತಾದವು ಮುಖ್ಯ ಕಸುಬುಗಳಾದರೆ ಕೆಲವು ಬುಡಕಟ್ಟುಗಳು ಇನ್ನೂ '**ಸ್ಥಳ ಬದಲಿಕೆಯ ಬೇಸಾಯ**' ಕ್ರಮವನ್ನು ಅನುಸರಿಸುತ್ತಿವೆ. ಹಿಂದೆ ಆದಿವಾಸಿ ಸಮುದಾಯದಲ್ಲಿ ಆರ್ಥಿಕ ಸ್ವಾವಲಂಬನೆ ಇತ್ತು. ಪ್ರಸ್ತುತ ನಾಗರಿಕತೆಯ ಸಂಪರ್ಕ ಹೆಚ್ಚಾದಂತೆಲ್ಲಾ ಸ್ವಾವಲಂಬನೆಯು ಕ್ಷೀಣಿಸುತ್ತಿದೆ. ಕೆಲವು ಆದಿವಾಸಿ ಸಮುದಾಯಗಳು ಮಾತ್ರ ಆರ್ಥಿಕವಾಗಿ ಸುಸ್ಥಿತಿಯಲ್ಲಿವೆ. ಉದಾಹರಣೆಗೆ ಈಶಾನ್ಯ ವಲಯದ ನಾಗಲ್ಯಾಂಡ್‌ನ ನಾಗಗಳು.

**ರಾಜಕೀಯ ಜೀವನ:**

ಬುಡಕಟ್ಟು ಜನರ ರಾಜಕೀಯ ವ್ಯವಸ್ಥೆ ಬಹಳ ಆಸಕ್ತಿದಾಯಕವಾಗಿಯೂ, ಆಧುನಿಕ ರಾಜಕೀಯ ವ್ಯವಸ್ಥೆಯಿಂದ ಭಿನ್ನವಾಗಿದೆ. ಪ್ರತಿಯೊಂದು ಬುಡಕಟ್ಟಿಗೂ ರಕ್ಷಣಾ ವ್ಯೂಹವೊಂದಿದ್ದು ಬಾಹ್ಯ ಆಕ್ರಮಣಗಳಿಂದ ರಕ್ಷಿಸಿಕೊಳ್ಳಲು ಸಹಾಯವಾಗುತ್ತದೆ. ಇದಕ್ಕೆ ಬಲಿಷ್ಠರಾದವರ ನೇತೃತ್ವವಿದ್ದು ತನ್ನದೇ ಆದ ನಾಯಕನಿರುತ್ತಾನೆ. ಮುಖಂಡನ ಆಯ್ಕೆಗೆ ಹಲವಾರು ಅಂಶಗಳಿದ್ದು, ವಂಶಪಾರಂಪರ್ಯತೆ, ವಯಸ್ಸು, ಬಲಪ್ರದರ್ಶನ, ಸರ್ವಸದಸ್ಯರ ಸಹಮತ, ಮಾಂತ್ರಿಕ ವಿದ್ಯೆಯಲ್ಲಿ ಪ್ರಾವಿಣ್ಯತೆ, ಧಾರ್ಮಿಕ ಆಚರಣೆಗಳಲ್ಲಿ ಪ್ರಾವಿಣ್ಯತೆ ಅವುಗಳಲ್ಲಿ ಮುಖ್ಯವಾಗಿವೆ. ಮುಖಂಡತ್ವವನ್ನು ವಹಿಸಿದ ನಾಯಕನು ನಿಸ್ವಾರ್ಥಿಯಾಗಿದ್ದು, ತನ್ನ ಸಮೂಹಕ್ಕೋಸ್ಕರ ಶ್ರಮಿಸುತ್ತಾನೆ. ಹಿರಿಯರ ಸಲಹೆ ಪಡೆದು ತಪ್ಪಿತಸ್ಥರನ್ನು ಗುರುತಿಸಿ ದಂಡಿಸುತ್ತಾನೆ.

ಪ್ರತ್ಯೇಕತೆಯಿಂದಾಗಿ ಬುಡಕಟ್ಟು ಜನರು ನಾಗರಿಕ ಜೀವನದಿಂದ ದೂರವಾಗಿರುವುದರಿಂದಲೇ ಇವರನ್ನು ಪ್ರಿಮಿಟಿವ್ ಗುಂಪು ಎಂದು ಕರೆಯಲಾಗಿದೆ. ಇವರನ್ನು ಮುಖ್ಯವಾಹಿನಿಗೆ ತರಲು ಶಿಕ್ಷಣ (ಔಪಚಾರಿಕ ಮತ್ತು ಅನೌಪಚಾರಿಕ) ಬಹಳ ಮುಖ್ಯವಾಗಿದ್ದು, ಶಿಕ್ಷಣ ನೀಡುವಲ್ಲಿ ಅವರ ಜೀವನ ವಿಧಾನಗಳು ತೊಡಕು ಉಂಟುಮಾಡುತ್ತಿವೆ. ಬುಡಕಟ್ಟು ಜನಾಂಗದಲ್ಲಿಯೇ ಅತಿ ಹಿಂದುಳಿದವರನ್ನು "ಪ್ರಿಮಿಟಿವ್ ಟ್ರೈಬಲ್ ಗುಂಪು"(ಪಿ.ಟಿ.ಜಿ)ಎಂದು ವರ್ಗೀಕರಿಸಿದ್ದು ಭಾರತದಲ್ಲಿ 75ರಷ್ಟು ಬುಡಕಟ್ಟುಗಳನ್ನು ಈ ವರ್ಗಕ್ಕೆ ಸೇರಿಸಲಾಗಿದೆ. (ದಕ್ಷಿಣ ಕನ್ನಡದಲ್ಲಿ ಕುಡುಬಿ ಮತ್ತು

ಕೊರಗರು) ಬಡತನ, ಆಹಾರದ ಕೊರತೆ, ಅಪೌಷ್ಠಿಕತೆ, ಅನಾರೋಗ್ಯ, ಮೂಢನಂಬಿಕೆಗಳು, ಅಜ್ಞಾನದಿಂದಾಗಿ ಈ ಜನರ ಸ್ಥಿತಿ ಶೋಚನೀಯವಾಗಿದೆ.

2001ರಲ್ಲಿ ಲೋಕಸಭೆಯಲ್ಲಿ ಪಿ.ಟಿ.ಜಿ.ಯ ಬಗ್ಗೆ ಅಧ್ಯಯನ ಮತ್ತು ಅಭಿವೃದ್ಧಿಗಾಗಿ ಪ್ರತ್ಯೇಕವಾದ ನಾಲ್ಕು ಸಮಿತಿಗಳನ್ನು ರಚಿಸುವುದು ಅವಶ್ಯವಾಗಿದೆ ಎನ್ನುವ ಅಭಿಪ್ರಾಯವೂ ಮೂಡಿಬಂದಿದೆ. ಪಿ.ಟಿ.ಜಿ.ಗಳ ಲಕ್ಷಣಗಳನ್ನು ಸರಕಾರ ಈ ಕೆಳಗಿನಂತೆ ಉಲ್ಲೇಖಿಸಿದೆ.

1) ಕೆಳಮುಖವಾಗಿ ಚಲಿಸುತ್ತಿರುವ ಜನಸಂಖ್ಯೆ
2) ಶೈಕ್ಷಣಿಕವಾಗಿ ತೀರಾ ಹಿಂದುಳಿಯುವಿಕೆ
3) ಕೃಷಿ ಪೂರ್ವ ಆರ್ಥಿಕತೆ
4) ಭಿನ್ನವಾಗಿರುವ ಜೀವನ ಕ್ರಮ

ಪ್ರತಿಯೊಂದು ಸಮಾಜವು ಪರಿವರ್ತನಾ ಶೀಲವಾದುದು, ಆದಿವಾಸಿ ಸಮುದಾಯದಲ್ಲಿ ಪರಿವರ್ತನೆ ನಿಧಾನವಾಗಿರುತ್ತದೆ. ಗಿರಿಜನರ ಬದುಕು ಆಧುನಿಕ ಸಮಾಜದಲ್ಲಿ ಎತ್ತ ಸಾಗುತ್ತಿದೆ ಎಂದು ವಿಚಾರ ಮಾಡುವ ಅಗತ್ಯವಿದೆ. ಇಂದು ಅರಣ್ಯ ಮತ್ತು ಅಲ್ಲಿನ ಬುಡಕಟ್ಟುಗಳನ್ನು ವಿನಾಶಗೊಳಿಸುವ ಅನೇಕ ಯೋಜನೆಗಳು ನಮ್ಮಲ್ಲಿವೆ. ರಾಜ್ಯದಲ್ಲಿ ಅಣುಸ್ಥಾವರಗಳಿವೆ, ಅನೇಕ ಅಣೆಕಟ್ಟುಗಳಿವೆ. ಒಂದು ನದಿಗೆ ಅಡ್ಡಗೋಡೆ ನಿರ್ಮಿಸಿ ಅಣೆಕಟ್ಟು ಕಟ್ಟಬಹುದು. ಆದರೆ ಪಶ್ಚಿಮ ಘಟ್ಟದ ಉಪಯುಕ್ತ ಅರಣ್ಯವನ್ನು ಬೆಳೆಸಲು ನಮ್ಮ ವ್ಯವಸ್ಥೆಗೆ ಸಾಧ್ಯವಾಗುವುದೇ? ಈ ಯೋಜನೆಗಳಿಂದ ಲಕ್ಷಾಂತರ ಮಂದಿ ಬುಡಕಟ್ಟುಗಳು ನಿರಾಶ್ರಿತವಾಗಿವೆ. ಅನೇಕರು ನಗರಗಳಿಗೆ ವಲಸೆ ಹೋಗಿ ಕೊಳೆಗೇರಿ ಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಕಾಡನ್ನು ನಂಬಿ ಸ್ವಚ್ಛಂದವಾಗಿದ್ದ, ಸ್ವತಂತ್ರವಾಗಿದ್ದ ನಮ್ಮ ಮೂಲನಿವಾಸಿಗಳು ಇಂದು ಅನ್ನಕ್ಕಾಗಿ ಕೈಯೊಡ್ಡುವ ಪರಿಸ್ಥಿತಿ ಎದುರಾಗಿದೆ.

ಆಧುನಿಕ ಭಾರತದಲ್ಲಿ ಕೆಳವರ್ಗಗಳನ್ನು, ದಲಿತರನ್ನು, ಬುಡಕಟ್ಟುಗಳನ್ನು ಪರಮ ಹಿಂಸೆಗೆ ಗುರಿಪಡಿಸಿದ ಎರಡು ದೊಡ್ಡ ನೆಲೆಗಳು, ಪ್ರಭುತ್ವ ಮತ್ತು ಅದಕ್ಕೆ ಆಧಾರವಾಗಿ ನಿಂತ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಗುತ್ತಿಗೆ ಹಿಡಿದ ಬಂಡವಾಳ, ಇದರೊಂದಿಗೆ ಬುಡಕಟ್ಟುಗಳ ಮೇಲೆ ಜಾಗತೀಕರಣದ ಅಪಾಯವನ್ನು ನಾವು ಗಮನಿಸಬೇಕಾಗುತ್ತದೆ. ಪೇಟೆಂಟ್ ಹೆಸರಿನ ಜಾಗತಿಕ ಹಕ್ಕುದಾರಿಕೆಯ ಕಾನೂನನ್ನು ಜಾರಿಗೆ ತಂದಿರುವ

ಸಾಮ್ರಾಜ್ಯಶಾಹಿ ಇಂದು ಬುಡಕಟ್ಟುಗಳ ಅತ್ಯುತ್ತಮ ಮಾದರಿಗಳನ್ನು ತನ್ನದಾಗಿಸಿಕೊಳ್ಳುತ್ತಿದೆ. ಜಾಗತಿಕ ಪ್ರಕ್ರಿಯೆಯ ಫಲವಾಗಿ ಅನೇಕ ಬುಡಕಟ್ಟು ಸಮುದಾಯಗಳು ಸಾಮ್ರಾಜ್ಯಶಾಹಿಯ ಜೀತ ಮಾಡುತ್ತಿದೆ. ಕೋಕ್ ಬೆಳೆವ ಸಾಮ್ರಾಜ್ಯಶಾಹಿ ಇಂದು ಬಂದೂಕು ಹಿಡಿದುಕೊಂಡು ಬುಡಕಟ್ಟುಗಳನ್ನು ಜೀತಕ್ಕಿಳಿಸಿದೆ. ಸಾಮ್ರಾಜ್ಯಶಾಹಿ ಜಾಗತೀಕರಣದ ಹೆಸರಿನಲ್ಲಿ ಮಾನವ ಸಂಪತ್ತನ್ನು ಅಮಾನವೀಯ ವಿಧಾನದ ಮೂಲಕ ಬಳಸಿಕೊಳ್ಳಲಾಗುತ್ತಿದೆ. 'ಜೀತ' ಮಾನವ ಸಂಪತ್ತಿನ ಅತ್ಯಂತ ನಿಕೃಷ್ಟ ಬಳಕೆ. ಬಂದೂಕಿನ ತುದಿಯಲ್ಲಿ ಆದಿವಾಸಿಗಳು ಸಾಮ್ರಾಜ್ಯಶಾಹಿಗಳ ಜೀತಕ್ಕೆ ನಿಂತಿವೆ. ಈ ಸ್ಥಿತಿಯಲ್ಲಿ ಒಂದು ಸಂಸ್ಕೃತಿ ತನ್ನನ್ನು ತಾನು ರೂಪಿಸಿಕೊಳ್ಳುವ, ಬದಲಾವಣೆಗೆ ಹೊಂದಿಕೊಳ್ಳುವ ಯೋಚನೆ ಮಾಡಲು ಸಾಧ್ಯವೇ? ಬುಡಕಟ್ಟುಗಳಿಗೆ ಜಾಗತೀಕರಣವೆಂಬುದು ಅಪರಿಚಿತ ವಿಷಯಗಳೇ ಆಗಿವೆ. ದಲಿತ ಸಮುದಾಯಗಳು, ಆದಿವಾಸಿಗಳಿಗಿಂತ ಹೆಚ್ಚಿನ ವೇಗದಲ್ಲಿ ಇಂದು ಜಾಗತೀಕರಣದ ಹಡಗಿನತ್ತ ಧಾವಿಸುತ್ತಿದೆ. ಆದರೆ ಆದಿವಾಸಿಗಳ ಹೆಜ್ಜೆಗಳಿಗೆ ಈ ಶಕ್ತಿ ಇಲ್ಲ. ಸ್ಥಳೀಯ ಸರಕಾರ ಮತ್ತು ಇತರ ಸಮುದಾಯಗಳೇ ಬುಡಕಟ್ಟುಗಳನ್ನು ನಿರ್ಲಕ್ಷಿಸುತ್ತಿವೆ. ವರ್ತಮಾನಕಾಲದ ಈ ಎಲ್ಲ ಬಗೆಯ ಚಟುವಟಿಕೆಗಳು ಆದಿವಾಸಿಗಳನ್ನು ದಿಗ್ಭ್ರಮೆಗೊಳಿಸಿದೆ!.

ಹಲವಾರು ಬುಡಕಟ್ಟುಗಳಲ್ಲಿ ನಂಬಿಕೆ, ವಿಧಿನಿಷೇಧಗಳು ಮತ್ತು ನ್ಯಾಯಪದ್ಧತಿಗಳು ಅಸ್ತಿತ್ವದಲ್ಲಿವೆ. ಈಗ ಬಹುತೇಕ ಪದ್ಧತಿ, ನಂಬಿಕೆ, ಸಂಪ್ರದಾಯಗಳು ಆಧುನೀಕತೆಯ ಜಾಗತೀಕರಣದ ಪ್ರಭಾವಕ್ಕೆ ಸಿಕ್ಕಿ ಕಣ್ಮರೆಯಾಗುವ ಸಾಧ್ಯತೆ ಇದೆ. ಕರ್ನಾಟಕದ ಪ್ರತಿಯೊಂದು ಗ್ರಾಮಗಳಲ್ಲಿ ಸಾಮರಸ್ಯ, ಮಾನವೀಯತೆ,, ಅಂತಃಕರಣ ಮತ್ತು ಸಮಾನತೆಯ ಮೌಲ್ಯಗಳು ಇಲ್ಲವಾಗುತ್ತ, ದಿನನಿತ್ಯದ ಬದುಕಿನ ಜಂಜಾಟದಲ್ಲಿ ಆತಂಕ, ತಲ್ಲಣಗಳನ್ನು ತಂದೊಡ್ಡಬಹುದಾದ ಸಾಧ್ಯತೆಗಳಿವೆ. ಆಧುನೀಕತೆಯ ಪ್ರಕ್ರಿಯೆಯಲ್ಲಿ ಕೆಲಬುಡಕಟ್ಟುಗಳಲ್ಲಿ ಗುಟ್ಕಾ-ಮಟ್ಕಾ, ಗಾಂಜಾ, ಮದ್ಯಪಾನ, ಧೂಮಪಾನ ಮನೆ ಮಾಡತೊಡಗಿವೆ. ಇಂಥ ಸಂದರ್ಭದಲ್ಲಿ ಬುಡಕಟ್ಟುಗಳಲ್ಲಿ ಕಂಡುಬರುವ ಕ್ರೀಡೆ, ಸಂಸ್ಕೃತಿ, ನಂಬಿಕೆ, ನಿಯಮ ವಿಧಿನಿಷೇಧಗಳಿಗೆ ತಮ್ಮನ್ನು ತೆರೆದುಕೊಂಡು ಪುನರುಜ್ಜೀವನಗೊಳಿಸುವ ಪ್ರಯತ್ನ ಆಗಬೇಕಿದೆ. ಅನೇಕ ಕಡೆ **ಗುಂಪು ಜೀವನ** ಆದಿವಾಸಿಗಳ ಸಂಪತ್ತಾಗಿದೆ. ಈ ಗುಂಪು ಜೀವನ ತಪ್ಪಿದರೆ ಸಮಸ್ಯೆಗಳ ಸರಮಾಲೆ ಎದುರಾಗಿ, ಅವರ ಬದುಕು ದುಸ್ತರಕ್ಕೆ ತಲುಪುವ ಸಾಧ್ಯತೆ ಇದೆ.

ಬುಡಕಟ್ಟು ಸಮುದಾಯದ ಆಟಗಳು ಮಾನಸಿಕ ಬೆಳವಣಿಗೆ, ಆಂತರಿಕ ವಿಕಾಸಕ್ಕೆ ಕಾರಣವಾಗುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆರ್ಥಿಕವಾಗಿ, ಶೈಕ್ಷಣಿಕವಾಗಿ,

ತೀರಾ ಹಿಂದುಳಿದು, ಜೀವನ ನಿರ್ವಹಣೆಗಾಗಿ ಪರದಾಡುತ್ತಿರುವ ಅನೇಕ ಬುಡಕಟ್ಟುಗಳು ನಮ್ಮಲ್ಲಿವೆ.

ಭಾರತದಲ್ಲಿ ಈಗ 15 ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ 1.5 ಮಿಲಿಯನ್ ಜನಸಂಖ್ಯೆಯ ಪಿ.ಟಿ.ಜಿಗಳಿದ್ದಾರೆ. ಇತರ ಸಮುದಾಯಗಳು ಅಭಿವೃದ್ಧಿ ಪಥದಲ್ಲಿರುವಾಗ ಮೂಲನಿವಾಸಿಗಳಾದ ಇವರು ಶೋಚನೀಯ ಸ್ಥಿತಿಯಲ್ಲಿರುವುದು, ಪ್ರಜಾಪ್ರಭುತ್ವ ತತ್ವಗಳಿಗೆ ವಿರೋಧವಾಗಿದೆ. ಆದುದರಿಂದ, ಬುಡಕಟ್ಟುಗಳ ಸಮಗ್ರ ಅಭಿವೃದ್ಧಿ ಅನಿವಾರ್ಯವಾಗಿದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅರಿವಿನ ಅಭಿವೃದ್ಧಿಯತ್ತ, ಶಿಕ್ಷಣದ ಮೂಲಕ ಅವರನ್ನು ಕೊಂಡೊಯ್ಯುವುದು ಅಗತ್ಯವಾಗಿದೆ.

ಇದರೊಂದಿಗೆ ಬುಡಕಟ್ಟು ಜನರಲ್ಲಿ ಸಂಘಟನಾತ್ಮಕ ಹೋರಾಟದ ಅಗತ್ಯವಿದೆ. ಸಂವಿಧಾನ ಬದ್ಧವಾಗಿರುವ ಹಕ್ಕೊತ್ತಾಯಕ್ಕಾಗಿ ಪರಿಣಾಮಕಾರಿಯಾಗಿ ಹೋರಾಟ ಮಾಡಲು ಅವರಿಗೆ ಸಾಧ್ಯವಾಗುತ್ತಿಲ್ಲ. ಪ್ರಸ್ತುತ ದಿನಗಳಲ್ಲಿ ಬುಡಕಟ್ಟು ಬದುಕನ್ನು ಸಂರಕ್ಷಿಸಬೇಕಾದ ಜವಾಬ್ದಾರಿ ಸ್ಥಳೀಯ ಸರ್ಕಾರಿ ಆಡಳಿತ ಹಾಗೂ ಸಂಘ ಸಂಸ್ಥೆಗಳ ಮೇಲಿದೆ. ರಾಜಕೀಯ ಶಕ್ತಿಯಾಗಿ ಹೊರಹೊಮ್ಮಲು ಪ್ರಭಾವಶಾಲಿಯಾದ, ಪರಿಣಾಮಕಾರಿಯಾದ ಸಂಘಟನಾ ಶಕ್ತಿಯು ಇಲ್ಲವಾಗಿರುವುದರಿಂದ, ಬಹುತೇಕ ಬುಡಕಟ್ಟು ಸಮುದಾಯದ ಕೂಗು ಅರಣ್ಯರೋಧನವಾಗಿದೆ. ಸಂಘಟನಾ ಶಕ್ತಿಯ ಕೊರತೆ, ರಾಜಕೀಯ ಪ್ರಜ್ಞೆಯ ಕೊರತೆ ಹಾಗೂ ನಾಯಕತ್ವದ ಕೊರತೆಯಿಂದಾಗಿ ಸರಕಾರದ ಅನೇಕ ಯೋಜನೆಗಳು ಅವರನ್ನು ತಲುಪಿಲ್ಲ.

ಈ ದಿಶೆಯಲ್ಲಿ ಸರ್ಕಾರ, ಸರ್ಕಾರೇತರ ಸಂಘಸಂಸ್ಥೆಗಳು, ಇತರ ಸಮುದಾಯಗಳು ಯೋಚಿಸುವಲ್ಲಿ ಈ ಅಧ್ಯಯನ ಸಹಕಾರಿಯಾಗಬಹುದು.

ಪ್ರಕೃತಿಯಲ್ಲಿ ಮಹಿಳೆ ಮತ್ತು ಪುರುಷ ಎರಡು ಸಮಾನವಾದ ಮತ್ತು ಪೂರಕವಾದ ಜೀವಿಗಳು. ಸಮಾಜದ ಅಸ್ತಿತ್ವಕ್ಕೆ ಮತ್ತು ಬೆಳವಣಿಗೆಗೆ ಸ್ತ್ರೀ ಪುರುಷರಿಬ್ಬರ ಕೊಡುಗೆಯೂ ಅತ್ಯವಶ್ಯಕ. ಆದರೆ ಹೆಚ್ಚಿನ ಎಲ್ಲಾ ಸಮಾಜದಲ್ಲಿ ಮಹಿಳೆ 2ನೇ ದರ್ಜೆಯ ಪ್ರಜೆಯಾಗಿಯೇ ಉಳಿದಿದ್ದಾಳೆ. ಮಹಿಳೆಗೆ ಅಬಲೆಯ ಪಟ್ಟ ಕಟ್ಟಲಾಗಿದೆ. ಇತಿಹಾಸದ ಸಾಮಾಜಿಕ ಕ್ಷೇತ್ರದಲ್ಲಿ ಅನೇಕ ಏಳು – ಬೀಳುಗಳನ್ನು ಭಾರತೀಯ ನಾರಿ ಕಂಡಿದ್ದಾಳೆ. ಇಂದಿನ ಮಹಿಳೆಯ ಸ್ಥಾನಮಾನದ ಸೃಷ್ಟಿ ಚಿತ್ರಣಕ್ಕೆ ವಿವಿಧ ಕಾಲಘಟ್ಟಗಳಲ್ಲಿ ಸ್ತ್ರೀಯ ಸ್ಥಾನ, ಗೌರವಗಳ ಕುರಿತು ದೃಷ್ಟಿ ಹಾಯಿಸಬೇಕಾದುದು ಅಗತ್ಯವಿದೆ.

ಆರ್ಯ ಸಂಸ್ಕೃತಿಯ ಪೂರ್ವ ಕಾಲದಲ್ಲಿ ಮಾನವರು ಪಶುಗಳಂತೆ ಜೀವಿಸುತ್ತಿದ್ದು, ಸ್ತ್ರೀ ಪುರುಷನಷ್ಟೇ ದೈಹಿಕವಾಗಿ ಬಲಿಷ್ಠಳಾಗಿದ್ದು, ಬುದ್ಧಿವಂತಳಾಗಿದ್ದಳು. ಹಾಗು ಬೇಟೆಗಾರಳಾಗಿ, ಯೋಧಳಾಗಿ ಯುದ್ಧದಲ್ಲಿ ಭಾಗವಹಿಸುತ್ತಿದ್ದಳು. ಕಾಲಕ್ರಮೇಣ ಗರ್ಭಾವಸ್ಥೆ, ಬಾಣಂತನ ಮತ್ತು ಮಕ್ಕಳ ಪೋಷಣೆಯಿಂದಾಗಿ ದೇಹಶಕ್ತಿ ಕಳೆದುಕೊಂಡಳು. ಹಾಗೂ ಪುರುಷನನ್ನು ಅವಲಂಬಿಸಬೇಕಾದುದರಿಂದ ಮಹಿಳೆಯ ಸ್ಥಿತಿ – ಗತಿ ಸಮಾಜದಲ್ಲಿ ಕೆಳಗಿಳಿಯಿತು.

ವೈದಿಕ ಕಾಲದಲ್ಲಿ ಮಹಿಳೆ ಯಾಗ, ಯಜ್ಞ, ಸಭೆ ಸಮಾರಂಭಗಳಲ್ಲಿ ಪುರುಷನೊಂದಿಗೆ ಸರಿಸಮಾನವಾಗಿ ಭಾಗವಹಿಸುತ್ತಿದ್ದಳು. ವಿಧವಾ ಮರುವಿವಾಹ ಪದ್ಧತಿಯಿದ್ದು ಬಾಲ್ಯ ವಿವಾಹ ಸಮಸ್ಯೆ ಇರಲಿಲ್ಲ. ಆದರೆ ವೈದಿಕ ಕಾಲದ ಅಂತ್ಯ ಭಾಗದಲ್ಲಿ ಬ್ರಾಹ್ಮಣ ಉಪನಿಷತ್ತುಗಳು, ವರ್ಣಾಶ್ರಮ ಧರ್ಮಗಳು ರೂಪುಗೊಂಡು ಮುಂದೆ ಆಧ್ಯಾತ್ಮಿಕ ಸಾಧನೆಗೆ ಪುಷ್ಠಿ ದೊರಕಿದ್ದು ಮೋಕ್ಷ ಸಾಧನೆಯೇ ಮಾನವ ಗುರಿಯೆಂದು ತಿಳಿಯಲಾಯಿತು. ಇದರಿಂದಾಗಿ ಮನೋನಿಗ್ರಹಕ್ಕೆ ತೊಂದರೆಯಾಗುವ ಆಕರ್ಷಣೆಗಳನ್ನೆಲ್ಲಾ ದೂರವಿಡಬೇಕೆಂಬುದಾಗಿ ಭೋದಿಸಲಾಯಿತು. ಅಲ್ಲದೆ ಮಗನೇ ಧಾರ್ಮಿಕ ಕ್ರಿಯೆಗಳನ್ನು ನೆರವೇರಿಸಿ ಮೃತರ ಆತ್ಮಗಳಿಗೆ ಸದ್ಗತಿ ಕಾಣಿಸುವವನು ಎನ್ನುವ ನಂಬಿಕೆ ಹುಟ್ಟಿ ಹಾಗೂ ಸಮಾಜದಲ್ಲಿ ಗಂಡು ಮಗುವಿಗಾಗಿ ನಿರೀಕ್ಷಿಸುವುದು, ಹೆಣ್ಣು ಮಕ್ಕಳ ಜನನಕ್ಕೆ ದುಃಖಿಸುವುದು ಆರಂಭವಾಯಿತು. ಪತ್ನಿಗೆ ಪತಿಯ ಆಸ್ತಿಯಲ್ಲಿ ಹಕ್ಕಿಲ್ಲದಾಯಿತು.

ಮಹಿಳೆ ಅಪವಿತ್ರಳು, ನೀಚಳು ಮತ್ತು ಪುರುಷನಿಗಿಂತ ಎಲ್ಲ ರೀತಿಯಲ್ಲೂ ಕೀಳು ಎಂದು ವೇದಗಳನ್ನು ಕುರಿತ ವಿಶ್ಲೇಷಣಾತ್ಮಕ ಗ್ರಂಥಗಳು ಸಾರಿದವು.

ಆದರೆ ಉಪನಿಷತ್ತುಗಳು ಮಹಿಳೆಯ ವಿಚಾರದಲ್ಲಿ ಸ್ವಲ್ಪ ಮೃದು ಭಾವ ತಳೆದಿದೆ. ವಿಧವಾ ವಿವಾಹ, ಪ್ರೇಮ ವಿವಾಹ, ಸ್ವಯಂವರದ ಕುರಿತು ಪ್ರಸ್ತಾಪವಿದ್ದು, ಬಾಲ್ಯವಿವಾಹ ಸತಿಪದ್ಧತಿಯಂತಹ ಕೆಟ್ಟ ಸಂಪ್ರದಾಯಗಳ ಉಲ್ಲೇಖವಿಲ್ಲ. ಆದರೆ ರಾಮಾಯಣದಲ್ಲಿ ಮಹಿಳೆಯ ಬಗ್ಗೆ, ಅವಳ ಪಾವಿತ್ರ್ಯದ ಬಗ್ಗೆ ಕಟ್ಟುನಿಟ್ಟು, ನಡತೆಯ ಬಗ್ಗೆ ನಿಷ್ಠುರತೆಯಲ್ಲದೆ, ಬಹುಪತ್ನಿ ಮತ್ತು ಬಹುಪತಿ ಸಂಪ್ರದಾಯಗಳ ಉಲ್ಲೇಖವಿದೆ. ಶಾಸ್ತ್ರಕಾರರಾದ ಮನು ಮತ್ತು ಹಿಂದೂ ಧರ್ಮಶಾಸ್ತ್ರಜ್ಞ ಅತ್ರಿಯು ಮಹಿಳೆಯ ಸ್ವಾತಂತ್ರ್ಯದ ಬಗ್ಗೆ ಅಪಸ್ವರವೆತ್ತಿದರೂ ಅತ್ರಿ ಮಹಿಳೆಗೆ ಶಿಕ್ಷಣದ ಅಗತ್ಯತೆಯನ್ನು ತಿಳಿಸಿದ್ದಾನೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಮಹಿಳಾ ಅಧಿಕಾರಿಗಳಿದ್ದುದನ್ನು ಗಮನಿಸಬಹುದು. ವಿಧವೆಗೆ ಪುನರ್ವಿವಾಹ,

ವಿವಾಹ ವಿಚ್ಛೇದನ, ಆಸ್ತಿ ಹೊಂದುವ ಹಕ್ಕುಗಳಂತಹ ಸಮಾಜಮುಖಿ ಯೋಚನೆಗಳನ್ನು ವಿವರಿಸಲಾಗಿದೆ. ಆದರೆ ಕ್ರಮೇಣ ಹಿಂದೂ ಧರ್ಮದಲ್ಲಿ ಉತ್ತಮ, ಅಧಮ, ಮೇಲು, ಕೀಳು, ಪವಿತ್ರ, ಅಪವಿತ್ರ ಮುಂತಾದ ವಿಚಾರಗಳು ಹುಟ್ಟಿಕೊಂಡವು. ಮತ್ತು ಮೂಢನಂಬಿಕೆಗಳು, ಅನಾಚಾರಗಳಿಂದಾಗಿ ಧರ್ಮದ ಹೆಸರಿನಲ್ಲಿ ಹೆಣ್ಣಿನ ಸ್ಥಿತಿ ಅಧೋಗತಿಗಿಳಿಯಿತು.

ಆರನೆಯ ಶತಮಾನದಲ್ಲಿ ಉದಯವಾದ ಬೌದ್ಧ ಮತ್ತು ಜೈನ ಧರ್ಮಗಳು ಬ್ರಹ್ಮಚರ್ಯಕ್ಕೆ ಪ್ರಾಶಸ್ತ್ಯ ನೀಡಿದವು. ಮತ್ತು ಹೆಣ್ಣಿಗೆ ಒಂದು ವ್ಯಕ್ತಿತ್ವವಿದೆ ಎಂದು ಸೂಚಿಸಿದವು.

ಸ್ತ್ರೀ ಶಕ್ತಿಯ ಪೂಜಕರಾದ ತಾಂತ್ರಿಕರು, ಸ್ತ್ರೀಯಿಂದಲೇ ಮಾನವ ಕುಲದ ಉದ್ಧಾರ ಎಂದು ಸಾರಿದರು. ಮಹಾನಿರ್ಮಾಣ ತಂತ್ರ ಎನ್ನುವ ಧರ್ಮಗ್ರಂಥದಲ್ಲಿ ಮನೆಯ ಯಜಮಾನ ಪತ್ನಿಯನ್ನು ಸಂತೋಷದಿಂದ ನೋಡಿಕೊಳ್ಳಬೇಕೆಂದು ತಿಳಿಸಿದೆ. ಏಳನೆಯ ಶತಮಾನದಲ್ಲಿ ಕವಿ ಬಾಣ ಮತ್ತು ವಿಚಾರವಾದಿ ಮೇದಾತಿಥಿ, ಸತಿ ಪದ್ಧತಿ ಖಂಡಿಸಿ ಮಹಿಳೆಯನ್ನು ಗೌರವಿಸಿದ್ದಾನೆ.

ಹನ್ನೊಂದನೆ ಶತಮಾನದಲ್ಲಿ ಪೈಗಂಬರರು ಗಂಡಂದಿರಿಗೆ ಹೆಂಡತಿಯರ ಮೇಲೆ ಹಕ್ಕಿರುವಂತೆ ಹೆಂಡತಿಯರಿಗೂ ಗಂಡಂದಿರ ಮೇಲೆ ಅಧಿಕಾರವುಂಟು ಎಂದಿದ್ದಾರೆ. ಶತ್ರುಗಳ ಕೈಯಿಂದ ತಪ್ಪಿಸಿಕೊಳ್ಳುವ ಸಮಯದಲ್ಲಿ ಹಿಂದೂ ಮಹಿಳೆಯರು ಸತಿ ಪದ್ಧತಿಯ ಮೊರೆ ಹೋಗುತ್ತಿದ್ದುದನ್ನು ಸ್ಮರಿಸಿಕೊಳ್ಳಬಹುದು.

ಶ್ರೀ ಬಸವೇಶ್ವರರು, ಸಂಪ್ರದಾಯಗಳಲ್ಲಿ ಬಂಧಿಯಾಗಿದ್ದ ಮಹಿಳೆಗೆ ದೇವರನ್ನು ಪೂಜಿಸುವ, ಧರ್ಮಗ್ರಂಥ ಓದುವ, ದೀಕ್ಷೆ ಪಡೆದು ಮೋಕ್ಷ ಹೊಂದುವ ಪ್ರೇರಣೆ ನೀಡಿದರು. ಮತ್ತು ಅವರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ವೈಚಾರಿಕ ಚರ್ಚೆಯಲ್ಲಿ ಶಿವಶರಣೆಯರು ಭಾಗವಹಿಸುತ್ತಿದ್ದರು. ಈ ಕಾಲದಲ್ಲಿ ಗಂಡು ಹೆಣ್ಣು ಸಮಾನ ಎಂದು ಸಾರುವ ಅನೇಕ ವಚನಗಳು ಸೃಷ್ಟಿಯಾದವು.

ನೆಪೋಲಿಯನ್, ಆಗಸ್ಟ್ ಕಾಂಮ್ಟ್, ಬಾಲ್ ಜಾಕ್ ಮುಂತಾದವರು ಹೆಣ್ಣನ್ನು ಪುರುಷನಿಗೆ ಸರಿಸಮಾನವಾಗಿ ಗೌರವಿಸಲಿಲ್ಲ. ಬರ್ನಾಡ್ ಷಾ ಮಹಿಳೆಯ ಆರ್ಥಿಕ ಸ್ವಾವಲಂಬನೆಗೆ ಪ್ರಾಮುಖ್ಯತೆ ನೀಡಿ ಮಹಿಳೆಗೆ ಉದ್ಯೋಗದ ಅವಶ್ಯಕತೆಯಿದೆ ಎಂದರು.

ಕಾಬೆಟ್ ಮತ್ತು ಪೋರಿಯರ್ ಮಹಿಳೆ ಪುರುಷನಷ್ಟೇ ಸಮಾಜದಲ್ಲಿ ಸಮಾನಳು ಎಂದು ಉಲ್ಲೇಖಿಸಿದ್ದಾರೆ.

ಗ್ರೀಕರು, ರೋಮನ್ನರು ಸ್ತ್ರೀಯರನ್ನು ತಮ್ಮ ಅಡಿಯಾಳಾಗಿ ಕಂಡರೆ ವಿಶ್ವದ ಗಮನ ಸೆಳೆದ ಪ್ರಥಮ ಮಹಿಳೆ **ಮೇರಿ ವೋಲ್ಲಸನ್ ಕ್ರಾಫ್ಟ್** ಅವರು ಮಹಿಳೆಗೂ ಪುರುಷನಂತೆ ವ್ಯಕ್ತಿತ್ವವಿದೆ ಎಂದು ಸ್ತ್ರೀ ವಿವೇಚನೆಗೆ ನಾಂದಿಯಾದರು.

ಮುಂದೆ ಪೌಲೇನ್ ಡಿಲಾಬಾಲೆ, ಮಾಂಟೆಸ್ಕೊ ಮರ್‌ಸಿಯರ್, ಕಾಂಡೊರ್‌ಸೆಟ್ ಶ್ರೀಮತಿ ಚಿಕಾಜಿಕಾಮ, ಲೆನಿನ್ ಮುಂತಾದವರು ಮಹಿಳೆಯ ಸಾಮರ್ಥ್ಯ, ಮಹಿಳಾ ಕಾರ್ಮಿಕರ ಸಮಸ್ಯೆ, ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯ ಮಹತ್ವ, ಸಮಾನತೆ, ಸಮಾನವೇತನ, ಉತ್ಪಾದನಾ ಕ್ಷೇತ್ರದಲ್ಲಿ ಮಹಿಳೆಯ ಪಾತ್ರದ ಕುರಿತು ಚಿಂತನೆಗಳನ್ನು ತೆರೆದಿಟ್ಟಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸರು, ಮಹಾತ್ಮಾ ಗಾಂಧೀಜಿಯವರು ಮತ್ತು ಮದರ್ ಥೆರೆಸಾ ಅವರು ಮಹಿಳೆಯರ ವಿದ್ಯಾಭ್ಯಾಸ, ಸ್ವಾತಂತ್ರ್ಯ ಮತ್ತು ಸಮಾನ ಹಕ್ಕುಗಳನ್ನು ಎತ್ತಿ ಹಿಡಿದರಲ್ಲದೆ, ಸಾಮಾಜಿಕ ಸಮಸ್ಯೆಗಳ ನಿರ್ಮೂಲನೆಗೆ ಪಣ ತೊಟ್ಟರು.

ಬ್ರಿಟಿಷರ ಕಾಲದಲ್ಲಿ ಮಹಿಳೆಯ ಸ್ಥಾನಮಾನ ಹೀನಾಯ ಸ್ಥಿತಿಯಲ್ಲಿದ್ದು ಅನೇಕ ಸಮಸ್ಯೆಗಳಾದ ಬಾಲ್ಯವಿವಾಹ, ಸತಿ ಪದ್ಧತಿ, ವೇಶ್ಯಾವೃತ್ತಿ, ಬಹುಪತ್ನಿತ್ವ, ಮಹಿಳೆಯರಲ್ಲಿ ಅನಕ್ಷರತೆ ಮುಂತಾದುವು ರೂಢಿಯಲ್ಲಿದ್ದವು. ಬ್ರಿಟಿಷರು ಅನೇಕ ಕಾಯಿದೆಗಳ ಮೂಲಕ ಅನಿಷ್ಠ ಪದ್ಧತಿಗಳನ್ನು ತಡೆಗಟ್ಟಲು ಪ್ರಯತ್ನಿಸಿದರು. ವಿದ್ಯಾಭ್ಯಾಸದ ಅವಕಾಶವೊದಗಿ ಅನೇಕರು ಉದ್ಯೋಗಿಗಳಾದರು. ಅನೇಕರು ಧೈರ್ಯದಿಂದ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತಾದರು. ವಿಧವಾ ಮರುವಿವಾಹಕ್ಕೆ ಕಾಯ್ದೆ ಪರಿಚಯಿಸಿದ ಬ್ರಿಟಿಷರು ಮಹಿಳೆಯರಿಗಾಗಿಯೇ ಪ್ರತ್ಯೇಕ ಶಾಲಾ ಕಾಲೇಜುಗಳನ್ನು ಆರಂಭಿಸಿದರು.

ಫ್ರಾನ್‌ಕಿನಾ ಸೊರಬಾಜಿ, ರಮಾಬಾಯಿ ರಾನಡೆ, ಪಂಡಿತ್ ರಮಾಬಾಯಿಯಂಥ ದಿಟ್ಟ ಮಹಿಳೆಯರು ಸ್ತ್ರೀಯರಿಗಾಗಿ ಅನೇಕ ಸಂಘ ಸಂಸ್ಥೆಗಳನ್ನು ಕಟ್ಟಿದರು. ಧಾರ್ಮಿಕ ಜಾಗೃತಿಗಾಗಿ ವಿವೇಕಾನಂದರು ಕರೆ ಕೊಟ್ಟರು. ಅನೇಕ ಹೆಣ್ಣು ಮಕ್ಕಳು ಗಾಂಧೀಜಿಯ ಸ್ವಾತಂತ್ರ್ಯ ಕರೆಯ ಹೋರಾಟದಲ್ಲಿ, ಚಳುವಳಿಯಲ್ಲಿ ಧುಮುಕಿದರು. ಕ್ಯಾಪ್ಟನ್ ಲಕ್ಷ್ಮೀಬಾಯಿ

ಹಿಂದೂ ಸ್ಥಾನದ ವಿಮೋಚನೆಗಾಗಿ ಸ್ತ್ರೀಯೋಧ ದಳವನ್ನು ಸಂಘಟಿಸಿದರು. ಸ್ವಾತಂತ್ರ್ಯದ ನಂತರ ಅನೇಕ ಮಹಿಳೆಯರು ಸಾರ್ವಜನಿಕ ರಂಗದಲ್ಲಿ ನುಗ್ಗಿದರು. ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ ಪಂಡಿತ್, ಅನಿಬೆಸೆಂಟ್, ಇಂದಿರಾಗಾಂಧಿ ಮೊದಲಾದವರು ದೇಶದ ಜವಾಬ್ದಾರಿಯುತ ಸ್ಥಾನಗಳನ್ನು ತುಂಬಿದರು.

ಇಂದು ಮಹಿಳೆ ಸಮಾಜದ ಎಲ್ಲಾ ಕ್ಷೇತ್ರಗಳಗೂ ಹೆಜ್ಜೆಯಿಟ್ಟಿದ್ದಾಳೆ. ಸಮಾನ ಸ್ಥಾನಕ್ಕಾಗಿ ಹೋರಾಟ ನಡೆಯುತ್ತಿದೆ. ಹೆಣ್ಣನ್ನು ಸಂಸಾರದೊಳಗಿನ ವ್ಯಕ್ತಿಯಾಗಿ ಮಾತ್ರವೇ ನೋಡುವ ಕಾಲ ಬದಲಾಗಿದೆ. ದೇಶದ ಅಭಿವೃದ್ಧಿಯಲ್ಲಿ ಪುರುಷನಷ್ಟೇ ಮಹಿಳೆಗೂ ಕೊಡುಗೆಯನ್ನೀಯುವ ಸಾಮರ್ಥ್ಯವಿದೆ ಎನ್ನುವುದು ಸ್ಪಷ್ಟವಾಗಿದೆ. ಉದ್ಯೋಗಸ್ಥ ಮಹಿಳೆಯ ಜವಾಬ್ದಾರಿ ಹೆಚ್ಚಿದಂತೆ ಆಕೆಯ ಸಮಸ್ಯೆಗಳೂ ವಿಸ್ತರಿಸಿವೆ.

## 1.2 ಸಮಸ್ಯೆಯ ಹೇಳಿಕೆ:

ನಮ್ಮ ನೆಲದಲ್ಲಿ ಶತಮಾನಗಳಿಂದ ತಮ್ಮದೇ ಆದ ಸಂಸ್ಕೃತಿಯೊಂದಿಗೆ ರಕ್ತ ಸಂಬಂಧಕ್ಕೆ ಮಹತ್ವ ನೀಡುತ್ತಾ, ಆಧುನಿಕ ಸಂಸ್ಕೃತಿಗೆ ಮತ್ತು ಅದರ ಪ್ರಭಾವಕ್ಕೆ ಒಳಗಾಗದೆ ತಮ್ಮದೇ ಆದ ಸಾಮಾಜಿಕ ಕಟ್ಟುಪಾಡುಗಳೊಂದಿಗೆ, ತಮ್ಮದೇ ಆದ ನ್ಯಾಯ ಪದ್ಧತಿಯನ್ನು ಗೌರವಿಸುತ್ತ, ತಮ್ಮದೇ ಗುಂಪಿನ ಬೇರೆ ಬೇರೆ ಕುಟುಂಬಗಳೊಂದಿಗೆ ಪರಸ್ಪರ ಅನ್ಯೋನ್ಯವಾಗಿ ಜೀವಿಸುವ ಸಮುದಾಯವೇ **ಆದಿವಾಸಿ ಸಮುದಾಯ**. ತುಳುನಾಡಿನ ಪ್ರಾಚೀನ ಜನಾಂಗದ ಸಂಸ್ಕೃತಿಯ ಕುರುಹಾಗಿ ನಾವು ಈ ಸಮುದಾಯವನ್ನು ಗುರುತಿಸಬಹುದಾಗಿದೆ.

ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಮುನ್ನಡೆಯಲು ಶ್ರಮಿಸುತ್ತಿರುವ ಬುಡಕಟ್ಟುಗಳು ತಮ್ಮ ದೈನಂದಿನ ಜೀವನಕ್ಕಾಗಿ ಇಂದಿನ ನಾಗರಿಕ ಬದುಕಿನೊಂದಿಗೆ ಗುರುತಿಸಿಕೊಂಡರೂ, ತಮ್ಮ ಹಿಂದಿನ ಸಂಸ್ಕೃತಿಯನ್ನು ಆಚರಣೆಗಳಲ್ಲಿ ಉಳಿಸಿಕೊಂಡಿರುವುದು ಗಮನಾರ್ಹವಾಗಿದೆ.

ಪ್ರತ್ಯೇಕತೆಯಿಂದಾಗಿ ಬುಡಕಟ್ಟು ಜನರು ನಾಗರಿಕ ಜೀವನದಿಂದ ದೂರವಾಗಿರುವುದರಿಂದಲೇ ಇವರನ್ನು 'ಪ್ರಿಮಿಟಿವ್ ಗುಂಪು' ಎಂದು ಕರೆಯಲಾಗಿದೆ. ಬುಡಕಟ್ಟು ಸಮುದಾಯವನ್ನು ಮುಖ್ಯವಾಹಿನಿಗೆ ತರುವಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಬಹಳ ಮುಖ್ಯವಾಗಿದ್ದು ಶಿಕ್ಷಣ ನೀಡುವಲ್ಲಿ ಅವರ ಜೀವನ ವಿಧಾನಗಳು ತೊಡಕು ಉಂಟುಮಾಡುತ್ತಿರುವುದಂತೂ ನಿಜ. ಕಾಡಿನಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ಬುಡಕಟ್ಟು

ಮಕ್ಕಳನ್ನು ಔಪಚಾರಿಕಕ್ಕೆ ಒಳಪಡಿಸುವಾಗ ಅದನ್ನು ಸ್ವೀಕರಿಸುವಲ್ಲಿ ತೊಡಕುಗಳಾಗುವುದು ಸಾಮಾನ್ಯ.

ಬುಡಕಟ್ಟು ಸಮುದಾಯದಲ್ಲಿಯೇ ಅತಿ ಹಿಂದುಳಿದವರನ್ನು ಪ್ರಾಚೀನ ಬುಡಕಟ್ಟು ಸಮೂಹ 'ಪ್ರಿಮಿಟಿವ್ ಟ್ರೈಬಲ್ ಗ್ರೂಪ್'(ಪಿ.ಟಿ.ಜಿ) ಎಂದು ವಿಂಗಡಿಸಲಾಗಿದೆ. ಭಾರತದಲ್ಲಿ ಅಂತಹ 75 ಬುಡಕಟ್ಟುಗಳನ್ನು ಈ ವರ್ಗದಲ್ಲಿರಿಸಲಾಗಿದೆ. (ಉದಾಹರಣೆಗೆ ಕೊರಗ ಮತ್ತು ಜೇನುಕುರುಬ – ರನ್ನು ಪಿ.ಟಿ.ಜಿ ಎಂದು ಗುರುತಿಸಲಾಗಿದೆ) ಬಡತನ, ಆಹಾರದ ಅಭಾವ, ಅಪೌಷ್ಠಿಕತೆ, ಅನಾರೋಗ್ಯ, ಮೂಢನಂಬಿಕೆಗಳು ಹಾಗೂ ಅಜ್ಞಾನದಿಂದಾಗಿ ಇವರ ಸ್ಥಿತಿ ಒಂದು ಗಂಭೀರ ಸಮಸ್ಯೆಯಾಗಿದೆ.

ಹಾಗೆಯೇ ಬುಡಕಟ್ಟು ಮಹಿಳೆಯರ ಅನೇಕ ಸಮಸ್ಯೆಗಳು ಇತ್ತೀಚೆಗೆ ಹೆಚ್ಚುತ್ತಿರುವ ವಿಚಾರ ಅಧ್ಯಯನಗಳಿಂದ ತಿಳಿದು ಬರುತ್ತಿವೆ. ಭೌಗೋಳಿಕವಾಗಿ ಅವರು ನಾಗರಿಕ ಸಮಾಜದಿಂದ ದೂರವಿರುವುದರಿಂದ ಸಂಪರ್ಕ ಕಷ್ಟವಾಗಿದೆ. ಅವರ ವಿಶಿಷ್ಟ ಭಾಷೆ, ಜೀವನ ಪದ್ಧತಿಯಿಂದಾಗಿ ನಾಗರಿಕ ಜನರೊಂದಿಗೆ ಸಾಮರಸ್ಯತೆಯನ್ನು ಹೊಂದಲಾಗದ ಸಾಂಸ್ಕೃತಿಕ ಅಂತರ ನಿರ್ಮಾಣವಾಗಿದೆ. ಅಂಧಶ್ರದ್ಧೆ, ಮಂತ್ರ ತಂತ್ರಗಳಲ್ಲಿ ಇನ್ನೂ ನಂಬಿಕೆಯಿಟ್ಟಿರುವ ಮತ್ತು ಆಧುನಿಕ ವೈದ್ಯಕೀಯ ಸೌಲಭ್ಯಗಳ ಬಗ್ಗೆಯೂ ಅಪನಂಬಿಕೆ ಇರುವುದರಿಂದ ರೋಗರುಜಿನಗಳಿಗೆ ಅವರು ಬಹುದೊಡ್ಡ ಬೆಲೆಯನ್ನು ತೆರಬೇಕಾಗುವುದುಂಟು. ಆರ್ಥಿಕವಾಗಿ ಅವರು ಸಂಪೂರ್ಣವಾಗಿ ಸ್ವಾವಲಂಬಿಗಳಾಗಿದ್ದ ಕಾಲ ಮುಗಿದಿದ್ದು, ನಾಗರಿಕ ಸಮಾಜದತ್ತ ತಮ್ಮ ಆರ್ಥಿಕ ಬೇಡಿಕೆಗಳನ್ನು ಈಡೇರಿಸಲು ಕೈ ಚಾಚಬೇಕಾಗಿದೆ.

ಮಹಿಳೆ ಕುಟುಂಬದ ಕೇಂದ್ರ ಬಿಂದು ಆಗಿರುವುದರಿಂದ ಈ ಮೇಲೆ ಪ್ರಸ್ತುತ ಪಡಿಸಿದ ವಿಚಾರಗಳು, ಮಹಿಳೆ ಮತ್ತು ಮಕ್ಕಳಿಗೆ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವ ಬೀರುತ್ತದೆ. ಈ ದೃಷ್ಟಿಯಲ್ಲಿ ಪ್ರಸ್ತುತ ಸಮಾಜದಲ್ಲಿ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಲ್ಲಿನ ಬದಲಾಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಪರಿಸ್ಥಿತಿ ಮತ್ತು ಅವರ ಸಬಲೀಕರಣ ಪ್ರಕ್ರಿಯೆಯನ್ನು ಪರಿಶೀಲಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಬುಡಕಟ್ಟು ಸಮುದಾಯಗಳಲ್ಲಿ ಮಹಿಳೆ ಮನೆಯೊಳಗೆ ಸುರಕ್ಷಿತಳು ಹಾಗೂ ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳು ಅವಳ ಮೇಲೆ ಬಹುತೇಕ ಪ್ರಭಾವ ಬೀರಿಲ್ಲವಾದರೂ ಮುಖ್ಯವಾಹಿನಿಗೆ ಹೋಲಿಸಿದಾಗ ಬುಡಕಟ್ಟು ಮಹಿಳೆಯರಲ್ಲಿ ಅನೇಕ ಸಮಸ್ಯೆಗಳಿವೆ. ಅನಕ್ಷರತೆ,

ಬಡತನ, ಕೌಶಲ್ಯಗಳ ಕೊರತೆ, ಮೂಢನಂಬಿಕೆಗಳು, ಬಿಡುವಿಲ್ಲದ ಶ್ರಮದ ಕೆಲಸ, ಕೂಲಿ ದುಡಿಮೆಯಲ್ಲಿ ತಾರತಮ್ಯ, ಉದ್ಯೋಗದ ಅಭದ್ರತೆ, ಅಸಂಘಟಿತ ಕ್ಷೇತ್ರದಲ್ಲಿ ದುಡಿಮೆಯಾದುದರಿಂದ, ಸ್ಪಷ್ಟ ಕಾನೂನುಗಳ ಕೊರತೆ, ಆರೋಗ್ಯ ಸಮಸ್ಯೆ ಮತ್ತು ಮಾಹಿತಿಯ ಕೊರತೆ ಇವೆಲ್ಲವೂ ಬುಡಕಟ್ಟು ಮಹಿಳೆಯನ್ನು ಸಂಕಷ್ಟಕ್ಕೀಡುಮಾಡಿವೆ.

ದೇಶದ ಸಮಗ್ರ ಪ್ರಗತಿಯು ಸಮಾಜದ ಎಲ್ಲಾ ಕ್ಷೇತ್ರಗಳಲ್ಲಿನ ಕೌಶಲ್ಯತೆ, ಸಾಮರ್ಥ್ಯಗಳ ಸಮರ್ಪಕ ಬಳಕೆ ಮತ್ತು ರೂಪಿಸುವಿಕೆಯನ್ನು ಅವಲಂಬಿಸಿದೆ. ಸಮಾಜದ ಯಾವುದೇ ಭಾಗದ ಹಿಂದುಳಿಯುವಿಕೆಯು ಆ ಸಮುದಾಯದ ಮೇಲೆ ಮಾತ್ರ ಪರಿಣಾಮ ಬೀರದೆ, ಅದು ದೇಶದ ಒಟ್ಟಾರೆ ಅಭಿವೃದ್ಧಿಯನ್ನು ಭಾದಿಸುತ್ತದೆ. ಸ್ವಾತಂತ್ರ್ಯಾನಂತರ ಬುಡಕಟ್ಟು ಅಭಿವೃದ್ಧಿಗೆ ಸರಕಾರ ಅನೇಕ ಯೋಜನೆಗಳನ್ನು ಅನುಷ್ಠಾನಕ್ಕೆ ತರುತ್ತಿದೆ.

ಪ್ರಸ್ತುತ ಅಧ್ಯಯನವು ಬುಡಕಟ್ಟು ಸಮುದಾಯದ, ಮುಖ್ಯವಾಗಿ ಮಹಿಳೆಯರಲ್ಲಿನ ಬದಲಾವಣೆಯ ದಿಕ್ಕು ಹಾಗೂ ಗತಿಯನ್ನು ಮೌಲೀಕರಿಸಲು ಸಹಾಯವಾಗುತ್ತದೆ. ಸಮಾಜವಿಜ್ಞಾನ ಕ್ಷೇತ್ರ, ಸಮಾಜಶಾಸ್ತ್ರ, ಸಾಮಾಜಿಕ ಮಾನವಶಾಸ್ತ್ರ ಹಾಗೂ ಅಭಿವೃದ್ಧಿ ಅಧ್ಯಯನ ಕ್ಷೇತ್ರಗಳಿಗೂ ಕೊಡುಗೆ ನೀಡಬಲ್ಲುದು.

ಹಾಗೆಯೇ ಬುಡಕಟ್ಟು ಜನಾಂಗದ ಬಗ್ಗೆ ಅನೇಕ ಅಧ್ಯಯನಗಳಿದ್ದರೂ, ದಕ್ಷಿಣ ಕನ್ನಡದ ಮಹಿಳೆಯರಿಗೆ ಸೀಮಿತವಾಗಿರುವ ಅಧ್ಯಯನಗಳು ಇದುವರೆಗೆ ಆಗಿಲ್ಲ. ದಕ್ಷಿಣ ಕನ್ನಡದ ಒಟ್ಟು ಬುಡಕಟ್ಟುಗಳಾದ ಕೊರಗ, ಮಲೆಕುಡಿಯ, ಮರಾಠಿನಾಯ್ಕ, ಕುಡುಬಿ, ಪನಿಯನ್ ಮತ್ತು ಕಮ್ಮಾರ ಬುಡಕಟ್ಟುಗಳ ಕುರಿತಂತೆ ಅವರ ಹಿನ್ನೆಲೆ, ಭೌಗೋಳಿಕ ನೆಲೆ, ವಲಸೆ, ವಿವಿಧ ಬುಡಕಟ್ಟುಗಳು ಉಗಮವಾದ ಬಗೆ, ಸಮುದಾಯದ ಹಿನ್ನೆಲೆಯ ಕುರಿತು ಬೇರೆ ಬೇರೆ ವಿದ್ವಾಂಸರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕರ್ನಾಟಕದ ಹಾಗೂ ದಕ್ಷಿಣ ಕನ್ನಡದ ಅನೇಕ ಬುಡಕಟ್ಟುಗಳ ಸಾಮಾಜಿಕ ಜೀವನ, ಸಾಂಸ್ಕೃತಿಕ ಜೀವನ, ಧಾರ್ಮಿಕ ಆಚರಣೆಗಳು, ಮತ್ತು ಆರಾಧನೆಗಳನ್ನು ಕುರಿತು, ಅನೇಕ ತಜ್ಞರು ತಮ್ಮ ಅಧ್ಯಯನದಲ್ಲಿ ವಿಷಯಗಳನ್ನು ಮಂಡಿಸಿದ್ದಾರೆ.

ಇನ್ನು ಕೆಲವು ಸಂಶೋಧನಾಕಾರರು ಬುಡಕಟ್ಟು ಜನಾಂಗದ ಕುಲಕಸುಬುಗಳನ್ನು ಕುರಿತು, ಆಹಾರ ಪದ್ಧತಿ, ಸಮುದಾಯಗಳ ಸ್ಥಿತ್ಯಂತರಗಳು, ಅಭಿವೃದ್ಧಿಯಲ್ಲಿನ ತೊಡಕುಗಳನ್ನು ಕುರಿತು, ಬುಡಕಟ್ಟು ಸಮುದಾಯದ ಶಿಕ್ಷಣ ಮತ್ತು

ಆರೋಗ್ಯದ ಕುರಿತು, ಬುಡಕಟ್ಟು ಜನಾಂಗದ ಅಭಿವೃದ್ಧಿಯಲ್ಲಿ ಆಶ್ರಮ ಶಾಲೆಗಳ ಪಾತ್ರಗಳನ್ನು ಕುರಿತು ಅಧ್ಯಯನಗಳನ್ನು ಮಾಡಿದ್ದಾರೆ. ಇದರೊಂದಿಗೆ ಅರಣ್ಯ ನೀತಿ, ಆಧುನಿಕತೆಯ ಪ್ರಭಾವಗಳು, ಬುಡಕಟ್ಟು ಜನರು (ವಿಶೇಷವಾಗಿ ದಕ್ಷಿಣ ಕನ್ನಡದ ಕೊರಗರು) ಸಂಘಟನೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ರೀತಿ ಮುಂತಾದವುಗಳ ಕುರಿತು, ಅನೇಕ ತಜ್ಞರು ತಮ್ಮ ಅಧ್ಯಯನಗಳಲ್ಲಿ ವಿಷಯಗಳನ್ನು ಮಂಡಿಸಿದ್ದಾರೆ.

ಒಟ್ಟಿನಲ್ಲಿ ಭಾರತದ ಆದಿವಾಸಿ ಸಮುದಾಯಗಳಲ್ಲಿ ಮಹಿಳೆಯರ ಸಾಮಾಜಿಕ ಸ್ಥಿತಿ–ಗತಿ, ಸಬಲೀಕರಣ, ರಾಜಕೀಯ ಭಾಗವಹಿಸುವಿಕೆ ಮತ್ತು ಶಿಕ್ಷಣದ ಕುರಿತು ಅನೇಕ ಅಧ್ಯಯನಗಳು ಆಗಿರುವುದನ್ನು ಗಮನಿಸಬಹುದು. ಆದರೆ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಮತ್ತು ಅವರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಬಲೀಕರಣದ ಕುರಿತಂತೆ ಅಧ್ಯಯನಗಳು ಆಗಿಲ್ಲ.

ಆದ್ದರಿಂದ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಆರ್ಥಿಕ ಸ್ಥಿತಿ–ಗತಿ, ಸಾಮಾಜಿಕ ಪರಿಸ್ಥಿತಿ, ಸಬಲೀಕರಣದ ಪ್ರಕ್ರಿಯೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಪ್ರಸ್ತುತ ಅಧ್ಯಯನವು ಸಹಕಾರಿಯಾಗಬಲ್ಲುದು. ಹಾಗೆಯೇ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ತೊಂದರೆಗಳು ಹಾಗೂ ಅಭಿವೃದ್ಧಿಯಲ್ಲಿನ ತೊಡಕುಗಳನ್ನು ಮೌಲೀಕರಿಸಿ ಪರಿಶೀಲಿಸುವ ಪ್ರಯತ್ನವೂ ಇದಾಗಿದೆ.

## 1.3 ಪರಿಕಲ್ಪನಾತ್ಮಕ ಮತ್ತು ತಾತ್ವಿಕ ಚೌಕಟ್ಟು ,

**ಮಹಿಳೆ ಮತ್ತು ಸಬಲೀಕರಣ:** ಅಭಿವೃದ್ಧಿ ಚಿಂತನೆಯಲ್ಲಿ ಹುಟ್ಟಿಕೊಂಡ ಸಶಕ್ತೀಕರಣ ಅಥವಾ ಸಬಲೀಕರಣ, ಮಹಿಳಾ ವಿಷಯಗಳಲ್ಲಿ ವ್ಯಾಪಕವಾಗಿ ಬೆಳೆದು ಬಂತು. ಮೂರನೇ ಜಗತ್ತಿನ ಅಭಿವೃದ್ಧಿ ಚಿಂತನೆಯಲ್ಲಿ ನವ ಉದಾರವಾದ, ನವ ಮಾರ್ಕ್ಸ್‌ವಾದ, ಸ್ತ್ರೀ ವಾದ ಮತ್ತು ಅಭಿವೃದ್ಧಿ ಶೀಲ ದೇಶಗಳ ಗ್ರಾಮ ಮಟ್ಟದ ಸಂಘಟನೆಯ ಸಂದರ್ಭದಲ್ಲಿ, ಸಶಕ್ತೀಕರಣವು ಹೆಚ್ಚು ಬಳಸಲ್ಪಟ್ಟಿತು. ಅಭಿವೃದ್ಧಿ ಪ್ರಕ್ರಿಯೆಯ ಭಾಗವಾಗಿ ಸಶಕ್ತೀಕರಣವು ಬೆಳೆದು ಬಂದಿದೆ ಎನ್ನಬಹುದು.

ಎರಡನೇ ಮಹಾಯುದ್ಧದ ನಂತರ ವಸಾಹತುಶಾಹಿಗಳಿಂದ ಬಿಡುಗಡೆಗೊಂಡ ರಾಷ್ಟ್ರಗಳು ಕ್ಷಿಪ್ರ ಆರ್ಥಿಕ ಬೆಳವಣಿಗೆಯ ಉದ್ದೇಶಗಳನ್ನು ಇಟ್ಟುಕೊಂಡಿದ್ದವು.

ಆರ್ಥಿಕಾಭಿವೃದ್ಧಿಯ ಮಾದರಿ, ತತ್ವ ಹಾಗೂ ಸಿದ್ಧಾಂತಗಳನ್ನು ಆಧಾರವಾಗಿಟ್ಟುಕೊಂಡು ದೇಶ ಕಟ್ಟುವರೇ ಅಭಿವೃದ್ಧಿ ಪ್ರಕ್ರಿಯೆಗಳತ್ತ ಮುನ್ನುಗ್ಗಿದವು. ಆದರೆ 1970ರ ದಶಕದ ಹೊತ್ತಿಗೆ ಮಾದರಿ ತತ್ವ ಮತ್ತು ಸಿದ್ಧಾಂತಗಳು ತಮ್ಮ ಗುರಿ ಸಾಧನೆಯಲ್ಲಿ ವಿಫಲವಾಗಿದ್ದು ಎಲ್ಲಾ ಜನರನ್ನು ತಲುಪಲಿಲ್ಲ. ಆರ್ಥಿಕ ಬೆಳವಣಿಗೆಯ ಜೊತೆಯಲ್ಲಿ ಬಡತನ, ಅನಕ್ಷರತೆ, ನಿರುದ್ಯೋಗ, ಅನಾರೋಗ್ಯ, ಅಪೌಷ್ಠಿಕತೆ ಮುಂದುವರಿಯಿತು. ಆಗ ಅಭಿವೃದ್ಧಿ ಚಿಂತನೆಯ ದೃಷ್ಟಿಕೋನಗಳು ಮತ್ತು ಅದರ ಹಾದಿಯು ಬದಲಾಗಿ ಮೇಲಿನ ಸಮಸ್ಯೆಗಳತ್ತ ಸ್ಮರಿಸುವುದು ಆರ್ಥಿಕ ಅಭಿವೃದ್ಧಿಯ ಗುರಿಗಳಾದವು. ಮಾನವೀಯತೆ, ಸಮಾನತೆ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನೊಳಗೊಂಡ **'ಜನಪರ ಅಭಿವೃದ್ಧಿ'** ಎಂಬ ಪರಿಕಲ್ಪನೆ ಹುಟ್ಟಿಕೊಂಡಿತು.

1980ರ ದಶಕದ ಹೊತ್ತಿಗೆ ಮೂರನೇ ಜಗತ್ತಿನ ದೇಶಗಳ ಸಾಲದ ಹೊರೆ ಹೆಚ್ಚಾಯಿತು. ನವ ಉದಾರವಾದ ತತ್ವಗಳು ದೇಶಗಳನ್ನು ಸಾಲದಿಂದ ಮುಕ್ತಗೊಳಿಸಲಿಲ್ಲ. ಹಾಗಾಗಿ ಎಲ್ಲಾ ರಾಷ್ಟ್ರಗಳು ತಮ್ಮ ಅಭಿವೃದ್ಧಿಯ ಹಾದಿಯನ್ನು ಬದಲಾಯಿಸಿದವು. ಸರಕಾರದ ಮೇಲೆ ನಂಬಿಕೆ, ವಿಶ್ವಾಸ ಕಡಿಮೆಯಾಗತೊಡಗಿತು. ಮತ್ತು ಸಮಾಜ ಸಂಕೀರ್ಣಗೊಂಡಂತೆ ಎಲ್ಲಾ ಅಭಿವೃದ್ದಿ ಕಾರ್ಯಗಳನ್ನು ಸರಕಾರ ಮಾತ್ರ ನಿರ್ವಹಿಸಲು ಅಸಾಧ್ಯವಾದಾಗ ಸರ್ಕಾರೇತರ ಸಂಸ್ಥೆಗಳು ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡವು.

ಅಭಿವೃದ್ಧಿಯಲ್ಲಿ ಜನಸಂಖ್ಯೆ ಪಾತ್ರವನ್ನು ಪರಿಗಣಿಸಿ ಮಾನವ ಅಭಿವೃದ್ಧಿಗೆ ಹೆಚ್ಚು ಒತ್ತು ಕೊಡಲಾಯಿತು. ಕೆಳಗಿನಿಂದ ಮೇಲಕ್ಕೆ ಸಾಗುವ ವಿಧಾನವನ್ನು ಅಳವಡಿಸಿಕೊಂಡು ಅಭಿವೃದ್ಧಿಯಲ್ಲಿ ಜನರ ತೊಡಗಿಸುವಿಕೆಯನ್ನು ಹೆಚ್ಚಿಸಲು ಯತ್ನಿಸಲಾಯಿತು. 1990ರ ಹೊತ್ತಿಗೆ **ಭಾಗವಹಿಸುವಿಕೆ, ಪರ್ಯಾಯ ಆಲೋಚನೆ, ಪಾಲುಗಾರಿಕೆ** ಮುಂತಾದ ಕಲ್ಪನೆಗಳು ಅಭಿವೃದ್ಧಿಯಲ್ಲಿ ಸೇರಿಕೊಂಡವು. ಜನರು ತಮ್ಮ ಅಗತ್ಯ ಮತ್ತು ಆದ್ಯತೆಗಳನ್ನು ಗುರುತಿಸಿ ಅವುಗಳನ್ನು ಅಭಿವ್ಯಕ್ತಪಡಿಸುವ ಶಕ್ತಿಯನ್ನು ಪಡೆಯುವಂತೆ ಮಾಡುವ ಕ್ರಿಯೆಗಳನ್ನು ಪ್ರಾರಂಭಿಸಿದವು. ಇದೇ ಸಂದರ್ಭದಲ್ಲಿ ಸಶಕ್ತೀಕರಣದ ಕಲ್ಪನೆ ಹುಟ್ಟಿಕೊಂಡಿತು.

ಅಭಿವೃದ್ಧಿಯು ಹೆಚ್ಚು ಹೆಚ್ಚು ಜನಪರವಾಗಿ ಬೆಳೆದಂತೆ ಅದರಲ್ಲಿ ಲಿಂಗ ಕಾಳಜಿಗಳು ಹುಟ್ಟಿಕೊಂಡಿತು. ೯೦ರ ದಶಕದ ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆಯರು ಕೇವಲ ಬಾಹ್ಯ ಸಂಗತಿಗಳಾಗಿ ಉಳಿಯದೆ ಸ್ವತಃ ಪ್ರವೇಶಿಸುವ ಹಂತವನ್ನು ಪ್ರವೇಶಿಸುವಂತಾಯಿತು.

ಅಭಿವೃದ್ಧಿಯನ್ನು ಸ್ತ್ರೀವಾದದ ದೃಷ್ಟಿಕೋನದಿಂದ ನೋಡುವ ಪರಿಪಾಠ ಬೆಳೆಯಿತು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳುವ ಕೆಲಸ ಪ್ರಾರಂಭವಾಯಿತು. ಹೀಗೆ ಮಹಿಳೆ ಮತ್ತು ಅಭಿವೃದ್ಧಿ ಸಿದ್ಧಾಂತಗಳ ಬೆಳವಣಿಗೆಯಾಯಿತು. ಇದರಲ್ಲಿ ಎರಡು ಮುಖ್ಯ ಸಿದ್ಧಾಂತಗಳನ್ನು ಹೆಸರಿಸಬಹುದು. ಅವುಗಳೆಂದರೆ **1) ಅಭಿವೃದ್ಧಿಯಲ್ಲಿ ಮಹಿಳೆ 2) ಜಂಡರ್ ಮತ್ತು ಅಭಿವೃದ್ಧಿ**

**1) ಅಭಿವೃದ್ಧಿಯಲ್ಲಿ ಮಹಿಳೆ**: ಈ ಸಿದ್ಧಾಂತ ಎಸ್ತರ್ ಬೋಸರಪ್ ಅವರ ಅಧ್ಯಯನ ಆಧಾರಿತ ವರದಿಯ ಫಲವಾಗಿ ಬೆಳಕಿಗೆ ಬಂದಿತು. ಇದರ ಪ್ರಕಾರ ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯ ಭಾಗವಾಗಿ ಪರಿಗಣಿಸದೆ ಇರುವುದರಿಂದ ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸೇರಿಸಿಕೊಳ್ಳಬೇಕೆಂದು ಒತ್ತಿ ಹೇಳಿತು. ಇದರಂತೆ ಎಲ್ಲಾ ಅಭಿವೃದ್ಧಿ ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಮಹಿಳಾ ಘಟಕಗಳನ್ನು ಸೇರಿಸಲಾಯಿತು. ಅಭಿವೃದ್ಧಿಯ ದಿಕ್ಕುಗಳು ಕ್ಷೇಮಾಭಿವೃದ್ಧಿಯಿಂದ ಸಮಾನತೆಗೆ ಬದಲಾಯಿತು. ನವ ಉದಾರವಾದಿ ನೀತಿಗಳು ಆರ್ಥಿಕಾಭಿವೃದ್ಧಿಯಲ್ಲಿ ಪ್ರಬಲಗೊಂಡಂತೆ ಮಹಿಳಾ ಅಭಿವೃದ್ಧಿಯಲ್ಲಿ ಸಾಮರ್ಥ್ಯ ಹೆಚ್ಚಿಸುವ ವಿಧಾನಗಳನ್ನು ಅಳವಡಿಸಿಕೊಳ್ಳಲಾಯಿತು. ಆದರೆ ಈ ಸಿದ್ಧಾಂತ ಸಮಾಜದ ಅಧಿಕಾರ ರಚನೆ ಮತ್ತು ಸಾಮಾಜಿಕ ರಚನೆಯನ್ನು ಪ್ರಶ್ನಿಸಲಿಲ್ಲ.

ಅಭಿವೃದ್ಧಿಯು ತನಗೆ ಬೇಕಾದಲ್ಲಿ ಮಾತ್ರ ಮಹಿಳೆಯರನ್ನು ಗುರಿಯಾಗಿಟ್ಟುಕೊಂಡಿತು. ಉದಾಹರಣೆಗೆ ಜನಸಂಖ್ಯಾ ನಿಯಂತ್ರಣ, ಪರಿಸರ ಸಂರಕ್ಷಣೆ, ಬಡತನ ನಿರ್ಮೂಲನೆ ಇತ್ಯಾದಿ. ಅಲ್ಲದೆ ಅಭಿವೃದ್ಧಿ ಸೌಲಭ್ಯಗಳು ಅವರಿಗೆ ತಲುಪಲಿಲ್ಲ. ಆದ್ದರಿಂದ ಅಭಿವೃದ್ಧಿಯಲ್ಲಿ ಮಹಿಳೆ ಎಂಬ ಸಿದ್ಧಾಂತ ಸಂಪೂರ್ಣ ಯಶಸ್ವಿಯಾಗಲಿಲ್ಲ.

**2) ಜಂಡರ್ ಮತ್ತು ಅಭಿವೃದ್ಧಿ** : 1980ರ ದಶಕದ ಕೊನೆಯಲ್ಲಿ ಮತ್ತು 1990ರ ಪ್ರಾರಂಭದಲ್ಲಿ ಸ್ತ್ರೀವಾದಿ ಚಿಂತಕರು ಮಹಿಳೆ ಮತ್ತು ಪುರುಷರ ನಡುವಿನ ಪರಸ್ಪರ ಸಂಬಂಧವನ್ನು ವಿಶ್ಲೇಷಿಸಿ ಲಿಂಗ ಸಂಬಂಧಿ ವಿಚಾರಗಳು ಹೇಗೆ ಮಹಿಳೆಯರ ಸ್ಥಾನ ಮತ್ತು ಪಾತ್ರಗಳನ್ನು ನಿರ್ದೇಶಿಸುತ್ತವೆ, ಮತ್ತು ಎಲ್ಲಾ ಸಾಮಾಜಿಕ ಪ್ರಕ್ರಿಯೆ ಹಾಗೂ ಸಾಮಾಜಿಕ ಸಂಘಟನೆಗೆ ಈ ಲಿಂಗ ಸಂಬಂಧಗಳೇ ಕೇಂದ್ರ ಬಿಂದು ಹಾಗೂ ಇದೇ ಸಂಬಂಧ ವ್ಯಕ್ತಿ ಹಾಗೂ ಸಮಾಜದ ಅಭಿವೃದ್ಧಿಗೂ ಕಾರಣವಾಗುತ್ತದೆ ಎಂದು ಜಂಡರ್ ಅಭಿವೃದ್ಧಿ ಸಿದ್ಧಾಂತ ಹೇಳಿತು.

ಪುರುಷ ಮತ್ತು ಮಹಿಳೆಯರ ನಡುವಿನ ಅಧಿಕಾರ ಸಂಬಂಧವು ಹೇಗೆ ಮಹಿಳೆಯರ ಪರಾಧೀನತೆಗೆ ಕಾರಣವಾಗುತ್ತದೆ ಮತ್ತು ಅಭಿವೃದ್ಧಿ ಪ್ರಕ್ರಿಯೆಯಲ್ಲಿರುವ ಪುರುಷ ಪಕ್ಷಪಾತ ಅಂಶಗಳನ್ನು ಗುರುತಿಸಿ, ಈ ಸಿದ್ಧಾಂತವು ಕುಟುಂಬದಿಂದ ಹಿಡಿದು ಶಿಕ್ಷಣ, ಆರೋಗ್ಯ, ಉತ್ಪಾದಕತೆ, ಉದ್ಯೋಗ, ಮಾರುಕಟ್ಟೆ, ಲೈಂಗಿಕ ಹಾಗೂ ರಾಜಕೀಯ ವಲಯಗಳಲ್ಲಿ ಅಡಕವಾಗಿರುವ ಲಿಂಗ ಅಸಮಾನತೆಯನ್ನು ವಿಶ್ಲೇಷಿಸಿತು.

ಜಂಡರ್ ಮತ್ತು ಅಭಿವೃದ್ಧಿ ಸಿದ್ಧಾಂತವು ಲಿಂಗ ಸಂಬಂಧಗಳನ್ನು ವಿಶ್ಲೇಷಿಸುವ ಜೊತೆಯಲ್ಲೇ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದನ್ನು ತಿಳಿಸಿತು. ಕೇವಲ ಬಡತನ ನಿರ್ಮೂಲನೆ, ಮೂಲಭೂತ ಸೌಕರ್ಯ ಮತ್ತು ಉದ್ಯೋಗ ಕೊಡುವುದರಿಂದ ಮಹಿಳೆಯರ ಪರಾಧೀನತೆ ಮತ್ತು ಪುರುಷ ಪಕ್ಷಪಾತವನ್ನು ಹೋಗಲಾಡಿಸಲು ಅಸಾಧ್ಯ. ಸಮಾಜದ ಸಾಂಸ್ಕೃತಿಕ, ಆರ್ಥಿಕ ರಚನೆಗಳು ಅಮೂಲಾಗ್ರವಾಗಿ ಬದಲಾಗಬೇಕು. ಪುರುಷ ಮತ್ತು ಮಹಿಳೆಯರ ನಡುವಿನ ಅಧಿಕಾರ ಸಂಬಂಧಗಳನ್ನು ಬದಲಾಯಿಸಬೇಕು. ಈ ಬದಲಾವಣೆಗಳು ಮಹಿಳೆಯರ ಸಾಮರ್ಥ್ಯ ಹೆಚ್ಚಿಸುವಿಕೆ, ಸಶಕ್ತೀಕರಣ, ಕ್ರಿಯಾತ್ಮಕ ಕಾರ್ಯಗಳಿಂದ ಮಾತ್ರವೇ ಸಾಧ್ಯ ಎಂದು ಈ ಸಿದ್ಧಾಂತ ಹೇಳಿತು.

ಸಶಕ್ತೀಕರಣ ಚಿಂತನೆಗೆ ಮೂರನೇ ಜಗತ್ತಿನ ರಾಷ್ಟ್ರಗಳಲ್ಲಿ, ಗ್ರಾಮಮಟ್ಟದಲ್ಲಿ ನಡೆದ ಮಹಿಳಾ ಸಂಘಟನೆಗಳ ಕೊಡುಗೆ ಅಪಾರವಾದುದು. ದಕ್ಷಿಣ ಏಷ್ಯಾದ ರಾಷ್ಟ್ರಗಳು, ಅಭಿವೃದ್ಧಿ ಚಿಂತಕರು ಮತ್ತು ಗ್ರಾಮಮಟ್ಟದ ಕಾರ್ಯಕರ್ತರು ಮಹಿಳೆಯರ ಪರಿಸ್ಥಿತಿ ಸುಧಾರಿಸುವ ಮತ್ತು ಅವರ ಸಮಸ್ಯೆಗಳನ್ನು ಬಗೆಹರಿಸಲು ಬೇರೆ ಬೇರೆ ದಾರಿ ತಂತ್ರಗಳನ್ನು ಅರಸುತ್ತಲೇ **'ಸಶಕ್ತೀಕರಣ'** ದ ಕಡೆ ಹೆಜ್ಜೆ ಹಾಕಿದರು.

ಈ ದಿಶೆಯಲ್ಲಿ ಮಹಿಳಾ ಪರ ಚಿಂತಿಸುವ ಅಮರ್ತ್ಯಸೇನ್ ಅವರ ವಾದದ ಪ್ರಕಾರ ಅಭಿವೃದ್ಧಿ ಎಂದರೆ **'ಬಿಡುಗಡೆ'**. ಇಲ್ಲಿ ಯಾರೂ ಅಸಮಾನತೆಯ ಬಂಧನಕ್ಕೆ ಸಿಕ್ಕಿರಬಾರದು. ಅದು ಸಾಧ್ಯವಾಗಬೇಕಾದರೆ ಮೊದಲಿಗೆ ಜಾತಿ, ವರ್ಗ, ಸ್ತ್ರೀ, ಪುರುಷ ಎಂಬ ತಾರತಮ್ಯದ ನಿವಾರಣೆಯಾಗಬೇಕು. ಈ ಪರಿಸ್ಥಿತಿಯಲ್ಲಿ ಮಾತ್ರ ಪ್ರತಿಯೊಬ್ಬನ ಮೂಲಭೂತ ಅಗತ್ಯಗಳ ಅಭಾವ ನಾಶವಾದೀತು. ಹಾಗೆಯೇ ಭಯ, ಅನ್ಯಾಯಗಳಿಂದ ಮುಕ್ತಿ, ಯೋಚನೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ, ಅವಕಾಶಗಳನ್ನು ಆಯ್ಕೆ ಮಾಡುವ ಸ್ವಾತಂತ್ರ್ಯಗಳಂತಹ ಅನೇಕಾನೇಕ ಲಭ್ಯತೆಗಳ ಪಟ್ಟಿ ಮುಂದುವರಿಯುತ್ತದೆ. ಇದೊಂದು ಆದರ್ಶ ಸ್ಥಿತಿ. ಇದರ

ಗರಿಷ್ಠ ಹಂತವನ್ನು ತಲುಪುವುದು ಕಷ್ಟಕರ. ಆದರೂ ಆರಂಭವನ್ನಂತೂ ಮಾಡಲೇಬೇಕು. ಅಮರ್ತ್ಯಸೇನ್‌ರವರ ಪ್ರಕಾರ ಜಾತಿ, ವರ್ಗ ಮತ್ತು ಲಿಂಗ ತಾರತಮ್ಯದ ನಿವಾರಣೆಯು ಅಭಿವೃದ್ಧಿಗೆ ದಾರಿ ಮಾಡಿಕೊಟ್ಟು ಸಶಕ್ತೀಕರಣದತ್ತ ಸಾಗಲು ಸಹಾಯ ಮಾಡುತ್ತದೆ.

**ಸಶಕ್ತೀಕರಣ:** ಆಂಗ್ಲ ಪದ 'ಎಂಪವರ್‌ಮೆಂಟ್' ಅನ್ನು ಕನ್ನಡದಲ್ಲಿ **ಸಶಕ್ತೀಕರಣ** ಅಥವಾ **ಸಬಲೀಕರಣ** ಎಂದು ಭಾಷಾಂತರಿಸಲಾಗಿದೆ. ನಿಘಂಟಿನಲ್ಲಿ ಎಂಪವರ್‌ಮೆಂಟ್ ಪದಕ್ಕೆ ಶಕ್ತಿ ಕೊಡು, ಅಧಿಕಾರ ವಹಿಸು, ಕಾನೂನಿನ ಹಕ್ಕುಗಳನ್ನು ನೀಡು, ಸಮರ್ಥ ಮಾಡು, ಅರ್ಹತೆ, ಆಸ್ತಿ ಕೊಡು ಎಂಬ ಅರ್ಥಗಳಿವೆ. ಸಶಕ್ತೀಕರಣ ಪದವನ್ನು ಬಿಡಿಸಿದರೆ 'ಸ' 'ಶಕ್ತಿ' 'ಕರಣ' ಎಂಬ ಮೂರು ಪದಗಳಿದ್ದು ವ್ಯಕ್ತಿಯನ್ನು ಸಶಕ್ತಗೊಳಿಸುವ ಕ್ರಿಯೆಯೇ 'ಸಶಕ್ತೀಕರಣ' ಎಂದು ಅರ್ಥ ಮಾಡಿಕೊಳ್ಳಬಹುದು.

ಸಶಕ್ತೀಕರಣ ಪದದ ಮೂಲ ಪರಿಕಲ್ಪನೆಯಾದ 'ಶಕ್ತಿ' ಎಂದರೆ ಅಧಿಕಾರವೂ ಹೌದು. ಶಕ್ತಿಯನ್ನು ಒಬ್ಬ ಅಥವಾ ಒಂದು ಗುಂಪು ಮತ್ತೊಬ್ಬ ಅಥವಾ ಮತ್ತೊಂದು ಗುಂಪಿನ ಇಚ್ಛೆಗೆ ವಿರುದ್ಧವಾಗಿ ಕೆಲಸ ಮಾಡುವಂತೆ ಮಾಡುವುದೆಂದು ಅರ್ಥೈಸಲಾಗುತ್ತದೆ.

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯಕ್ಕೆ ಸಂಬಂಧಿಸಿದಂತೆ 'ಶಕ್ತಿ' ಎಂದರೆ ಸಂಪನ್ಮೂಲಗಳ ಮೇಲಿನ ನಿಯಂತ್ರಣ ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕು ಎಂದು ಹೇಳಬಹುದು. ಈ ರೀತಿಯ ಶಕ್ತಿಯನ್ನು ಒಬ್ಬರು ಇನ್ನೊಬ್ಬರ ಮೇಲೆ ಪ್ರಯೋಗಿಸಿದಾಗ ಅದು ವ್ಯಕ್ತಿ ಅಥವಾ ಗುಂಪಿನ ದೃಷ್ಟಿಕೋನ, ಆ ವ್ಯಕ್ತಿಯ ಆಯ್ಕೆ ಹಾಗೂ ಅಭಿಪ್ರಾಯಗಳನ್ನು ನಿರ್ಧರಿಸುತ್ತದೆ ಹಾಗೂ ನಿಯಂತ್ರಿಸುತ್ತದೆ. ನಿಯಂತ್ರಣಕ್ಕೆ ಒಳಪಟ್ಟ ಗುಂಪು ನಿಯಂತ್ರಣವನ್ನು ಆಂತರಿಕಗೊಳಿಸಿಕೊಂಡು ಸಹಜ ಎಂದು ಒಪ್ಪಿಕೊಳ್ಳುತ್ತದೆ. ಈ ಕ್ರಿಯೆ ಲಿಂಗ ಸಂಬಂಧಿ ವಿಚಾರದಲ್ಲಿ ಮಹಿಳೆಯರು ತುಳಿತ ಹಾಗೂ ನಿಯಂತ್ರಣಕ್ಕೆ ಒಳಪಟ್ಟಿರುತ್ತಾರೆ. ಎಲ್ಲಿ ನಿಯಂತ್ರಣ, ತುಳಿತ ಆಂತರಿಕ ಗೊಂಡಿರುತ್ತದೆಯೋ ಅಲ್ಲಿ ಶಕ್ತಿಯನ್ನು ಸೃಷ್ಟಿಸಬೇಕಾಗುತ್ತದೆ. ಶಕ್ತಿಯನ್ನು ಹೊರಗಿನಿಂದ ಕೊಡಬೇಕಾಗುತ್ತದೆ, ಅಲ್ಲಿಯೇ ಸಶಕ್ತೀಕರಣದ ಕಲ್ಪನೆ ಮತ್ತು ಪ್ರಕ್ರಿಯೆ ಹುಟ್ಟಿಕೊಳ್ಳುತ್ತದೆ.

ಶ್ರೀಲತಾ ಬಾಟ್ಲಿವಾಲಾ ಅವರ ಪ್ರಕಾರ 'ಶಕ್ತಿ' ಎಂದರೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂದರ್ಭಗಳಲ್ಲಿ ವ್ಯಕ್ತಿಗಳು ಮತ್ತು ಗುಂಪುಗಳು, ಸಂಪನ್ಮೂಲ ತತ್ವ ಮತ್ತು ಸ್ವಂತಿಕೆಯ ಮೇಲೆ ನಿಯಂತ್ರಣ ಹೊಂದುವುದು.

ಜೊರೋಲ್ಯಾಂಡ್ ಅವರು ಶಕ್ತಿ ಪರಿಕಲ್ಪನೆಯಲ್ಲಿ ನಾಲ್ಕು ಪ್ರಕಾರಗಳನ್ನು ಗುರುತಿಸಿದ್ದಾರೆ.

1) **ಬೇರೆಯುವರ ಮೇಲೆ ಶಕ್ತಿ /ಅಧಿಕಾರ ಹೊಂದುವುದು.** (Power Over)

ಬೇರೆಯವರನ್ನು ನಿಯಂತ್ರಿಸುವುದು, ಪ್ರಭಾವ ಬೀರುವುದು ಅಧಿಪತ್ಯದ ಸಾಧನ.

2) **ಶಕ್ತಿ ನೀಡುವುದು** ( Power To) ಉತ್ಪಾದಕ ಶಕ್ತಿ, ಆದಾಯ ಗಳಿಕೆ, ಹೊಸ ಅವಕಾಶಗಳ ಸೃಷ್ಟಿ ಮತ್ತು ಸಾಮರ್ಥ್ಯ ಬೆಳೆಸಿಕೊಳ್ಳಲು ಶಕ್ತಿ ನೀಡುವುದು ಮತ್ತು ಸಾಮರ್ಥ್ಯ ಬೆಳೆಸಿಕೊಳ್ಳಲು ಶಕ್ತಿ ನೀಡುವುದು

3) **ಶಕ್ತಿಯನ್ನು ಹಂಚಿಕೊಳ್ಳುವುದು** (Power With) ಎಲ್ಲರೂ ಒಂದು ಎನ್ನುವ ಭಾವನೆಯಿಂದ ಕೆಲಸ ಮಾಡುವುದು. ಒಟ್ಟಾಗಿ ಸಮಸ್ಯೆ ಎದುರಿಸುವುದು. ಅಧಿಕಾರ ಶಕ್ತಿಯನ್ನು ಇತರರೊಂದಿಗೆ ಹಂಚಿ ಬೇರೆಯವರನ್ನು ಶಕ್ತಗೊಳಿಸುವುದು.

4) **ಆಂತರಿಕವಾಗಿ ಶಕ್ತಗೊಳಿಸುವುದು.** (Power Within) ಮಾನವನಲ್ಲಿ ಅಡಕವಾಗಿರುವ ಆಂತರಿಕ ಅಥವಾ ಆಧ್ಯಾತ್ಮಿಕ ಶಕ್ತಿಯನ್ನು ಉದ್ದೀಪನಗೊಳಿಸುವುದು. ಇದು ಸ್ವ ಒಪ್ಪಿಗೆ ಸ್ವಪ್ರತೀಕ, ಸ್ವಗೌರವ ಬೆಳೆಸುವುದರ ಜೊತೆಗೆ ಇತರರನ್ನು ಒಪ್ಪಿಕೊಳ್ಳುವ ಮತ್ತು ಗೌರವಿಸುವ ಸ್ವಭಾವವನ್ನು ಬೆಳೆಸುತ್ತದೆ. (ಹೇಮಲತಾ ಎಚ್.ಎಂ. 2003 ಪು.ಸಂ 8 ಮತ್ತು 9)

ಆದ್ದರಿಂದ ಶಕ್ತಿ ನೀಡುವುದು ಮತ್ತು ಶಕ್ತಿಯನ್ನು ಹಂಚಿಕೊಳ್ಳುವುದು ಇವೆರಡು ಜನರು ತಮ್ಮ ಅಗತ್ಯ, ಆದ್ಯತೆ ಮತ್ತು ಆಸಕ್ತಿಗಳನ್ನು ಕಂಡುಕೊಂಡು ಅವುಗಳನ್ನು ಹೇಗೆ ಪಡೆಯಬೇಕು ಹಾಗೂ ಅವು ಹೇಗೆ ಇತರರ ಆಸಕ್ತಿ ಆದ್ಯತೆಗಳಿಗೆ ಸಂಬಂಧಿಸಿವೆ ಎಂದು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಜೊತೆಗೆ ನಿರ್ಧಾರ ಕೈಗೊಳ್ಳುವುದರಲ್ಲಿ ಭಾಗವಹಿಸುವಂತೆ ಮಾಡುತ್ತದೆ.

ಸಾಮಾನ್ಯವಾಗಿ ಸಶಕ್ತೀಕರಣವನ್ನು ಅಶಕ್ತರಲ್ಲಿ ಜಾಗೃತಿ ಮೂಡಿಸುವ, ಅವರು ತಮ್ಮ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ತಮಗೆ ಬೇಕಾಗಿರುವುದನ್ನು ಪಡೆಯಲು ಶಕ್ತರನ್ನಾಗಿಸುವ ಪ್ರಕ್ರಿಯೆ ಎಂದು ಅರ್ಥೈಸಬಹುದು. ಬಡಜನರು ಮತ್ತು ಅಶಕ್ತರಿಗೆ ಸಂಬಂಧಿಸಿದಂತೆ ಬ್ರೆಜಿಲ್‌ನ ಶಿಕ್ಷಣ ತಜ್ಞ ಪೌಲೋಪ್ರೇರಿ ಅವರು ತಮ್ಮ ಜಾಗೃತೀಕರಣ ಸಿದ್ಧಾಂತದಲ್ಲಿ ಸಶಕ್ತೀಕರಣ ಎಂಬ ಪದ ಬಳಸಿದರು. ಪೌಲೋಪ್ರೇರಿಯವರು "ಬಡವರು ಅಧಿಕಾರ ರಚನೆಯನ್ನು ಪ್ರಶ್ನಿಸಿ ತಮ್ಮ ಜೀವನವನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳುವ ಪ್ರಕ್ರಿಯೆಯೇ ಜಾಗೃತೀಕರಣ" ಎಂದರು. ಆದರೆ ಅವರು ಲಿಂಗವು ಅಧಿಕಾರ/ಶಕ್ತಿಯನ್ನು ನಿರ್ಣಯಿಸುವ ಮೂಲ ಎಂಬುದನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

ಸ್ತ್ರೀವಾದಿಗಳು ಪೌಲೋಪ್ರೇರಿಯವರ ಜಾಗೃತೀಕರಣವನ್ನು ಮಹಿಳಾ ಸಶಕ್ತೀಕರಣದ ವ್ಯಾಖ್ಯೆಗೆ ಬಳಸಿಕೊಂಡರು.

ದಿವ್ಯ ಪಾಂಡೆ ಅವರು 'ಸಶಕ್ತೀಕರಣವು ವೈಯಕ್ತಿಕ ಮತ್ತು ಸಾಮುದಾಯಿಕ ಮಟ್ಟದಲ್ಲಿ ನಿರ್ಧಾರ ಕೈಗೊಳ್ಳುವ, ಸಾಮರ್ಥ್ಯವನ್ನು ಬೆಳೆಸುವ, ಆತ್ಮ ವಿಶ್ವಾಸ ಹೊಂದುವ ಮತ್ತು ಉತ್ಪಾದನಾ ಸಂಪನ್ಮೂಲಗಳ ಮೇಲೆ ನಿಯಂತ್ರಣ ಪಡೆಯುವ ಪ್ರಕ್ರಿಯೆಯಾಗಿದೆ.' ಎಂದರು.

ಶ್ರೀಲತಾ ಬಾಟ್ಲಿವಾಲ ಅವರ ಪ್ರಕಾರ ಈಗ ಇರುವ ಅಧಿಕಾರ ಸಂಬಂಧಗಳನ್ನು ಹೋಗಲಾಡಿಸಿ ಅಧಿಕಾರ ಮತ್ತು ಸಂಪನ್ಮೂಲಗಳ ಮೇಲೆ ಹಿಡಿತ ಹೊಂದುವ ಪ್ರಕ್ರಿಯೆಯೇ ಸಶಕ್ತೀಕರಣ.

ಸ್ತ್ರೀವಾದಿಗಳು ಸಶಕ್ತೀಕರಣವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. "ಮಹಿಳೆಯರ ಪರಾಧೀನ ಪರಿಸ್ಥಿತಿಗೆ ಕಾರಣವಾಗಿರುವ ಪ್ರಸ್ತುತ ಸಾಮಾಜಿಕ ರಚನೆಯಲ್ಲಿ ತೀವ್ರವಾದ ಬದಲಾವಣೆ ತರುವುದೇ ಸಶಕ್ತೀಕರಣ". (ಹೇಮಲತಾ ಎಚ್.ಎಂ ಮಹಿಳಾ ಸಶಕ್ತೀಕರಣ 2003: ಪು.ಸಂ. 10)

ಸ್ತ್ರೀವಾದಿಗಳ ಶಕ್ತಿ ಪರಿಕಲ್ಪನೆಯ ವ್ಯಾಖ್ಯೆ ಮಹಿಳಾ ಸಶಕ್ತೀಕರಣದ ವ್ಯಾಪ್ತಿಯನ್ನು ವಿಶಾಲಗೊಳಸುತ್ತಾರೆ. ಅವರು ಔಪಚಾರಿಕ ಮತ್ತು ಸಾಂಸ್ಥಿಕ ಶಕ್ತಿ ಕಲ್ಪನೆಯನ್ನು ಮೀರಿ "ವೈಯಕ್ತಿಕವೇ ರಾಜಕೀಯವಾದುದು" ಎಂಬ ತತ್ವದ ಆಧಾರದ ಮೇಲೆ ಮಹಿಳಾ ಸಶಕ್ತೀಕರಣವನ್ನು ವಿವರಿಸುತ್ತಾರೆ. ಶಕ್ತಿಯನ್ನು ಇನ್ನೊಬ್ಬರ ಮೇಲೆ ಅಧಿಪತ್ಯ ಸಾಧಿಸುವ ಕಲ್ಪನೆಯನ್ನಾಗಿಸದೆ ಮಹಿಳೆಯರು ಹೆಚ್ಚು ಸ್ವಾವಲಂಬಿಗಳಾಗಿ ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳುವ ಕಲ್ಪನೆಯನ್ನಾಗಿ ನೋಡಬೇಕು ಎಂದು ಹೇಳುತ್ತಾರೆ.

ಸ್ತ್ರೀವಾದಿಗಳು ತುಳಿತದ ಕ್ರಿಯೆಯನ್ನು ಅರ್ಥ ಮಾಡಿಕೊಳ್ಳುವ ಮತ್ತು ತುಳಿತವನ್ನು ಆಂತರಿಕಗೊಳಿಸಿಕೊಳ್ಳುವ ಶಕ್ತಿಯನ್ನು ಮುಖ್ಯವಾಗಿ ಗುರುತಿಸುತ್ತಾರೆ. ಬೇರೆಯವರ ಮೇಲೆ ಅಧಿಕಾರ ಹೊಂದು (power over) ಎಂಬ ಅರ್ಥದಲ್ಲಿ ಶಕ್ತಿಯನ್ನು ಲಿಂಗ ವಿಶ್ಲೇಷಣೆಗೆ ಒಳಪಡಿಸಿದರೆ ಅದು ಪುರುಷರು, ಪುರುಷರ ಮೇಲೆ ಹೊಂದುವ ಅಧಿಕಾರವನ್ನು ಸೂಚಿಸುತ್ತದೆ. ಆದುದರಿಂದ ಈ ಅರ್ಥದಲ್ಲಿ ಮಹಿಳಾ ಸಶಕ್ತೀಕರಣವನ್ನು ವ್ಯಾಖ್ಯಾನಿಸಬಾರದು ಎಂಬುದು ಸ್ತ್ರೀವಾದಿಗಳ ಅಭಿಪ್ರಾಯವಾಗಿದೆ.

ಜೊರೋಲ್ಯಾಂಡ್ ಅವರು ಗುರುತಿಸಿದ ಶಕ್ತಿಯ ನಾಲ್ಕು ಪ್ರಕಾರಗಳಲ್ಲಿ ಎರಡು ಪ್ರಕಾರಗಳನ್ನು ಸಶಕ್ತೀಕರಣಕ್ಕೆ ಬಳಸಬಹುದು. **ಶಕ್ತಿ ನೀಡುವುದು** (power to) ಮತ್ತು **ಆಂತರಿಕ ಶಕ್ತಿ** (power with in) ಅರ್ಥದಲ್ಲಿ ಮಹಿಳಾ ಸಶಕ್ತೀಕರಣವನ್ನು ಬಳಸಬೇಕು. ಅಂದರೆ ಮಹಿಳೆಯರು ಸಶಕ್ತಗೊಳ್ಳಲು ಬೇಕಾದ ಶಕ್ತಿ ಮೂಲಗಳನ್ನು ಪಡೆದುಕೊಂಡು ತಮ್ಮಲ್ಲಿರುವ ಆಂತರಿಕ ಶಕ್ತಿಯನ್ನು ಕಂಡುಕೊಂಡು ಸಶಕ್ತಗೊಳ್ಳಬೇಕು.

ಅಭಿವೃದ್ಧಿ ಮತ್ತು ಲಿಂಗದ ಸಂದರ್ಭದಲ್ಲಿ ಸಶಕ್ತೀಕರಣವು ಒಂದು ಪರಿಕಲ್ಪನೆಗಿಂತ ಪ್ರಕ್ರಿಯೆಯಾಗಿ ವ್ಯಾಖ್ಯಾನಿಸಲ್ಪಡುತ್ತದೆ, ಇದು ಹೆಚ್ಚು ಕ್ರಿಯಾತ್ಮಕವಾಗಿರುತ್ತದೆ. ಹಾಗೂ ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿರುತ್ತದೆ. ಸಾಂಸ್ಕೃತಿಕ, ಜನಾಂಗೀಯ, ಐತಿಹಾಸಿಕ, ಆರ್ಥಿಕ, ಭೌಗೋಳಿಕ, ರಾಜಕೀಯ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ವಿವಿಧ ಸ್ವರೂಪಗಳನ್ನು ಪಡೆಯುತ್ತದೆ. ಜೀವನ ಚಕ್ರದಲ್ಲಿ ಮಹಿಳೆಯು ಯಾವ ಹಂತದಲ್ಲಿದ್ದಾಳೆ (ವಯೋಮಿತಿಗನುಗುಣವಾಗಿ) ಜೀವನದ ಅನುಭವ ಮತ್ತು ಸಮಾಜದ ಲಿಂಗ ಸಂಬಂಧಿ ಅಂಶಗಳು ಮಹಿಳಾ ಸಶಕ್ತೀಕರಣವನ್ನು ಪ್ರಭಾವಿಸುತ್ತವೆ.

ಕ್ಯಾರೊಲಿನ್ ಮೋಸರ್ ಅವರು "ವೈಯಕ್ತಿಕ ಸಶಕ್ತೀಕರಣಕ್ಕೆ ಒತ್ತುಕೊಟ್ಟು ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವುದೇ ಸಶಕ್ತೀಕರಣದ ಪ್ರಮುಖ ಸಾಧನ" ಎಂದು ಹೇಳುತ್ತಾರೆ. (ಹೇಮಲತಾ ಎಚ್ ಎಂ 2003: ಪು.ಸಂ 13)

ಮಹಿಳಾ ಸಶಕ್ತೀಕರಣದಲ್ಲಿ ಮುಖ್ಯವಾಗಿ ಕೆಲವು ಅಂಶಗಳನ್ನು ಗುರುತಿಸಬಹುದು. ಮೊದಲನೆಯದಾಗಿ ಸಶಕ್ತತೆಯು ಸಂಪನ್ಮೂಲ ಮತ್ತು ಸ್ವ ನಿಯಂತ್ರಣಕ್ಕೆ ಸಂಬಂಧಿಸಿದ್ದು, ಎರಡನೆಯದಾಗಿ ಸಮಾನತೆ ಸಾಧಿಸುವುದು, ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕನ್ನು ಪಡೆಯುವುದು ಇದರ ಗುರಿ. ಮೂರನೆಯದಾಗಿ ಆತ್ಮ ವಿಶ್ವಾಸ ಗಳಿಸಿಕೊಳ್ಳುವುದು, ಉತ್ಪಾದಕ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವುದು, ಅರಿವು ಮೂಡಿಸಿಕೊಳ್ಳುವುದು ಮತ್ತು ಈಗಿರುವ ಅಧಿಕಾರ ಸಂಬಂಧಗಳನ್ನು ಪ್ರಶ್ನಿಸಿ ಅವುಗಳನ್ನು ಬದಲಾಯಿಸುವುದೇ ಸಶಕ್ತೀಕರಣ.

ಸಶಕ್ತೀಕರಣದ ಪದದೊಳಗಿನ ಶಕ್ತಿ ಪರಿಕಲ್ಪನೆಯನ್ನು ಮಹಿಳೆಯರಿಗೆ ಅನ್ವಯಿಸಿದಾಗ ಅವರು ಅಶಕ್ತರು ಎನ್ನುವುದು ಸ್ಪಷ್ಟವಾಗುತ್ತದೆ. ಏಕೆಂದರೆ ಮಹಿಳೆಯರಲ್ಲಿ ಶಕ್ತಿಯ ಮೂಲಗಳಾದ ಸಂಪನ್ಮೂಲಗಳ ಲಭ್ಯತೆ, ಭಾವನಾತ್ಮಕ ಚಿಂತನೆ, (Ideologies)

ಮತ್ತು ಸ್ವಂತಿಕೆಯ ಮೇಲೆ ನಿಯಂತ್ರಣವಿರುವುದಿಲ್ಲ. ಇದ್ದರೂ ಸೀಮಿತವಾಗಿರುತ್ತದೆ. ಪುರುಷ ಪ್ರಧಾನ ಮೌಲ್ಯಗಳು, ಸಾಮಾಜಿಕ ಕಟ್ಟುಪಾಡುಗಳು, ನಂಬಿಕೆಗಳು, ಆರ್ಥಿಕ ಮಟ್ಟ ಮತ್ತು ಸಮಾಜದ ಪರಿಸ್ಥಿತಿ ಇವುಗಳು ಮಹಿಳೆಯರ ಸಶಕ್ತತತೆಯನ್ನು ಮಿತಿಗೊಳಸುತ್ತವೆ. ಕುಟುಂಬವನ್ನು ತೆಗೆದುಕೊಂಡರೆ ಅಲ್ಲಿ ಪುರುಷನನ್ನು ಯಜಮಾನನನ್ನಾಗಿ ನೋಡಲಾಗುತ್ತದೆ. ಎಲ್ಲಾ ಭೌತಿಕ ವಸ್ತು, ಆಸ್ತಿ, ಹಣಕಾಸಿನ ವ್ಯವಹಾರವೆಲ್ಲಾ ಅವನ ನಿಯಂತ್ರಣದಲ್ಲಿರುತ್ತದೆ. ಸಹಜವಾಗಿಯೇ ಇವೆಲ್ಲವುಗಳಿಂದ ಬರುವ ಶಕ್ತಿ ಪುರುಷನಲ್ಲಿ ಕೇಂದ್ರೀಕೃತವಾಗಿರುತ್ತದೆ. ಈ ಶಕ್ತಿಯ ಮೂಲಗಳಿಂದ ವಂಚಿತರಾದ ಮಹಿಳೆಯರಿಗೆ ಶಕ್ತಿ ನಿರಾಕರಿಸಲ್ಪಡುತ್ತದೆ.

ಸಮುದಾಯ ಮತ್ತು ಸಮಾಜ ಮಟ್ಟದಲ್ಲೂ ಮಹಿಳೆಯರು ಶಕ್ತಿಯ ಮೂಲಗಳಿಂದ ವಂಚಿತರಾಗಿದ್ದಾರೆ. ಸಾರ್ವಜನಿಕ ಕ್ಷೇತ್ರವು ಮಹಿಳೆಯರಿಗೆ ಅನೌಪಚಾರಿಕವಾಗಿ ನಿಷಿದ್ಧವಾಗಿರುವ ಸಂದರ್ಭದಲ್ಲಿ ಸಾರ್ವಜನಿಕ ಆಸ್ತಿ, ಭೌತಿಕ ಸಂಪನ್ಮೂಲಗಳು (ನೀರು, ಕಾಡಿನ ಉತ್ಪನ್ನ, ಭೂಮಿ ಇತ್ಯಾದಿ) ಸಂಸ್ಥೆಗಳ ಅಧಿಕಾರ ಸ್ಥಾನ, ರಾಜಕೀಯ ಅಧಿಕಾರ ಮುಂತಾದುವು, ಮಹಿಳೆಯರಿಂದ ದೂರವಾಗಿ ಪುರುಷರ ಕೈ ಸೇರಿವೆ. ಹೀಗೆ ಎಲ್ಲಾ ಸ್ತರಗಳಲ್ಲೂ ಶಕ್ತಿ, ಅಧಿಕಾರ ಹಕ್ಕುಗಳಿಂದ ವಂಚಿತರಾದ ಮಹಿಳೆಯರು ಅವುಗಳನ್ನು ಪಡೆಯುವುದರ ಮೂಲಕ ಸಶಕ್ತಗೊಳ್ಳಬೇಕಾದ ಅಗತ್ಯವಿದೆ.

ಮಹಿಳಾ ಸಶಕ್ತೀಕರಣಕ್ಕೆ ವಿವಿಧ ಮಾರ್ಗಗಳದ್ದು ಮುಖ್ಯವಾಗಿ ಶಿಕ್ಷಣ, ಆರ್ಥಿಕವಾಗಿ ಸ್ವಾವಲಂಬಿಯಾಗಿಸುವುದು, ಮಹಿಳೆಯರಿಗೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಜಾಗೃತಿ ಮೂಡಿಸುವುದು, ಮಹಿಳಾ ಸಂಘಟನೆಯನ್ನು ಬಲಗೊಳಸುವುದು, ರಾಜಕೀಯ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ತೊಡಗಿಸಿಕೊಳ್ಳುವುದು ಇತ್ಯಾದಿಗಳಾಗಿವೆ.

ಮಹಿಳೆಯರ ವೈಯಕ್ತಿಕ ಹಾಗೂ ಸಾಮುದಾಯಿಕ ಸಶಕ್ತೀಕರಣವು ಕೆಲವು ಮೂಲ ತತ್ವಗಳನ್ನು ಆಧರಿಸಿವೆ. ಅವುಗಳೆಂದರೆ ಸ್ವಾವಲಂಬನೆ, ಸ್ವಅರಿವು, ಸಾಮುದಾಯಿಕತೆ ಮತ್ತು ಸಂಘಟನೆ, ಕೌಶಲ್ಯ ಮತ್ತು ಸಾಮರ್ಥ್ಯ ಬೆಳೆಸಿಕೊಳ್ಳುವುದು ಹಾಗೂ ಹೊರಜಗತ್ತಿನ ಸಂಪರ್ಕಗಳಾಗಿವೆ.

ಆದ್ದರಿಂದ ಸಶಕ್ತೀಕರಣವು ವ್ಯಕ್ತಿಯು ತನ್ನ ಬಗ್ಗೆ ತಿಳದುಕೊಂಡು ತನಗೇನು ಬೇಕು ಎಂದು ಗುರುತಿಸಿ ಅಭಿವ್ಯಕ್ತ ಪಡಿಸುವುದು. ತನಗೆ ಬೇಕಾದುದನ್ನು

ಪ್ರಯತ್ನಿಸಿ ಪಡೆಯುವುದು. ಆತ್ಮವಿಶ್ವಾಸ, ಅರಿವು, ಮುಕ್ತ ಸಂಚಾಲನೆ, ಆಯ್ಕೆ ಸಂಪನ್ಮೂಲಗಳ ಹಿಡಿತ ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕನ್ನು ಹೊಂದುವ ಪ್ರಕ್ರಿಯೆ, ಯಾರಲ್ಲಿ ಈ ಗುಣಗಳಿವೆಯೋ ಅವರನ್ನು ಸಶಕ್ತರೆಂದು ಕರೆಯಬಹುದು.

ಸಶಕ್ತೀಕರಣದ ವ್ಯಾಖ್ಯೆ ಮತ್ತು ಅರ್ಥವನ್ನು ಮಹಿಳೆಗೆ ಅನ್ವಯಿಸಿದಾಗ ಸಶಕ್ತತೆಯ ಗುಣಗಳ ಕೊರತೆ ಕಂಡುಬರುತ್ತದೆ. ಮುಖ್ಯವಾಗಿ ಅವರಿಗೆ ಸಂಪನ್ಮೂಲಗಳ ಮೇಲೆ ಹಿಡಿತವಿಲ್ಲ. ಕೆಲವೊಮ್ಮೆ ಇದ್ದರೂ ಸೀಮಿತವಾಗಿರುತ್ತದೆ. ಪುರುಷ ಪ್ರಧಾನ ಮೌಲ್ಯಗಳು ಸಾಂಪ್ರದಾಯಿಕ ಮೌಲ್ಯಗಳು, ಸಾಮಾಜಿಕ ಕಟ್ಟುಪಾಡುಗಳು ಅವರ ಸಶಕ್ತತೆಯನ್ನು ಮಿತಿಗೊಳಿಸುತ್ತವೆ. ಕೇವಲ ನಿರ್ಧಾರ ಕೈಗೊಳ್ಳುವ ಹಕ್ಕನ್ನು ಪಡೆಯುವುದೇ ಸಶಕ್ತೀಕರಣವಲ್ಲ. ಮಹಿಳೆಯರು ತಮ್ಮನ್ನು ತಾವು ಸಮರ್ಥರು ಮತ್ತು ನಿರ್ಧಾರ ಕೈಗೊಳ್ಳುವ ಶಕ್ತಿ ಇರುವವರೆಂದು ಭಾವಿಸಬೇಕು.

ಮಹಿಳಾ ಸಶಕ್ತೀಕರಣವನ್ನು ಸಾಧಿಸುವಲ್ಲಿ ಶಿಕ್ಷಣ (ಔಪಚಾರಿಕ ಮತ್ತು ಅನೌಪಚಾರಿಕ) ಆರ್ಥಿಕ ಸ್ವಾವಲಂಬಿ ಕಾರ್ಯಕ್ರಮಗಳು, ಜಾಗೃತಿ, ಸಂಘಟನೆ, ರಾಜಕೀಯದಲ್ಲಿ ಭಾಗವಹಿಸುವಿಕೆ, ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಮಗ್ರಗೊಳಿಸುವುದು ಮುಂತಾದವು ಬಹಳ ಮುಖ್ಯ ಸಾಧನಗಳಾಗಿವೆ. ಅಲ್ಲದೆ 2001ರ ಮಹಿಳಾ ಸಶಕ್ತೀಕರಣದ ರಾಷ್ಟ್ರೀಯ ನೀತಿಯು ಸಹ ಮಹಿಳೆಯರ ಉನ್ನತಿ, ಅಭಿವೃದ್ಧಿ ಮತ್ತು ಸಶಕ್ತೀಕರಣವನ್ನು ಸಾಧಿಸುವುದನ್ನೇ ಗುರಿಯಾಗಿಸಿಕೊಂಡಿದೆ.

ಇದರೊಂದಿಗೆ ಮಹಿಳೆಯರ ಅಗತ್ಯಗಳಿಗೆ, ವಿಶೇಷವಾಗಿ ಕೌಟುಂಬಿಕ ಹಿಂಸೆ, ವೈಯಕ್ತಿಕ ಆಘಾತಕ್ಕೆ ಸಂಬಂಧಿಸಿದಂತೆ ಕಾನೂನು ವ್ಯವಸ್ಥೆ, ಮಹಿಳಾ ವಿರುದ್ಧದ ತಾರತಮ್ಯ ಹೋಗಲಾಡಿಸುವಲ್ಲಿರುವ ವೈಯಕ್ತಿಕ ಕಾಯಿದೆಗಳ ಬದಲಾವಣೆ, ಆಸ್ತಿಯ ಹಕ್ಕು ಮತ್ತು ಉತ್ತರಾಧಿಕಾರಕ್ಕೆ ಸಂಬಂಧಿಸಿದ ಕಾನೂನುಗಳಲ್ಲಿ ಬದಲಾವಣೆ, ಆರ್ಥಿಕ ಸಬಲೀಕರಣಕ್ಕಾಗಿ ಮೈಕ್ರೋ ಕ್ರೆಡಿಟ್ ಪದ್ಧತಿ, ಕೃಷಿ ತರಬೇತಿ, ಧನಸಹಾಯ, ಕೈಗಾರಿಕೆಗೆ ಸಹಾಯ, ಆರೋಗ್ಯ ಮತ್ತು ಪೌಷ್ಟಿಕತೆ, ಕುಡಿಯುವ ನೀರು ಪೂರೈಕೆ, ಮನೆ ಮತ್ತು ಆಶ್ರಯ ಇತ್ಯಾದಿಗಳ ಮೂಲಕವೂ ಮಹಿಳಾ ಸಶಕ್ತೀಕರಣ ಸಾಧನೆಗೆ ಪ್ರಯತ್ನ ನಡೆಯುತ್ತಿದೆ.

ಶಿಕ್ಷಣ, ಉದ್ಯೋಗ, ವಿಭಕ್ತ ಕುಟುಂಬ ಪದ್ಧತಿ, ಪ್ರಜಾಪ್ರಭುತ್ವದ ಮೌಲ್ಯಗಳು ರಾಜಕೀಯ ಮಹಿಳಾ ಸಂಘಟನೆಗಳು, ಶಾಸನಾತ್ಮಕ ಸುಧಾರಣೆಗಳು, ಸರಕಾರಿ ಅಭಿವೃದ್ಧಿ

ಯೋಜನೆಗಳು, ಸರ್ಕಾರೇತರ ಸಂಘ ಸಂಸ್ಥೆಗಳ ಪ್ರಯತ್ನದ ಫಲವಾಗಿ ಮಹಿಳೆಯ ಸ್ಥಾನಮಾನದ ಉನ್ನತಿಗೆ ಕೊಡುಗೆಯನ್ನೀಯುವಲ್ಲಿ ಸಹಕಾರಿಯಾಗಿದೆ, ನಿಜ. ಆದರೂ ನಮ್ಮ ಪಿತೃ ಪ್ರಧಾನ ವ್ಯವಸ್ಥೆ ಹಾಗೂ ಅದರ ಲಕ್ಷಣಗಳನ್ನು ಹೊಂದಿರುವ ನಮ್ಮ ಸಾಮಾಜಿಕ ಮತ್ತು ರಾಜಕೀಯ ನಿಯಮಾವಳಿಗಳು ಸಾಕಷ್ಟು ಅಡ್ಡಿಗಳನ್ನು ಸೃಷ್ಟಿಸುತ್ತಲೇ ಇವೆ.

ಆಧುನಿಕ ಯುಗದ ಸುಧಾರಣೆಗಳ ಬಳಿಕವೂ ಭಾರತದಲ್ಲಿ ಮಹಿಳೆಯರ ಅನೇಕ ಸಮಸ್ಯೆಗಳು ಜೀವಂತವಾಗಿರುವುದು ಮತ್ತು ಹುಟ್ಟಿಕೊಳ್ಳುತ್ತಿರುವುದೇ ಇದಕ್ಕೆ ಸಾಕ್ಷಿ. ತಾರತಮ್ಯ ಧೋರಣೆ, ನೈತಿಕತೆಯ ದ್ವಂದ್ವಗಳು, ದೌರ್ಜನ್ಯಗಳು, ಶ್ರಮ ವಿಭಜನೆ, ನಿರುದ್ಯೋಗ, ಅನಕ್ಷರತೆ ಮತ್ತು ಅನಾರೋಗ್ಯ, ವರದಕ್ಷಿಣೆಯೊಂದಿಗೆ ಅಂಟಿಕೊಂಡಿರುವ ಪಿಡುಗುಗಳು, ವಿವಾಹ ವಿಚ್ಛೇದನ, ಮಾಧ್ಯಮಗಳಲ್ಲಿ ಹೆಣ್ಣಿನ ಶೋಷಣೆ ಇತ್ಯಾದಿ, ಸ್ತ್ರೀಯರಲ್ಲಿ ಆತ್ಮಸ್ಥೈರ್ಯ ಮತ್ತು ವಿಶ್ಲೇಷಣಾತ್ಮಕ ಚಿಂತನೆಯ ಕೊರತೆ, ಸಂಘಟನೆಯ ಕೊರತೆ ಮತ್ತು ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಪೂರಕ ಪರಿಸರವಿಲ್ಲದೇ ಇರುವುದು ಆಗಿದೆ. ಮಹಿಳೆಯರು ತಮ್ಮ ಯೋಚನಾ ದಿಶೆಯನ್ನು ಬದಲಿಸಬೇಕಾಗಿದೆ. ಈ ದೃಷ್ಟಿಯಲ್ಲಿ ಸಮಾಜದಲ್ಲಿ ಪೂರಕ ವಾತಾವರಣ ಸೃಷ್ಟಿಯಾಗಬೇಕು.

ಮಹಿಳಾ ಸಂಘಟನೆಗಳು ದೃಢವಾಗಿ ರಚನಾತ್ಮಕ ಚಟುವಟಿಕೆಗಳ ತಾಣವಾಗಬೇಕು. ಮನೆಮನೆಗಳಲ್ಲಿ ಲಿಂಗ ಸಮಾನತೆಯ ಜಾಗೃತಿ ಮೂಡಬೇಕು. ಸ್ತ್ರೀ ಅಬಲೆಯಲ್ಲ, ಸಶಕ್ತಳೆಂಬ ಸತ್ಯದ ಅರಿವು ನಾಗರಿಕರೆಲ್ಲರಲ್ಲೂ ಮೂಡಬೇಕಿದೆ. ಮಹಿಳೆಯರು ತಮ್ಮ ಯೋಚನಾ ದಿಶೆಯನ್ನು ಬದಲಿಸಬೇಕು. ಈ ದೃಷ್ಟಿಯಲ್ಲಿ ಸಮಾಜದಲ್ಲಿ ಪೂರಕ ವಾತಾವರಣ ಸೃಷ್ಟಿಯಾಗಬೇಕು. ಹಾಗೂ ಕುಟುಂಬವು ಸಮಾಜದ ಮುಖ್ಯ ಅಂಗವಾಗಿರುವುದರಿಂದ ಬದಲಾವಣೆಯು ಪ್ರತಿ ಕುಟುಂಬದಲ್ಲಿ ಪ್ರಾರಂಭವಾಗಬೇಕಿದೆ.

## ಬುಡಕಟ್ಟು ಮಹಿಳೆ ಸಾಮಾಜಿಕ – ಆರ್ಥಿಕ ಸ್ಥಿತಿ :

ಬುಡಕಟ್ಟು ನೆಲೆಗಳಲ್ಲಿ ಈ ನೆಲದಲ್ಲಿದ್ದ ಕೃಷಿ ಪ್ರಧಾನ ಉತ್ಪಾದನಾ ವ್ಯವಸ್ಥೆ ಅದರ ಪ್ರಮುಖ ಲಕ್ಷಣವಾಗಿದ್ದ ಮಾತೃ ಪ್ರಧಾನ ವ್ಯವಸ್ಥೆಗಳು, ಪಿತೃ ಪ್ರಧಾನ ವ್ಯವಸ್ಥೆಯ ಆಕ್ರಮಣದಿಂದಾಗಿ ನಾಶವಾದಾಗ ಆ ಯುಗದ ಅನೇಕ ಸ್ತ್ರೀ ಪ್ರಧಾನ ಅಂಶಗಳು ಮತ್ತು ಆಚರಣೆಗಳು ಅರೆಬರೆಯಾಗಿ ಅವಶೇಷಗಳ ರೂಪದಲ್ಲಿ ಬದುಕಿನ ಮುಖ್ಯ ವಿಚಾರಧಾರೆಯಿಂದ ಒತ್ತರಿಸಲ್ಪಟ್ಟು ಅಂಚಿನ ನೆಲೆಯಲ್ಲಿ ಅಥವಾ ಸಮಾಜದ ಕೆಳಸ್ತರದಲ್ಲಿ ಉಸಿರಾಡುತ್ತಿದೆ. (ಸ್ತ್ರೀವಾದಿ

ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ. ಸಂಪಾದಕರು ಬಿ.ಎನ್ ಸುಮಿತ್ರಾ ಬಾಯಿ ಮತ್ತು ಎನ್ ಗಾಯತ್ರಿ 1995)

ಈ ಮೇಲಿನ ಅಭಿಪ್ರಾಯದಿಂದ ಹೆಚ್ಚಿನ ಬುಡಕಟ್ಟು ಜನಾಂಗದಲ್ಲಿ ಮಾತೃ ಪ್ರಧಾನ ವ್ಯವಸ್ಥೆಯಿದ್ದು ತಾಯಿಯೇ ಮನೆಯ ಯಜಮಾನಿ ಮತ್ತು ಅವಳ ಹೆಸರಲ್ಲೇ ಮನೆಯ ಎಲ್ಲಾ ವ್ಯವಹಾರಗಳು ನಡೆಯುತ್ತಿತ್ತು ಎನ್ನುವ ಅಂಶವನ್ನು ಗಮನಿಸಬಹುದು.

ಯಾವುದೇ ಒಂದು ಸಮುದಾಯದ ಸ್ಥಿತಿಯನ್ನು ಆ ಸಮುದಾಯದಲ್ಲಿ ಜನರು ಅನುಭವಿಸುತ್ತಿರುವ ಆರೋಗ್ಯ ಮತ್ತು ಪೌಷ್ಠಿಕತೆ, ಸಾಕ್ಷರತೆ, ಶಿಕ್ಷಣ, ಉದ್ಯೋಗ, ಆದಾಯ ಮತ್ತು ಮಹಿಳೆಯ ಮಟ್ಟಗಳು ನಿರ್ಧರಿಸುತ್ತವೆ. ಬುಡಕಟ್ಟು ಮಹಿಳೆಯ ಸಂಖ್ಯೆ ಉಳಿದ ಸಮುದಾಯಗಳಂತೆ ಒಟ್ಟು ಸಮುದಾಯದ ಸುಮಾರು ಅರ್ಧದಷ್ಟಿದೆ. 1981 ರಲ್ಲಿ 1000 ಪುರುಷರಿಗೆ 983 ರಷ್ಟಿದ್ದ ಮಹಿಳೆಯರ ಸಂಖ್ಯೆ 1991 ರಲ್ಲಿ 1000 ಸ್ತ್ರೀಯರಿಗೆ 972ರಷ್ಟು ಇದ್ದು ಬುಡಕಟ್ಟು ಮಹಿಳೆಯರ ಸಂಖ್ಯೆ ಕಡಿಮೆಯಾಗುತ್ತಿರುವುದು ಗೋಚರಿಸುತ್ತದೆ.

ಮಹಿಳೆಯ ಪಾತ್ರ ಮತ್ತು ಸ್ಥಾನಮಾನಗಳು ವಿವಿಧ ವಾತಾವರಣಕ್ಕೆ ಅನುಗುಣವಾಗಿ ಬದಲಾಗುತ್ತಿವೆ. ಉದಾಹರಣೆಗೆ ಸಾಂಸ್ಕೃತಿಕ ಅಂಶಗಳು, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯ ಪ್ರಕ್ರಿಯೆ, ವಿಜ್ಞಾನ, ತಂತ್ರಜ್ಞಾನ ಮತ್ತು ಆಧುನೀಕರಣದ ಪ್ರಭಾವಗಳು ಮಹಿಳೆಯ ಸ್ಥಾನ ಮಾನವನ್ನು ಬದಲಾಯಿಸುವ ಪ್ರಮುಖ ಅಂಶಗಳು. ಮತ್ತು ಇವೆಲ್ಲವೂ ಅವಳು ಮನೆಯಲ್ಲಿ ಮತ್ತು ಸಮಾಜದಲ್ಲಿ ನಿರ್ಧಾರ ತೆಗೆದುಕೊಳ್ಳುವಲ್ಲಿ ಮುಖ್ಯ ಪಾತ್ರವಹಿಸುತ್ತವೆ.

ಮಾನವ ಶಾಸ್ತ್ರಜ್ಞರು ಬುಡಕಟ್ಟು ಮಹಿಳೆಯ ಸ್ಥಾನಮಾನದ ಕುರಿತು ವಿಭಿನ್ನ ಅಭಿಪ್ರಾಯಗಳನ್ನು ನೀಡಿದ್ದಾರೆ. ಕೆಲವು ಮಾನವ ಶಾಸ್ತ್ರಜ್ಞರ ಪ್ರಕಾರ ಮೂಲನಿವಾಸಿ ಸಮುದಾಯವು ಮಹಿಳೆಗೆ ಅತ್ಯುನ್ನತ ಸ್ಥಾನಮಾನ ನೀಡಿದೆ ಎಂದರೆ ಇನ್ನು ಕೆಲವು ವಿದ್ವಾಂಸರು ಬುಡಕಟ್ಟು ಮಹಿಳೆಯರು ಕೆಳಮಟ್ಟದ ಸ್ಥಾನಮಾನವನ್ನು ಹೊಂದಿದ್ದು ಗಂಡಸರಿಗೆ ಅಡಿಯಾಳಾಗಿರುವುದೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಶಿರಿಸಲ್ಕರ್ – (1975) ಒಮಿಸಂ (1977) ಮಜುಮ್‌ದಾರ್, ಮದನ್ (1980) ದತ್ (1985) ರಾಜು (1988) ಲೂವಿ (1988)

ಅವರುಗಳ ಪ್ರಕಾರ ಬುಡಕಟ್ಟು ಮಹಿಳೆಯರ ಸ್ಥಾನಮಾನ ಉನ್ನತ ಮತ್ತು ಕೆಳಮಟ್ಟದೊಂದಿಗೆ ಹಾಗೂ ಅದರ ನಡುವೆ ಸ್ಥಾನ ಮಾನಗಳು ಇವೆ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಮಹಿಳೆ ಸಮಾಜದ ಇತರ ಮಹಿಳೆಯರಂತೆ ಸಾಕಷ್ಟು ಜವಾಬ್ದಾರಿಗಳನ್ನು ಹೊತ್ತಿದ್ದಾಳೆ. ಮನೆಯ ನಿರ್ವಹಣೆ, ಮಕ್ಕಳ ಲಾಲನೆ ಪಾಲನೆ, ಕೃಷಿಯಲ್ಲಿ ತೊಡಗಿಸಿಕೊಳ್ಳುವಿಕೆ, ಸಾಕು ಪ್ರಾಣಿಗಳ ಜವಾಬ್ದಾರಿ ಇತ್ಯಾದಿ. ಇವೆಲ್ಲ ಕೆಲಸಗಳಿಗೆ ಆಕೆಗೆ ಆದಾಯವಿಲ್ಲ ಹಾಗೂ ಆರ್ಥಿಕವಾಗಿ ಪರಿಗಣಿಸಲ್ಪಡುವುದಿಲ್ಲ.

ಜೆ.ಹೆಚ್. ಹಟ್ಟನ್ (1921) ಡಿ.ಎನ್. ಮಜುಮ್‌ದಾರ್ (1973) ಮುಂತಾದವರು ಬುಡಕಟ್ಟು ಮಹಿಳೆ ಮುಖ್ಯವಾಹಿನಿಯ ಇತರ ಮಹಿಳೆಯರಿಗಿಂತ ಸಾಮಾಜಿಕ ಚಟುವಟಿಕೆಗಳಲ್ಲಿ ಹೆಚ್ಚು ಸ್ವತಂತ್ರಳು ಎಂದಿದ್ದಾರೆ. ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯ ಸ್ಥಾನಮಾನಗಳನ್ನು ಗುರುತಿಸಲು ಸಮುದಾಯದ ಜನಸಂಖ್ಯೆ, ಲಿಂಗಾನುಪಾತ, ಉದ್ಯೋಗ, ಶಿಕ್ಷಣ, ಆರೋಗ್ಯಮಟ್ಟ, ಮದುವೆಯ ವಯಸ್ಸು, ನಿರ್ಧಾರ ತೆಗೆದುಕೊಳ್ಳುವ ಹಕ್ಕು, ಸಾಮಾಜಿಕ ಭಾಗವಹಿಸುವಿಕೆ, ಅರಿವು, ಗಳಿಕೆಯ ಮೇಲಿರುವ ಹಕ್ಕು, ರಾಜಕೀಯ ಭಾಗವಹಿಸುವಿಕೆ ಮುಂತಾದವುಗಳನ್ನು ಮಾನದಂಡವಾಗಿ ಬಳಸಿಕೊಳ್ಳಬೇಕಾಗುತ್ತದೆ.

2001ರಲ್ಲಿ 1000 ಪುರುಷರಿಗೆ 972 ಮಹಿಳೆಯರು ಎನ್ನುವ ಈ ಅಂಕಿಅಂಶಗಳು ಬುಡಕಟ್ಟು ಮಹಿಳೆಯರ ಅಧ್ಯಯನದ ಅಗತ್ಯತೆಯನ್ನು ಸೂಚಿಸುತ್ತದೆ.

ಬುಡಕಟ್ಟು ಮಹಿಳೆ ಕೆಲವು ಅಂಶಗಳನ್ನು ಹೊರತು ಪಡಿಸಿದರೆ ಪುರುಷರಿಗೆ ಸಮಾನವಾದ ಘನತೆಯನ್ನು ಹೊಂದಿದ್ದಾಳೆ. ಸಾಮಾಜಿಕವಾಗಿ ಅವಳನ್ನು ಕೀಳಾಗಿ ಪರಿಗಣಿಸದೆ ಪುರುಷನೊಂದಿಗೆ ಸಮಾನವಾಗಿ ಎಲ್ಲಾ ಸಾಮಾಜಿಕ ಚಟುವಟಿಕೆಗಳಲ್ಲೂ ಅವಳು ಪಾಲುದಾರಳು. ವಿವಾಹ ವಿಚ್ಛೇದನ, ಮರುವಿವಾಹಗಳು ಈ ಸಮುದಾಯದಲ್ಲಿ ಸಾಮಾನ್ಯ. ಲಿಂಗಾಧಾರಿತ ಶ್ರಮ ವಿಭಜನೆಯಿದ್ದರೂ ಮಹಿಳೆಯ ಆರ್ಥಿಕ ಕೊಡುಗೆ ಪುರುಷನಿಗಿಂತ ಕಡಿಮೆ ಏನಿಲ್ಲ. ಮದುವೆ ನಂತರ ಹೆಣ್ಣಿನ ದುಡಿಮೆಯ ಗಳಿಕೆ ಗಂಡನ ಮನೆಗೆ ಸೇರುವ ಕಾರಣದಿಂದ ಹೆಣ್ಣು ಮಕ್ಕಳ ಶಿಕ್ಷಣ ಕಡೆಗಣಿಸಲ್ಪಟ್ಟಿದೆ ಎಂದರೆ ತಪ್ಪಾಗಲಾರದು.

ಇತರ ಸಮುದಾಯಗಳಿಗೆ ಹೋಲಿಸಿದಾಗ ಬುಡಕಟ್ಟು ಮಹಿಳೆ ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತಾಳೆ. ಸತತ ದುಡಿಯುತ್ತ ಕುಟುಂಬದ ಆರ್ಥಿಕತೆ ಮತ್ತು

ನಿರ್ವಹಣೆಯಲ್ಲಿ ಬಹಳ ಮುಖ್ಯ ಪಾತ್ರ ವಹಿಸುತ್ತಾಳೆ. ಸಂಪಾದಿಸುವುದರಿಂದ ಆರ್ಥಿಕವಾಗಿ ಅವಳು ಸ್ವತಂತ್ರಳು. ಆದರೆ ಕೆಲವು ಬುಡಕಟ್ಟುಗಳಲ್ಲಿ ಅವಳ ಸ್ಥಿತಿ ಹೀನಾಯವಾಗಿದೆ. ಅನಕ್ಷರತೆ, ಒಂದೇ ಶ್ರಮದ ಕೆಲಸಕ್ಕೆ ಕೂಲಿಯಲ್ಲಿ ತಾರತಮ್ಯ, ಅಧಿಕ ಕೆಲಸದ ಒತ್ತಡ, ಕಾಡು ಬರಿದಾಗುತ್ತಿರುವುದು, ಉದ್ಯೋಗದ ಸಮಸ್ಯೆ, (ಉದಾ: ದಕ್ಷಿಣ ಕನ್ನಡದ ಕೊರಗ ಮಹಿಳೆಯರು) ಕೃಷಿಯಲ್ಲಿ ಆಧುನಿಕ ಉಪಕರಣಗಳಿಂದಾಗಿ ಕೆಲಸಕ್ಕಾಗಿ ವಲಸೆ ಹೋಗುವುದು, ಲೈಂಗಿಕ ಶೋಷಣೆ ಇತ್ಯಾದಿ.

ರಾಜಕೀಯವಾಗಿಯೂ ಬುಡಕಟ್ಟು ಮಹಿಳೆಯರಲ್ಲಿ ಜಾಗೃತಿಯ ಮಟ್ಟ ಕಡಿಮೆಯಿದ್ದು ಇವರು ಒಂದು ಶಕ್ತಿಶಾಲಿ ಗುಂಪಾಗಿ ಬೆಳೆದು ಮುಖ್ಯವಾಹಿನಿಯ ಒಳಗೆ ಸೇರಲು ಕಾಲಾವಧಿ ಬೇಕಾಗುತ್ತದೆ.

ಪ್ರಸ್ತುತ ದಿನಗಳಲ್ಲಿ ಕೆಲವು ಬೆರಳೆಣಿಕೆಯಷ್ಟು ಮಹಿಳೆಯರು ಮಾತ್ರವೇ ತಳಮಟ್ಟದ ರಾಜಕೀಯದಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಸರ್ಕಾರವು ತಳಮಟ್ಟದ ರಾಜಕಾರಣದಲ್ಲಿ ತಂದಿರುವ 33% ಮೀಸಲಾತಿಯು ಬುಡಕಟ್ಟು ಮಹಿಳೆಯರಿಗೆ ಅನುಕೂಲವಾಗಿದ್ದರೂ ಅನಕ್ಷರತೆ, ಮೂಢನಂಬಿಕೆ, ಪೌಷ್ಠಿಕ ಆಹಾರದ ಕೊರತೆ, ಬಡತನ ರೇಖೆಗಿಂತ ಕೆಳಗಿನ ಜೀವನ, ದಿನ ಸಾಗಿಸಲು ದಿನವಿಡೀ ದುಡಿಯುವ ಬುಡಕಟ್ಟು ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಉತ್ತಮವಾಗಿರಬೇಕು ಎಂದು ನಿರೀಕ್ಷಿಸಲು ಸಾಧ್ಯವಿಲ್ಲ. ಚುನಾಯಿತ ಬುಡಕಟ್ಟು ಮಹಿಳೆಗೆ ರಾಜಕೀಯ ಸಶಕ್ತೀಕರಣ, ಸಬಲೀಕರಣ ಎನ್ನುವ ಪದಗಳು ಗ್ರಹಿಕೆಗೆ ಬಾರದ ಪದಗಳಾಗಿವೆ. ಸಂವಿಧಾನ, ಸರಕಾರ ಎಷ್ಟೇ ಸ್ಥಾನಮಾನವನ್ನು ನೀಡಿದರೂ ಅದನ್ನು ಪರಿಪೂರ್ಣವಾಗಿ ಉಪಯೋಗಿಸಿಕೊಳ್ಳುವ ಅರಿವು ಬುಡಕಟ್ಟು ಮಹಿಳೆಗೆ ಬೇಕಾಗಿದೆ. ಇದಕ್ಕಾಗಿ ಆರ್ಥಿಕ ಸ್ಥಿರತೆ ಮತ್ತು ಶಿಕ್ಷಣದ ಅಗತ್ಯವಿದೆ. ಅರ್ಥಶಾಸ್ತ್ರಜ್ಞ ಅಮರ್ತ್ಯಸೇನ್‌ರ **'ಧಾರಣಶಕ್ತಿಯ ಕೊರತೆಯೇ ಬಡತನ'** ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಬುಡಕಟ್ಟು ಸಮುದಾಯಗಳಲ್ಲಿ ಮಹಿಳೆ ಮನೆಯೊಳಗೆ ಸುರಕ್ಷಿತಳು. ಪುರುಷ ಪ್ರಧಾನ ವ್ಯವಸ್ಥೆಯ ಮೌಲ್ಯಗಳು ತುಂಬಾ ಅವಳ ಮೇಲೆ ಪ್ರಭಾವ ಬೀರಿಲ್ಲ. ಆದುದರಿಂದ ಅವಳು ಸ್ವತಂತ್ರಳು ಎಂದು ಕೊಂಡರೂ ಪರಿಸ್ಥಿತಿಯ ಒತ್ತಡಗಳು, ಜೀವನದ ಘಟನೆಗಳು ಮತ್ತು ಆಘಾತಗಳು ಬುಡಕಟ್ಟು ಮಹಿಳೆಯರನ್ನು ಹೆಚ್ಚು ದೃಢವಾಗಿಯೂ ಸಬಲೆಯನ್ನಾಗಿ (ಅವರ ಅರಿವಿಗೆ ಬಾರದೆ) ಮಾಡಿದೆ ಎಂದುಕೊಳ್ಳಬಹುದು.

ಪರಿಸ್ಥಿಯ ಸಂಘರ್ಷಗಳು ಬುಡಕಟ್ಟು ಮಹಿಳೆಯನ್ನು ದುಡಿಯಲು ಪ್ರೇರೇಪಿಸಿ ಆರ್ಥಿಕವಾಗಿ ಗಳಸಿದರೂ, ಅದೆಷ್ಟೇ ಬುಡಕಟ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗಿವೆ. ಅನಕ್ಷರತೆ, ಬಡತನ, ಕೌಶಲ್ಯಗಳ ಕೊರತೆ, ಮೂಢನಂಬಿಕೆ, ಬಿಡುವಿಲ್ಲದೆ ಶ್ರಮದ ಕೆಲಸ, ಕೂಲಿಯಲ್ಲಿ ತಾರತಮ್ಯ, ಉದ್ಯೋಗದ ಅಭದ್ರತೆ, ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವುದರಿಂದ ಸಮರ್ಪಕ ಕಾನೂನಿನ ಕೊರತೆ ಆರೋಗ್ಯದ ಸಮಸ್ಯೆ, ಮಾಹಿತಿಯ ಕೊರತೆ ಇವೆಲ್ಲವೂ ಬುಡಕಟ್ಟು ಮಹಿಳೆಯರು ಮುಖ್ಯವಾಹಿನಿಯ ಜನರೊಂದಿಗೆ ಸ್ಪರ್ಧಿಸಲು ಇರುವ ಅಡ್ಡಿಗಳಾಗಿವೆ.

## ಕೊರಗ ಬುಡಕಟ್ಟು ಮಹಿಳೆಯರು

ಕರ್ನಾಟಕದ ಕೇರಳ ಹಾಗೂ ತಮಿಳ್ನಾಡು ರಾಜ್ಯಗಳಲ್ಲಿ ಕೊರಗ ಬುಡಕಟ್ಟು ಕಾಣಸಿಗುತ್ತದೆ. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕೇರಳದ ಕಾಸರಗೋಡು ಜಿಲ್ಲೆಗಳಲ್ಲಿ ಇವರು ದಟ್ಟವಾಗಿಯೂ ಹಾಗೂ ಇತರೆಡೆಗೆ ಚದುರಿದಂತೆ ಹರಡಿಕೊಂಡಿದ್ದಾರೆ. ದಕ್ಷಿಣ ಕನ್ನಡದ ಮೂಲನಿವಾಸಿಗಳಾದ ಇವರು ಅತ್ಯಂತ ನಿಕೃಷ್ಟ ರೀತಿಯಲ್ಲಿ ಬದುಕುತ್ತಿರುವ ಜನಾಂಗ. ಇವರ ವಾಸಸ್ಥಾನಗಳಗೆ 'ಕೊಪ್ಪ' ಇಲ್ಲವೆ 'ಕೊಟ್ಟ' ಎಂದು ಕರೆಯುತ್ತಾರೆ. ಕೊರಗರು ಕೊರಗ ಮಾತೃಭಾಷೆಯನ್ನು ಹೊಂದಿದ್ದಾರೆ. ಆದರೆ ಇತರರೊಂದಿಗೆ ಇವರು ತುಳು ಹಾಗೂ ಕನ್ನಡ ಭಾಷೆಯನ್ನು ಬಳಸುತ್ತಾರೆ.

ಸರ್ವಚೇತನವಾದಿಗಳಾದ ಇವರು ಆದಿತ್ಯವಾರವನ್ನು ಬಹಳ ಮುಖ್ಯವೆಂದು ಗ್ರಹಿಸಿ ಸೂರ್ಯನನ್ನು ಆರಾಧಿಸುತ್ತಾರೆ. ಕೊರಗರ ಅತ್ಯಂತ ಮುಖ್ಯ ದೈವ '**ಕೊರಗ ತನಿಯ**'. ಕೊರಗರ ಸಾಂಸ್ಕೃತಿಕ ನಾಯಕನಾದ ಕೊರಗ ತನಿಯನನ್ನು ಇತರ ಸಮುದಾಯದವರೂ ಆರಾಧಿಸುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತ್ಯಂತ ಜನಪ್ರಿಯವಾಗಿರುವ ಕೋಣನ ಓಟದ ಸ್ಪರ್ಧೆಯಲ್ಲಿ ವಿಶೇಷವಾಗಿ ಪಾಲ್ಗೊಳ್ಳುತ್ತಾರೆ. ಕೊರಗರ ಪ್ರಿಯವಾದ ವಿಶಿಷ್ಟ ಚರ್ಮವಾದ್ಯ ಡೋಲು. ಕೊರಗರು ಹಿಂದೆ ಹೆಚ್ಚಾಗಿ ಗುಡ್ಡ ಗಾಡಿನಲ್ಲಿಯೂ, ಗಿರಿಕಂದರಗಳಲ್ಲಿಯೂ ವಾಸಿಸುತ್ತಾ ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಾ ಗೆಡ್ಡೆಗೆಣಸುಗಳನ್ನು ಸಂಗ್ರಹಿಸಿ ಮಾರುತ್ತಿದ್ದರು.

ಕೆಲವರು ಗುಡ್ಡದ ತಪ್ಪಲಲ್ಲಿ ಜೀವಿಸುವವರು. ಕಾಡುತ್ಪನ್ನಗಳಂದ ಚಾಪೆ, ಬುಟ್ಟಿ, ಕುಕ್ಕೆ ಹಾಗೂ ಹಗ್ಗ ಇವುಗಳನ್ನು ತಯಾರಿಸಿ ಮಾರಾಟ ಮಾಡಿ ಜೀವನ

ನಿರ್ವಹಿಸುತ್ತಿದ್ದರು. ಹೀಗಾಗಿ ಕರ್ನಾಟಕದ ಕೊರಗರನ್ನು **Primitive Tribe** ಎಂದು ಗುರುತಿಸಲಾಗಿದೆ. ಕೊರಗ ಎನ್ನುವ ಒಂದು ಜನಾಂಗದಲ್ಲಿಯೇ ಸೊಪ್ಪು ಕೊರಗರು, ಚಿಪ್ಪು ಕೊರಗರು, ಅಂಡೆಕೊರಗರು, ಮುಂಡು ಕೊರಗರು ಮತ್ತು ಬಾಕುಡೆ ಕೊರಗರು ಎಂದು ಗುರುತಿಸಲಾಗುತ್ತದೆ.

ಮೈಗೆ ಬಟ್ಟೆ ತೊಡದೆ ಮರಗಳ ಎಲೆ ಬಳಸಿ ಮೈ ಮುಚ್ಚುವುದರಿಂದ **ಸೊಪ್ಪು ಕೊರಗರು** ಎಂದೂ, ಗಂಡಸರು ಮತ್ತು ಹೆಂಗಸರು ಮೊಣಕಾಲಿನವರೆಗೆ ಪಂಚೆ ಸುತ್ತಿಕೊಳ್ಳುವುದರಿಂದ **ಮುಂಡುಕೊರಗರು** ಎಂದೂ, ಬಿದಿರಿನಲ್ಲಿ ತಯಾರಿಸಿದ ಒಂದು ಕೊಳವೆಗೆ ದಾರ ಕಟ್ಟಿ ಕೊರಳಿಗೆ ಹಾಕುವುದರಿಂದ **ಅಂಡೆ ಕೊರಗ**ರೆಂದು, ತೆಂಗಿನ ಚಿಪ್ಪಿಗೆ ದಪ್ಪನೆ ದಾರದಿಂದ ಕಟ್ಟಿ ಬಗಲಿಗೆ ಅಥವಾ ಕುತ್ತಿಗೆಗೆ ಹಾಕಿಕೊಳ್ಳುವುದರಿಂದ **ಚಿಪ್ಪು ಕೊರಗ**ರೆಂದೂ, ಮೂಲತಃ ಭಂಗಿ ವೃತ್ತಿಯನ್ನು ಮಾಡುವವರಾದ್ದರಿಂದ **ಬಾಕುಡೆ ಕೊರಗ**ರೆಂದು ಕರೆಯುತ್ತಾರೆ. ಕೊರಗರಲ್ಲಿ ಕುಂದನ್ನಾಯ, ಸಾಲೆತ್ತನ್ನಾಯ, ಮುಂಜಿತ್ತನ್ನಾಯ ಮತ್ತು ಬಂಗೇರ ಎನ್ನುವ ಬಳಿಗಳು ಇವೆ.

ಕೊರಗರು ಇತ್ತೀಚಿನವರೆಗೆ ಬಡತನದಿಂದಾಗಿ ಭಿಕ್ಷೆ ಬೇಡಿ ತಿನ್ನುತ್ತಿದ್ದರು. ಎಂಜಲನ್ನ ತಿನ್ನುತ್ತಿದ್ದರು. ಅನಕ್ಷರತೆ, ಕೌಶಲ್ಯಗಳ ಕೊರತೆಯಿಂದಾಗಿ ಸರಿಯಾದ ಉದ್ಯೋಗವೂ ಇಲ್ಲದೆ, ಹೆಚ್ಚಿನ ಕೊರಗರು ಇನ್ನೂ ಬಡತನದ ರೇಖೆಯ ಕೆಳಗೆ ಜೀವಿಸುತ್ತಿದ್ದಾರೆ. ಅಸ್ಪೃಶ್ಯತೆಯೂ ಇದರೊಂದಿಗೆ ಸೇರಿಕೊಂಡು ಕೊರಗರ ಸ್ಥಿತಿಯನ್ನು ಶೋಚನೀಯಗೊಳಿಸಿದೆ.

1991ನೇ ಜನಗಣತಿಯ ಪ್ರಕಾರ (ದ.ಕ, ಉಡುಪಿ, ಕಾಸರಗೋಡು) ಕೊರಗರ ಜನಸಂಖ್ಯೆ 22,000 ಇದ್ದು, 2006 –2007ರ ಸಮೀಕ್ಷೆಯ ಪ್ರಕಾರ ಉಡುಪಿ, ಮಂಗಳೂರು, ಕಾಸರಗೋಡು ಜಿಲ್ಲೆಗಳ ಒಟ್ಟು ಕೊರಗರ ಜನಸಂಖ್ಯೆ 18,500ಕ್ಕೆ ಇಳಿದಿದೆ. ಉಡುಪಿ ಜಿಲ್ಲೆಯಲ್ಲಿರುವ ಒಟ್ಟು ಕುಟುಂಬಗಳು 1,693. ಒಟ್ಟು ಜನಸಂಖ್ಯೆ 11,375, ಮಂಗಳೂರು, ಬೆಳ್ತಂಗಡಿ, ಸುಳ್ಯ, ಪುತ್ತೂರು ಮತ್ತು ಬಂಟ್ವಾಳ ತಾಲೂಕಿನಲ್ಲಿರುವ ಒಟ್ಟು 1,141 ಕುಟುಂಬಗಳಲ್ಲಿ ಒಟ್ಟು 4,585 ಕೊರಗ ಜನರಿದ್ದಾರೆ. ಕಾಸರಗೋಡಿನಲ್ಲಿ ಒಟ್ಟು 404 ಕುಟುಂಬಗಳಲ್ಲಿ 2,540 ಜನರಿದ್ದಾರೆ. 2011ರ ಪ್ರಕಾರ ವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಒಟ್ಟು ಕೊರಗರ ಸಂಖ್ಯೆ 6,332 ಮಾತ್ರ ಎಂದು ಗುರುತಿಸಲಾಗಿದೆ.

ಕೊರಗ ಜನಾಂಗದಲ್ಲಿ ಸಾಂಸ್ಕೃತಿಕ ಸಮಸ್ಯೆ (ಕಲೆಗೆ ಮನ್ನಣೆ ದೊರೆಯದೇ ಇರುವುದು) ಸಾಮಾಜಿಕ ಸಮಸ್ಯೆಗಳು (ಆರೋಗ್ಯದ ಸಮಸ್ಯೆ, ಪೌಷ್ಠಿಕ ಆಹಾರದ ಕೊರತೆ, ಅಸ್ಪೃಶ್ಯತೆ) ಆರ್ಥಿಕ ಸಮಸ್ಯೆಗಳಾದ ನಿರುದ್ಯೋಗ, ವಸತಿ ಹೀನತೆ, ನಿರಕ್ಷರತೆ, ಅನಾರೋಗ್ಯ ನಾಗರಿಕ ಸವಲತ್ತುಗಳು ಕೊರಗರಿಗೆ ಲಭಿಸದಿರುವುದು ಮತ್ತು ಭೂಮಿರಹಿತತೆ ಮುಂತಾದ ಸಮಸ್ಯೆಗಳು ಜೀವಂತವಾಗಿದೆ.

ಕೊರಗ ಮಹಿಳೆ ಸತತ ಹೊರಗೆ ದುಡಿಯುತ್ತ ಹಾಗೂ ಸಂಸಾರದ ನಿರ್ವಹಣೆಯನ್ನು ಮಾಡುತ್ತಾಳೆ. ಹಿಂದೆ ಕೊರಗರ ಹೆಂಗಸರು, ಮುಂಡನ್ನು ಸೊಂಟಕ್ಕೆ ಕಟ್ಟಿ ರವಿಕೆಯನ್ನು ತೊಡುತ್ತಿದ್ದರು.  ಸೆರಗು ಹಾಕುತ್ತಿರಲಿಲ್ಲ. ಇಂದಿಗೂ ಹಳ್ಳಿಗಾಡಿನಲ್ಲಿರುವ ಹಿರಿಯ ಹೆಂಗಸರು ಅದೇ ಹಳೆಯ ಪದ್ಧತಿ ಅನುಸರಿಸುತ್ತಿದ್ದಾರೆ. ಆದರೆ ಪೇಟೆ, ಪಟ್ಟಣಗಳ ಸಂಪರ್ಕಕ್ಕೆ ಬಂದ ಕೊರಗ ಹೆಂಗಸರು ಇತರೇ ಹಿಂದು ಮಹಿಳೆಯರಂತೆ ಸೀರೆ ಉಡುತ್ತಾರೆ. ಇಂದು ಇತರ ಹೆಣ್ಣು ಮಕ್ಕಳಂತೆ ಕೊರಗ ಹೆಣ್ಣು ಮಕ್ಕಳು ರಾತ್ರಿ ಉಡುಪು ಮತ್ತು ಚೂಡಿದಾರ್‌ನ್ನು ಧರಿಸುತ್ತಾರೆ. ಕೊರಗ ಮಹಿಳೆಯರು ಹಿಂದಿನಿಂದಲೂ ವಿವಿಧ ಬಣ್ಣ ಬಣ್ಣಗಳ ಮಣಿಸರಗಳ ಪ್ರಿಯರು. ಕೈಗೆ ಹಿತ್ತಾಳೆ, ಕಬ್ಬಿಣ, ತಾಮ್ರದಿಂದ ಮಾಡಿದ ಬಳೆಗಳನ್ನು ಹೆಂಗಸರು ಧರಿಸುವರು. ಇಂದಿನ ಕೊರಗ ಮಹಿಳೆಯರು ಎಲ್ಲರಂತೆ ಗಾಜಿನ ಬಳೆ, ಕರಿಮಣಿಸರ, ಕಾಲ್ಗೆಜ್ಜೆಗಳನ್ನು ಧರಿಸುತ್ತಾರೆ.

ಹಿರಿಯ ಮಹಿಳೆಯರಿಗೆ ಐತು, ತೋಮು, ಅಂಗಾರು, ಗುರುಬಿ, ಭಾಗಿ ಎನ್ನುವ ಹಳೆ ಕಾಲದ ಹೆಸರುಗಳಿದ್ದರೆ ಈಗಿನ ಕೊರಗ ಹೆಣ್ಣುಮಕ್ಕಳಿಗೆ ಮುಖ್ಯವಾಹಿನಿಯ ಸಮುದಾಯದ ಇತರ ಹೆಣ್ಣು ಮಕ್ಕಳ ಹೆಸರುಗಳೇ ಇವೆ.

ಕೊರಗ ಸಮಾಜದಲ್ಲಿ ಕನ್ಯೆಗೆ ಬಹಳ ಮಹತ್ವವಿದೆ. ಕನ್ಯೆಯೇ ದೇವರ ಪೂಜೆಗೆ ಮುಂದಾಳು. ಅದಲ್ಲದೆ ವಿವಾಹಕ್ಕೆ ಮುನ್ನ ಹೆಣ್ಣಿನ ಒಪ್ಪಿಗೆಯಿದ್ದರೆ ಮಾತ್ರವೇ ವಿವಾಹ ನಡೆಯುವುದು. ಈ ಅರ್ಥದಲ್ಲಿ ಕೊರಗರ ವಿವಾಹ ಸಂಸ್ಕೃತಿ ವೈದಿಕ ವಿವಾಹ ಸಂಸ್ಕಾರಕ್ಕಿಂತಲೂ ಭಿನ್ನವು ಪ್ರಗತಿ ಪರವೂ ಆಗಿರುವುದನ್ನು ಗುರುತಿಸಬಹುದು. ಹೆಣ್ಣಿಗೆ ವಿವಾಹದಲ್ಲಿ ಗಂಡು ಒಂದು ರೂ ತೆರಕೊಡುತ್ತಾನೆ. ಇಲ್ಲಿ ಆಧುನಿಕ ಮುಖ್ಯವಾಹಿನಿಯ ಸಮಸ್ಯೆಯಾದ ವರದಕ್ಷಿಣೆ ಇಲ್ಲದೆ ಇರುವುದನ್ನು ಗುರುತಿಸಬಹುದು. ಗಂಡು ಹೆಣ್ಣಿಗೆ ವಿವಾಹದಂದು ಮಣಿಸರ ತೊಡಿಸುತ್ತಾನೆ. ಇದು ಕರಿಮಣಿ ಅಲ್ಲ. ಬಣ್ಣ ಬಣ್ಣಗಳ ಮಣಿಸರ,

ತಾಳ ಇರುವುದಿಲ್ಲ. ಹೆಚ್ಚು ಹೆಚ್ಚು ಮಣಿಸರಗಳುಳ್ಳ ಕೊರಗರು ಶ್ರೀಮಂತರೆಂಬ ನಂಬಿಕೆಯೂ ಅವರಲ್ಲಿದೆ.

ಕೊರಗರಲ್ಲಿ ಸಣ್ಣ ಪುಟ್ಟ ಕಾರಣಗಳಿಗೆ ವಿವಾಹ ವಿಚ್ಛೇದನವಾಗುವುದಿಲ್ಲ. ಆದರೆ ಕ್ಷೇತ್ರ ಕಾರ್ಯದಲ್ಲಿ ಕಂಡಂತೆ ಕೆಲ ಗಂಡಸರು ಕ್ಷುಲ್ಲಕ ಕಾರಣಗಳಿಗಾಗಿ ಪತ್ನಿಯನ್ನು ತೊರೆದು ಹೋಗಿರುವುದನ್ನು ಗಮನಿಸಲಾಗಿದೆ. ವಿಧುರ ಮತ್ತು ವಿಧವೆ ಮದುವೆಯಾಗಬಹುದು ಆದರೆ ಧಾರೆಯೆರೆಯುವುದು ಮರುಮದುವೆಯಲ್ಲಿಲ್ಲ.

ಮನೆಯೊಳಗೆ ಹೆಣ್ಣಿಗೆ ಸಮಾನ ಸ್ಥಾನವಿದೆ. ಗಂಡಸು ಹೆಂಗಸು ಸೇರಿ ಮನೆಯೊಳಗಿನ ಕೆಲಸ ಹಂಚಿಕೊಳ್ಳುತ್ತಾರೆ.

ಪ್ರಸ್ತುತ ಹೆಚ್ಚಿನ ಕೊರಗ ಮಹಿಳೆಯರು ಬೀಡಿ ಕಟ್ಟುವ ಕೆಲಸದಲ್ಲಿದ್ದಾರೆ. ಶಿಕ್ಷಣದ ಕೊರತೆಯಿಂದಾಗಿ ಸೂಕ್ತ ಉದ್ಯೋಗವೂ ದೊರಕುತ್ತಿಲ್ಲ. ಮಕ್ಕಳಿಗೆ ಶಿಕ್ಷಣದ ಪ್ರಾಮುಖ್ಯತೆಯ ಅರಿವಿಲ್ಲ. ಬಹಳ ಸರಳ ಜೀವನವನ್ನು ನಡೆಸುವ ಕೊರಗ ಮಹಿಳೆಯರು ನಾಳಿನ ಬಗ್ಗೆ ಹೆಚ್ಚು ಚಿಂತಿಸುವುದಿಲ್ಲ. ಅನೇಕ ಸರ್ಕಾರೇತರ ಸಂಸ್ಥೆಗಳು ಇವರ ಏಳಿಗೆಗಾಗಿ ಕೆಲಸ ಮಾಡುತ್ತವೆ. ಶತ ಶತಮಾನದಲ್ಲಿ ಶೋಷಣೆಗೊಳಗಾದ ಈ ಸಮುದಾಯವು ದಾಸ್ಯದಿಂದ ಈಗಷ್ಟೇ ಹೊರಬರುತ್ತಿದೆ. ಹಾಗಾಗಿ ತನ್ನ ವ್ಯಕ್ತಿತ್ವದ ಬಗ್ಗೆ, ತನ್ನ ಕುಟುಂಬದ ಒಳಿತಿನ ಬಗ್ಗೆ ಸ್ಪಷ್ಟವಾಗಿ ಯೋಚಿಸಲು ಕೊರಗ ಮಹಿಳೆಗೆ ಇನ್ನೂ ಸಮಯ ಬೇಕಾದೀತು.

## ಮರಾಠಿ ನಾಯ್ಕ ಬುಡಕಟ್ಟು ಮಹಿಳೆ

ಒಂದು ಕಾಲದಲ್ಲಿ ಮಹಾರಾಷ್ಟ್ರದ ಕಡೆಯಿಂದ ಕಾಡುಗಳಿಗೆ ವಲಸೆ ಬಂತೆಂದು ಹೇಳಲಾಗುವ ಮರಾಠಿ ನಾಯ್ಕ ಸಮುದಾಯವು ಕರಾವಳಿ ಜಿಲ್ಲೆಗಳಲ್ಲಿ ಸಾಂದ್ರವಾಗಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ವಿರಳವಾಗಿ ಕಂಡುಬರುತ್ತದೆ. ಗೋವೆಯು ಪೋರ್ಚುಗೀಸರ ಸ್ವಾಧೀನವಾದಾಗ ಅಲ್ಲಿಯ ಜನರನ್ನು ಓಡಿಸಲ್ಪಟ್ಟವರಲ್ಲಿ ಮರಾಠಿಯವರು ಸೇರಿದ್ದು, ಸುಮಾರು 14ನೇ ಶತಮಾನದಲ್ಲಿ ಇವರು ದಕ್ಷಿಣ ಕನ್ನಡಕ್ಕೆ ಬಂದವರೆಂದು ಇತಿಹಾಸದಿಂದ ತಿಳಿಯುತ್ತದೆ.

1971 ರಲ್ಲಿ 48,840 ರಷ್ಟಿದ್ದ ಮರಾಠಿ ನಾಯ್ಕರು 2011ರ ಅಂಕಿಅಂಶದಂತೆ ಇವರ ಒಟ್ಟು ಜನಸಂಖ್ಯೆ ವಿಭಜಿತ ದಕ್ಷಿಣ ಕನ್ನಡದಲ್ಲಿ 45,972 ಆಗಿರುತ್ತದೆ. ದಕ್ಷಿಣ ಕನ್ನಡ

ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ ಹಾಗೂ ಉಡುಪಿ, ಕುಮಟಾದ ಕಡೆ ಅತ್ಯಧಿಕ ಸಂಖ್ಯೆಯಲ್ಲಿ ಮರಾಠಿ ನಾಯ್ಕರು ಕಂಡುಬರುತ್ತಾರೆ. ಮತ್ತು ನಾಯ್ಕ ಎಂಬ ಕುಲನಾಮವನ್ನು ಹೊಂದಿದ್ದಾರೆ. ಮರಾಠಿ ಭಾಷೆಯನ್ನಾಡುವ ಮರಾಠಿ ನಾಯ್ಕರು ಸಂಪರ್ಕ ಭಾಷೆಯಾಗಿ ಕನ್ನಡ ಮತ್ತು ತುಳುವನ್ನು ಅವಲಂಬಿಸಿದ್ದಾರೆ.

ಗೋಂದೋಳು ಪೂಜೆ ಮರಾಠಿಗಳ ಒಂದು ಪ್ರಮುಖ ಆಚರಣೆಯಾಗಿದೆ. ಹಾಗೂ ಇದು ಮರಾಠಿಗರ ಅನನ್ಯತೆಯ ಸಂಕೇತವೂ ಆಗಿರುವ ಈ ಪೂಜೆಗೆ ಅದರದ್ದೇ ಆದ ಐತಿಹ್ಯವಿದೆ. ಭೈರವ ಪೂಜೆ, ಮಹಾಶಿವರಾತ್ರಿ, ಚಾಂದ್ರಮಾನ ಯುಗಾದಿ ಇವರ ಮಹತ್ವದ ಹಬ್ಬಗಳಾಗಿವೆ. ಸಂಕ್ರಮಣ, ಕೆಡ್ಡಸ ಮನೆತುಂಬಿಸುವುದು, ಪುದ್ವಾರ್, ದೀಪಾವಳಿ, ಗೋಪುಜೆ, ತಿರುಪತಿ ವೆಂಕಟರಮಣನಿಗೆ ಮುಡಿಪು ಸೇವೆ, ಕಲ್ಲುರ್ಟಿ ಮತ್ತು ಪಂಜುರ್ಲಿಗೆ ಅಗೆಲು ಮುಂತಾದವನ್ನು ಬಹಳ ಭಕ್ತಿಯಿಂದ ಆಚರಿಸುತ್ತಾರೆ. ಹಿಂದೆ ಬೇಟೆಗಾರರಾಗಿದ್ದ ಮರಾಠಿಗರು ಇಂದು ಕೃಷಿ ಹಾಗೂ ಕೃಷಿ ಕೂಲಿಯನ್ನು ಅವಲಂಬಿಸಿದ್ದಾರೆ.

ಹೆಚ್ಚಿನ ಎಲ್ಲಾ ಮರಾಠಿ ನಾಯ್ಕ ಮಹಿಳೆಯರು ಈಗ ಸ್ವಸಹಾಯ ಸಂಘದ ಸದಸ್ಯೆಯರಾಗಿದ್ದಾರೆ. ವಿಶ್ಲೇಷಣಾತ್ಮಕವಾದ ಚಿಂತನೆಯ ಕೊರತೆಯಾಗಿರುವುದರಿಂದ ಸ್ವಸಹಾಯ ಸಂಘಗಳು ಕೇವಲ ಹಣದ ವ್ಯವಹಾರಕ್ಕಷ್ಟೇ ಸೀಮಿತ ಎನ್ನುತ್ತಾರೆ.

1991ರ ಜನಗಣತಿಯ ಪ್ರಕಾರ 25.52% ಸ್ತ್ರೀಯರು ಸಾಕ್ಷರರಾಗಿದ್ದು 45.12% ಪುರುಷ ಸಾಕ್ಷರರಿದ್ದಾರೆ. ಹೆಚ್ಚಿನ ಮಹಿಳೆಯರು ಬೀಡಿ ಕಟ್ಟುವ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಮರಾಠಿ ನಾಯ್ಕ ಮಹಿಳೆಯರಲ್ಲಿ ಶಿಕ್ಷಣದ ಮಟ್ಟ ಕಡಿಮೆ ಇದೆ. ವಿವಾಹ ವಿಚ್ಛೇದನವಿದ್ದು ವಿಧವಾ ವಿವಾಹಗಳು ಜರುಗುತ್ತವೆ.

ಆತ್ಮೀಯ ಗುಣಗಳು ಮತ್ತು ಸಾಧು ಸ್ವಭಾವವನ್ನು ತಮ್ಮದಾಗಿಸಿಕೊಂಡ ಮರಾಠಿ ನಾಯ್ಕ ಮಹಿಳೆಯರು ಇಂದಿನ ಸ್ಪರ್ಧಾತ್ಮಕ ಜಗತ್ತಿನಲ್ಲಿ ಸಬಲರಾಗಬೇಕಾದರೆ ಆರ್ಥಿಕವಾಗಿ ಸ್ವಾವಲಂಬಿಗಳಾಗುವುದರೊಂದಿಗೆ ಅನೌಪಚಾರಿಕ ಶಿಕ್ಷಣ, ಸೂಕ್ತ ತರಬೇತಿ ಮತ್ತು ಅರಿವಿನ ಅಗತ್ಯವಿದೆ. ಉಳಿದ ಮೂರು ಬುಡಕಟ್ಟು ಮಹಿಳೆಯರಿಗೆ ಹೋಲಿಸಿದರೆ ಆರ್ಥಿಕವಾಗಿ ಮುನ್ನಡೆಯುತ್ತಿರುವ ಒಂದು ಸಮುದಾಯವಾಗಿದೆ.

## ಮಲೆಕುಡಿಯ ಮಹಿಳೆಯರು

ಮಲೆಯನ್, ಕುಡಿಯನ್, ಗೌಡರ್, ಕುಡಿಯ, ಈಡಿಗ, ಮಲೆಕುಡಿಯ ಇತ್ಯಾದಿ ಹೆಸರುಗಳಿಂದ ಗುರುತಿಸಲ್ಪಡುವ ಈ ಜನಾಂಗ ಮುಖ್ಯವಾಗಿ ಗಿರಿಗಳಲ್ಲಿ ವಾಸಿಸುವರು.

ಅನಾದಿ ಕಾಲದಿಂದಲೂ ಮಲೆಗಳ ತುದಿಗಳಲ್ಲಿ ವಾಸ ಮಾಡುತ್ತಿರುವುದರಿಂದ ಮಲೆಕುಡಿಯರು (ಕುಡಿ ಎಂದರೆ ತುದಿ) ಎಂದು ಗುರುತಿಸಲಾಗಿದೆ.

ಅನೇಕರು ಮಲೆಗಳನ್ನು ತೊರೆದು ತಪ್ಪಲು ಪ್ರದೇಶಗಳಿಗೆ ಹಾಗೂ ಇನ್ನೂ ಅನೇಕ ಕುಟುಂಬದವರು ಒಂದು ಮಲೆಯಿಂದ ಮತ್ತೊಂದು ಮಲೆಗೆ ವಲಸೆ ಹೋಗುವುದರೊಂದಿಗೆ ಕುಮರಿಯ ಬೆಳೆಯನ್ನು ಬೆಳೆಯುತ್ತ, ಸ್ವತಂತ್ರ ಜೀವಿಗಳಾಗಿ, ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ, ವಾತಾವರಣದ ಅನುಕೂಲಕ್ಕೆ ತಕ್ಕ ಹಾಗೆ, ತಮ್ಮ ವಸತಿ ಬದಲಾಯಿಸುತ್ತ ಇದ್ದ ಈ ಜನಾಂಗದಲ್ಲಿ, ಪ್ರಸ್ತುತ ಕೆಲ ಕುಟುಂಬದವರು ಪೂರ್ಣವಾಗಿ ಮಲೆ ತೊರೆದು ಬಯಲು ಪ್ರದೇಶಕ್ಕೆ ಇಳಿದು ತೋಟಗಳಲ್ಲಿ ದುಡಿಯುತ್ತಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆ, ಕೊಡಗು, ಹಾಗೂ ಚಿಕ್ಕಮಂಗಳೂರು ಜಿಲ್ಲೆಗಳಲ್ಲಿ ಹಂಚಿ ಹೋಗುವ ಈ ಸಮುದಾಯದಲ್ಲಿ ಹೆಚ್ಚಿನವರು ಬೆಟ್ಟದ ತುದಿಯಲ್ಲಿ ಇದ್ದು ಆಧುನಿಕ ಸೌಲಭ್ಯಗಳಿಲ್ಲದೆ ಕಡು ಬಡುತನದಲ್ಲಿರುವ ಕುಟುಂಬಗಳು ಇವೆ. ಹಾಗೆ ಮುಖ್ಯವಾಹಿನಿಯಲ್ಲಿ ಆಧುನಿಕ ಸೌಲಭ್ಯಗಳನ್ನು ಬಳಸಿಕೊಳ್ಳುತ್ತಿರುವ ಕುಟುಂಬಗಳೂ ಇವೆ.

ಇಡೀ ಕುಡಿಯ ಜನಾಂಗವನ್ನು ಒಗ್ಗೂಡಿಸುವ ಕೇಂದ್ರ ಸಂಸ್ಥೆಯಾಗಲಿ, ಸಾಮಾಜಿಕ ವ್ಯವಸ್ಥೆಯಾಗಲಿ, ಹಾಗೂ ತಾಂತ್ರಿಕ ನೆಲೆಯಾಗಲಿ ಇಲ್ಲದಿರುವ ಕಾರಣದಿಂದ ಪ್ರತಿಗುಂಪಿನ ಮಲೆಕುಡಿಯರು ತಮ್ಮ ತಮ್ಮ ಜೀವನ ಶೈಲಿಯನ್ನು ಆಯಾ ಭೌಗೋಳಿಕ ಸನ್ನಿವೇಶಕ್ಕೆ ತಕ್ಕಂತೆ ತಾವು ಯಾವ ಇತರ ಜಾತಿಯವರೊಡನೆ ದಿನ ನಿತ್ಯಸಂಪರ್ಕಕ್ಕೆ ಸಿಗುತ್ತಿದ್ದಾರೆಯೋ ಅವರನ್ನು ಅನುಕರಿಸುತ್ತ ಮೂಲ ಕುಡಿಯ ಜನಾಂಗಕ್ಕೆ ಇದ್ದಿರಬಹುದಾದ ಭಾಷೆ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿದ್ದಾರೆ.

ಮಲೆಕುಡಿಯರ ಮೂಲ ಕತೆಗಳ ಪ್ರಕಾರ ಅವರು ಸಮುದಾಯಕ್ಕೆ ಭೂಮಿಯಲ್ಲಿ ಹುಟ್ಟಿಕೊಂಡಿರುವುದರ ಕುರಿತಾಗಿ ಅನೇಕ ಕತೆಗಳಿವೆ. ತುಳುನಾಡಿನ ಮೂಲ ಜನಾಂಗವೆಂದು ಗುರುತಿಸಿಕೊಳ್ಳುವ ಈ ಸಮೂಹ ದೈವ, ದೇವತೆಗಳನ್ನು ನಂಬುತ್ತ ಬಹಳ

ಸರಳ ಜೀವನ ನಡೆಸುತ್ತಿರುವುದನ್ನು ಗಮನಿಸಬಹುದು. ಹೆಚ್ಚಾಗಿ ಮಂಗಳೂರು ಮತ್ತು ಕೊಡಗು ಜಿಲ್ಲೆಯಲ್ಲಿ ಇವರು ಕಂಡುಬರುತ್ತಾರೆ. 2001ರ ಅಂಕಿ ಅಂಶಗಳ ಪ್ರಕಾರ ಒಟ್ಟು ಮಲೆಕುಡಿಯರ ಜನಸಂಖ್ಯೆ 24,000ವಿದ್ದು ವಿಭಜಿತ ದಕ್ಷಿಣಕನ್ನಡ ಜಿಲ್ಲೆಯಲ್ಲಿ 2011ರ ಪ್ರಕಾರ ಇವರ ಜನಸಂಖ್ಯೆ 10,629 ಆಗಿರುತ್ತದೆ.

ಮಲೆಕುಡಿಯ ಜನಾಂಗವು ಅವಿಭಕ್ತ ಕುಟುಂಬ ಜೀವನ ನಡೆಸುವವರಾಗಿದ್ದು ಕಾಲಕಳೆದಂತೆ ವಿಭಕ್ತ ಕುಟುಂಬ ಜೀವನಕ್ಕೆ ಒಗ್ಗಿಕೊಂಡಿದ್ದಾರೆ. ಕೃಷಿ ಭೂಮಿಯಲ್ಲಿ ದುಡಿದು ಜೀವಿಸುವ ಮಲೆಕುಡಿಯರು ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಾರೆ. ಮೂಲತಃ ಸಸ್ಯಾಹಾರಿಗಳಾಗಿದ್ದು ಹಬ್ಬ ಹರಿದಿನಗಳಲ್ಲಿ, ವಿಶೇಷ ದಿನಗಳಲ್ಲಿ ಸ್ವತಃ ಬೇಟೆಯಾಡಿದ ಪ್ರಾಣಿಗಳ ಮಾಂಸಾಹಾರವನ್ನು ಸೇವಿಸುತ್ತಾರೆ.

ಹೆಚ್ಚಿನ ಪುರುಷರು ಕೃಷಿ ಕಾರ್ಮಿಕರಾಗಿದ್ದು ಜನನ ಸಂದರ್ಭದಲ್ಲಿ ವಿಶೇಷ ಆಚರಣೆ (ಕಿವಿ ಚುಚ್ಚುವುದು, ಕೂದಲು ತೆಗೆಯುವುದರ ಶಾಸ್ತ್ರಗಳಲ್ಲಿ) ಹಾಗೂ ಮದುವೆ, ಸೀಮಂತ, ಉತ್ತರ ಕ್ರಿಯೆಯಲ್ಲಿ ತುಳುವರ ಸಂಪ್ರದಾಯವನ್ನೇ ಪಾಲಿಸುವ ಮಲೆಕುಡಿಯರು ಭೂತಾರಾಧನೆ, ಆಟಿ ಅಮವಾಸ್ಯೆ, ಎಳ್ಳಮವಾಸ್ಯೆ, ಕಾವೇರಿ ಸಂಕ್ರಮಣ, ಕೆಡ್ಡಸ, ದೀಪಾವಳಿ, ಮುಂತಾದ ಹಬ್ಬಗಳನ್ನು ಆಚರಿಸುವುದು ಸಾಮಾನ್ಯವಾಗಿದೆ. ತಮ್ಮದೇ ಆದ ನ್ಯಾಯ ನಡವಳಿಕೆಗಳು ಇರುವುದು ಈ ಜನಾಂಗದ ವೈಶಿಷ್ಟ್ಯವಾಗಿದೆ.

ಮಲೆಕುಡಿಯ ಮಹಿಳೆಯರು ಬಹಳ ಸರಳ ಉಡುಗೆಗಳನ್ನು ಹೊಂದಿದ್ದು, ಹಿಂದೆ ಗೇಂಟೆ (ಉದ್ದನೆಯ ವಸ್ತ್ರದೊಂದಿಗೆ ಹಿಂದೆ ನೆರಿಗೆಯಿರುವುದು) ಕಟ್ಟುತ್ತಿದ್ದು, ಈಗ ಸಾಮಾನ್ಯವಾಗಿ ಎಲ್ಲರೂ ಸೀರೆ ರವಿಕೆ ಧರಿಸುತ್ತಾರೆ. ಕಿವಿಗೆ ಓಲೆ, ಮೂಗಿಗೆ ನತ್ತು, ಕೊರಳಲ್ಲಿ ಮಣಿಸರ ಧರಿಸುವ ಇವರಲ್ಲಿ ಯಾವುದೇ ರೀತಿಯ ವಿಶೇಷವಾದ ಆಭರಣಗಳಾಗಲಿ, ವಸ್ತ್ರವಿನ್ಯಾಸಗಳಾಗಲಿ ಇಲ್ಲದ ಸರಳಜೀವನ.

ದಕ್ಷಿಣ ಕನ್ನಡದ ಮಲೆಕುಡಿಯ ಮಹಿಳೆಯರು ಮುಖ್ಯವಾಹಿನಿಯ ಮಹಿಳೆಯರಂತೆಯೇ ಅರೆಕಾಲಿಕ ಉದ್ಯೋಗವಾದ ಬೀಡಿಯನ್ನು ಅವಲಂಬಿಸಿದ್ದಾರೆ. ಬರುವ ಅತ್ಯಲ್ಪ ಆದಾಯದಿಂದ ಮನೆ ನಿರ್ವಹಣೆಗೆ ಪುರುಷರೊಂದಿಗೆ ಸಹಕರಿಸುತ್ತಿದ್ದಾರೆ.

ಶಿಕ್ಷಣದ ಮಟ್ಟ ಕಡಿಮೆ ಇರುವುದರಿಂದ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಮಲೆಕುಡಿಯ ಮಹಿಳೆಯರು ಅನಕ್ಷರಸ್ಥರೂ ಆಗಿರುವುದರಿಂದ ,ಸಾಮಾಜಿಕವಾಗಿ, ಆರ್ಥಿಕವಾಗಿ

ಕೆಳಮಟ್ಟದಲ್ಲಿರುವ ಮಹಿಳೆಯರು ಆರೋಗ್ಯದ ಸಮಸ್ಯೆ, ನೈರ್ಮಲ್ಯದ ಕುರಿತು ಜ್ಞಾನದ ಕೊರತೆ, ಪೌಷ್ಠಿಕ ಆಹಾರದ ಕೊರತೆ, ಮತ್ತು ಕೃಷಿ ಭೂಮಿಗಳ ಕೊರತೆಗಳನ್ನು ಸಮುದಾಯದಲ್ಲಿ ಕಾಣಬಹುದಾಗಿದೆ.

ಒಟ್ಟು ಸಮುದಾಯಕ್ಕೆ ಪರಿಣಾಮಕಾರಿಯಾದ ಸಂಘಟನೆಯ ಕೊರತೆಯೂ ಇರುವುದರಿಂದ ಮಹಿಳೆಯರ ಅನೌಪಚಾರಿಕ ಶಿಕ್ಷಣಕ್ಕೂ ಅಡ್ಡಿಯಾಗಿರುವ ಅಂಶವನ್ನು ಗಮನಿಸಬಹುದಾಗಿದೆ.

## ಕುಡುಬಿ ಬುಡಕಟ್ಟು ಮಹಿಳೆ

ಹಿಂದುಳಿದ ಮತ್ತು ವೈಶಿಷ್ಟ್ಯಪೂರ್ಣ ಎಲ್ಲಾ ಬುಡಕಟ್ಟು ಲಕ್ಷಣಗಳನ್ನು ಹೊಂದಿರುವ ಕುಡುಬಿಯರು ಪರಿಶಿಷ್ಟೇತರ ಬುಡಕಟ್ಟು ಸಮುದಾಯವಾಗಿ ಬದುಕುತ್ತಿದ್ದಾರೆ. ಮುಖ್ಯವಾಗಿ ಕರಾವಳಿ ಪ್ರದೇಶದಲ್ಲಿ ವಾಸಿಸುತ್ತಿದ್ದು ಉಡುಪಿ, ಕುಂದಾಪುರ, ಕಾರ್ಕಳ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ತಾಲೂಕು ಮತ್ತು ಬಂಟ್ವಾಳ ತಾಲೂಕಿನ ಎರಡು ಚಿಕ್ಕ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ಪೋರ್ಚುಗೀಸರ ಮತಾಂತರದ ಒತ್ತಾಯಕ್ಕೆ ಸಿಲುಕಿದ ಕುಡುಬಿಗಳು ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿದ್ದಾರೆ. ಕರ್ನಾಟಕದ ಕರಾವಳಿ ಪ್ರದೇಶವಲ್ಲದೆ ಕೇರಳ ಹಾಗೂ ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿಯೂ ಕುಡುಬಿಯವರು ನೆಲೆಸಿದ್ದಾರೆ.

ಭಾರತದ ಬುಡಕಟ್ಟುಗಳ ಅಧ್ಯಯನ ನಡೆಸಿದ ಖ್ಯಾತ ಜರ್ಮನಿಯ ಸಾಮಾಜಿಕ ಮಾನವ ಶಾಸ್ತ್ರಜ್ಞ ಡಾ। ಸ್ಟೀವನ್ ಪ್ರಚ್ ಅವರು ಕುಡುಬಿಯರನ್ನು ದಕ್ಷಿಣ ಭಾರತದಲ್ಲಿರುವ ಆಹಾರ ಸಂಗ್ರಹಣೆಯ ಹಂತದಲ್ಲಿರುವ ಮತ್ತು ಬೇಟೆಯಾಡುವ ಬುಡಕಟ್ಟು ಜನಾಂಗವೆಂದು ಕರೆದಿದ್ದಾರೆ. ಒಲಿವಿನೂ ಜೆ ಎಫ್ ಗೋಮ್ಸ್, ಎಲ್ ಕೆ ಅನಂತಕೃಷ್ಣ ಐಯ್ಯರ್, ಡಾ। ಪಿ ಗುರುರಾಜ ಭಟ್, ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೆಜೆಟಿಯರ್‌ನ ಮುಖ್ಯ ಸಂಪಾದಕರಾದ ಅಭಿಶಂಕರ್ ಅವರು ತಮ್ಮ ಗ್ರಂಥಗಳಲ್ಲಿ ಮತ್ತು ವಿವಿಧ ವರದಿಗಳಲ್ಲಿ ಕುಡುಬಿಯರನ್ನು ಬೇಟೆಯಾಡುವ ಬುಡಕಟ್ಟು, ಅಭಿರುಚಿಯ ಬುಡಕಟ್ಟು, ಸ್ಥಳ ಬದಲಿಕೆಯ ಬೇಸಾಯ ಮಾಡುವ ಕಾಡಿನ ಬುಡಕಟ್ಟು, ಮೂಲನಿವಾಸಿ ವಂಶದ ಭೂಹೀನ ಕಾರ್ಮಿಕರು ಎಂದು ವರ್ಣಿಸಿದ್ದಾರೆ.

ಭಾರತದ ಪ್ರಸಿದ್ಧ ಸಮಾಜ ಶಾಸ್ತ್ರಜ್ಞರಾದ ಜಿ.ಎಸ್.ಘುರ್ಯೆ ಹಾಗೂ ಇಂಗ್ಲೆಂಡಿನ ಸಾಮಾಜಿಕ ಮಾನವಶಾಸ್ತ್ರಜ್ಞರಾದ ಜೆ.ಎಚ್.ಹಟ್ಟನ್ ಅವರ ಪ್ರಕಾರ ಕುಡುಬಿ

ಪದವು ಒಂದು ಸಮಾಜದ ಕೃಷಿ ವೃತ್ತಿಗೆ ಸಂಬಂಧಿಸಿದ್ದು ಆದಿವಾಸಿ ಬುಡಕಟ್ಟು ಮೂಲಕ್ಕೆ ಸೇರಿವೆ ಎಂದಿದ್ದಾರೆ. ಕುಡುಬಿ ಪದವು ಬ್ರಿಟಿಷ್ ಜನಾಂಗೀಯ ಸಮೀಕ್ಷಾಗಾರರು ಮತ್ತು ರಾಜ್ಯದ ಆಡಳಿತಗಾರರು ನೀಡಿದ ಪದವಾಗಿದೆ ಎಂದು ವೈ ರವೀಂದ್ರನಾಥ್ ರಾವ್ ಅವರು (2003) ತಮ್ಮ ಅಧ್ಯಯನದಲ್ಲಿ ತಿಳಿಸಿದ್ದಾರೆ.

ಕುಡುಬಿ ಜನಾಂಗವು ಕುಡ್ಮಿ ಎನ್ನುವ ಪದದ ಮೂಲಪದವಾಗಿದೆ. ಮದರಾಸು ಸರ್ಕಾರ 1941 ರಿಂದ 1956 ರವರೆಗೆ ಇವರನ್ನು ಪರಿಶಿಷ್ಟ ಜಾತಿ ಎಂದು ಪರಿಗಣಿಸಿತ್ತು. ಇವರು ಬುಡಕಟ್ಟು ಜನಾಂಗಕ್ಕೆ ಸೇರಿದರೂ ಅವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಕರ್ನಾಟಕದ ಹಾಗೂ ದೇಶದ ಇತರ ಬುಡಕಟ್ಟು ಜನರ ಹಾಗೆಯೇ ಕೆಳಮಟ್ಟದಾಗಿದ್ದು ಕರ್ನಾಟಕ ಸರ್ಕಾರ 1993 ರರವರೆಗೆ ಇವರನ್ನು 'ಬಿ' ಗುಂಪಿಗೆ ಸೇರಿಸಿ ನಂತರ 1994 ರಲ್ಲಿ ಚಿನ್ನಪ್ಪ ರೆಡ್ಡಿ ಆಯೋಗದ ಶಿಫಾರಸಿನಂತೆ ಸರಕಾರ ಇವರನ್ನು ಅತೀ ಹಿಂದುಳಿದ ಜಾತಿ ಎಂದು ಪುನರ್ ವರ್ಗೀಕರಣ ಮಾಡಿದೆ ಎಂದು ಮೇಲಿನ ಅಧ್ಯಯನದಲ್ಲಿ ದಾಖಲಿಸಲಾಗಿದೆ. ಪ್ರವರ್ಗ 1 ರಲ್ಲಿ ಪ್ರಸ್ತುತ ಇವರು ಸೇರಿದ್ದು ಪರಿಶಿಷ್ಟ ಪಂಗಡಕ್ಕೆ ಒದಗುವ ಎಲ್ಲಾ ಸೌಲಭ್ಯದಿಂದ ಇವರು ವಂಚಿತರು.

1984 ರ ಪ್ರಕಾರ ಅವಿಭಜಿತ ದಕ್ಷಿಣ ಕನ್ನಡದಲ್ಲಿ ಕುಡುಬಿಯರ ಜನಸಂಖ್ಯೆ 23,847 ಇದ್ದು 2001 ರಪ್ರಕಾರ ಸುಮಾರು 50,000 ಕುಡುಬಿಯರಿದ್ದಾರೆ. 2011 ರ ಪ್ರಕಾರ ವಿಭಜಿತ ದ.ಕ ಜಿಲ್ಲೆಯಲ್ಲಿ 26,000 ಕುಡುಬಿ ಜನಸಂಖ್ಯೆ ಇದೆ.

ಆರ್ಯನ್ ಭಾಷಾ ಸಮುದಾಯಕ್ಕೆ ಸೇರಿದ ಕೊಂಕಣಿ ಕುಡುಬಿಯರ ಮಾತೃ ಭಾಷೆಯಾಗಿದೆ. ಕುಡುಬಿಯರಲ್ಲಿ ಒಟ್ಟು ಆರು ಒಳಪಂಗಡಗಳಿವೆ. ಹಿಂದೆ ಕುಮ್ರಿ ಬೇಸಾಯ ಮಾಡುತ್ತಿದ್ದು ಈಗ ಕೃಷಿಯನ್ನು ನಂಬಿ ಬದುಕುವ ಕುಡುಬಿಯರು ಸಸ್ಯಾಹಾರ ಮತ್ತು ಮಾಂಸಾಹಾರದ ಆಹಾರ ರೂಪಿಸಿಕೊಂಡು ಕಾಡಿನಲ್ಲಿ ಸಿಗುವ ಪ್ರಾಣಿ ಪಕ್ಷಿಗಳನ್ನು ಮಾತ್ರ ಆಹಾರದಲ್ಲಿ ಬಳಸುತ್ತಾರೆ. ಸಾಕು ಪ್ರಾಣಿಗಳ ಮಾಂಸಗಳಿಗೆ ಇಂದಿಗೂ ನಿಷೇಧವಿದೆ. ಕಾಡು ಹಂದಿ ಮಾಂಸ ಇವರ ಪ್ರಿಯ ಆಹಾರ. ಕೃಷಿಯಾಧಾರಿತ ಕಸುಬನ್ನು ರೂಢಿಸಿಕೊಂಡ ಕುಡುಬಿಯರು ತರಕಾರಿ ಬೆಳೆಯನ್ನೂ ತಮ್ಮ ಆಹಾರಕ್ಕೆ ಬಳಸುವುದುಂಟು.

ಸಾಮಾನ್ಯವಾಗಿ ಪಿತೃ ಪ್ರಧಾನ ವ್ಯವಸ್ಥೆ ಹೊಂದಿರುವ ಕುಡುಬಿಯರಲ್ಲಿ ಅಲ್ಲಲ್ಲಿ ಕೆಲವು ಕಡೆ ಮಾತ್ರವೇ ಅವಿಭಕ್ತ ಕುಟುಂಬ ಪದ್ಧತಿಯಿದ್ದು ಉಳಿದೆಡೆ ವಿಸ್ತರಿತ ಕುಟುಂಬ,

ಏಕಪತ್ನಿತ್ವ ಪದ್ಧತಿ ರೂಢಿಯಲ್ಲಿದ್ದು ಕುಟುಂಬದ ಯಜಮಾನ ಮನೆಯ ಹಿರಿಯ ವ್ಯಕ್ತಿಯಾಗಿರುತ್ತಾನೆ. ಮತ್ತು ಕುಟುಂಬದ ಸಾಮಾಜಿಕ, ಆರ್ಥಿಕ ಆಚರಣೆ ನಿಯಂತ್ರಿಸುತ್ತಾನೆ ಮತ್ತು ಮನೆಯ ಮುಖ್ಯ ವ್ಯವಹಾರಗಳನ್ನು ನಡೆಸುತ್ತಿದ್ದು ಆಸ್ತಿಯ ಹಕ್ಕು ಸಾಧಾರಣವಾಗಿ ತಂದೆಯಿಂದ ಮಗನಿಗೆ ಬರುತ್ತದೆ.

ಹೀಗೆ ಕುಡುಬಿ ಕುಟುಂಬ ವ್ಯವಸ್ಥೆ ಒಂದೇ ಬಳಯನ್ನು ಹೊಂದಿರುವವರನ್ನು ಒಟ್ಟಿಗೆ ವಾಸಿಸಲು ಸಹಾಯ ಮಾಡುತ್ತದೆ. ಕುಟುಂಬ ಮಟ್ಟದ ತೀರ್ಮಾನಗಳನ್ನು ಕುಟುಂಬದ ಯಜಮಾನನೇ ತೆಗದುಕೊಳ್ಳುತ್ತಾನೆ. ರಾಜಕೀಯ ವ್ಯವಸ್ಥೆಯ ಪ್ರಧಾನ ಅಂಗವೇ '**ವೋಡೋ**' ಅಥವಾ '**ಕೂಡುಕಟ್ಟು**'. ಇಲ್ಲಿ ಗುರಿಕಾರ ಎಂಬ ಮುಖ್ಯಸ್ಥನಿದ್ದು ಅಧಿಕಾರ ಸ್ಥಾನ ವಂಶಪಾರಂಪರ್ಯವಾಗಿದೆ.

ಪೂರ್ವಜರ ಆರಾಧನೆ, ಅಲೌಕಿಕ ಶಕ್ತಿಯ ಆರಾಧನೆ ಮತ್ತು ಕುಲದೇವತಾ ಆರಾಧನೆ ಕುಡುಬಿಯರ ಧರ್ಮದ ಮುಖ್ಯ ಗುಣಲಕ್ಷಣಗಳಾಗಿವೆ.

ಹೋಳಿ ಕುಡುಬಿಯರ ಮುಖ್ಯ ಆಚರಣೆಯ ಹಬ್ಬವಾಗಿದ್ದು ಈ ಆಚರಣೆಯಲ್ಲಿ ಭೂತಗಳನ್ನು, ಶಕ್ತಿದೇವತೆಯನ್ನು ಮತ್ತು ಗೋವಾ ಮಲ್ಲಿಕಾರ್ಜುನ ದೇವರನ್ನು ರಾಧಿಸುತ್ತಾರೆ. ಹೋಳಿ ಸಂದರ್ಭದಲ್ಲಿ ಶಕ್ತಿ ಅಥವಾ ಗೋವಾ ಅಮ್ಮನನ್ನು ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ಗುಂಬೋಟ್(ಗುಮ್ಮಟೆ) ತೊನಿ (ಕೋಲಾಟ) ಮತ್ತು ದೂರಿನಾಚ್ (ಜಡೆತ್ತನ್ನ) ಎಂಬ ವಿವಿಧ ನೃತ್ಯಗಳನ್ನಾಡಿ ಆನಂದಿಸುತ್ತಾರೆ. ಈ ಸಂದರ್ಭದಲ್ಲಿ ಗುಮ್ಮಟೆ ಎನ್ನುವ ಸಂಗೀತದ ಉಪಕರಣವನ್ನು ನುಡಿಸುತ್ತಾರೆ. ಮತ್ತು ಅವರ ಆಡು ಭಾಷೆಯಲ್ಲಿ ಅನೇಕ ಜನಪದ ಹಾಡುಗಳನ್ನು ಹಾಡುತ್ತಾರೆ.

ಕುಡುಬಿಯರ ಮುಖ್ಯ ಕಸುಬು ಕೃಷಿಯಾಗಿದ್ದರೂ ಈಗ ಹೆಚ್ಚಿನ ಕುಡುಬಿ ಮಹಿಳೆಯರು ಜೀವನಕ್ಕಾಗಿ ಬೀಡಿ ಕಟ್ಟುವ ವೃತ್ತಿಯನ್ನು ಅವಲಂಬಿಸಿದ್ದಾರೆ. ಹಿರಿಯ ಮಹಿಳೆಯರು ತಮ್ಮ ಪುರಾತನ ಶೈಲಿಯಲ್ಲಿ (ಗೇಂಟೆ) ಸೀರೆ ಉಡುವ ಕ್ರಮವಿದ್ದರೂ ಭಾರತೀಯ ಶೈಲಿಯಲ್ಲಿ ಇಂದು ಸೀರೆ ಉಡುವುದು ಸಾಮಾನ್ಯವಾಗಿದೆ. ಆಧುನೀಕರಣದ ಪ್ರಭಾವದಿಂದಾಗಿ ಹೆಚ್ಚಿನ ಎಳೆಯ ಮಹಿಳೆಯರು ನೈಟಿ (ನೈಟ್ ಡ್ರೆಸ್) ಮತ್ತು ಚೂಡಿದಾರ ಧರಿಸುತ್ತಾರೆ.

ಕುಡುಬಿ ಮಹಿಳೆಯರು ಪುರುಷರಂತೆ ಶ್ರಮಜೀವಿಗಳಾಗಿ ದುಡಿಯುತ್ತ ಕುಟುಂಬ ನಿರ್ವಹಣೆಯ ಜವಾಬ್ದಾರಿ ಹೊರುತ್ತಾರೆ. ಇಲ್ಲಿ ಸ್ತ್ರೀಯರಿಗೆ ವಿಶೇಷವಾದ ಸ್ಥಾನವಿಲ್ಲ. ಉದಾಹರಣೆಗೆ, ಹೋಳಿ ಹಬ್ಬದ ಗುಮ್ಮಟೆ ನೃತ್ಯಗಳಲ್ಲಿ ಮಹಿಳೆಯರು ಕೇವಲ ಪ್ರೇಕ್ಷಕರಾಗುತ್ತಾರೆ. ಮತ್ತು ಪುರುಷರ ನೃತ್ಯದ ವೇಷಗಳಿಗೆ ಸಹಕರಿಸುವುದನ್ನು ಮಾತ್ರವೇ ಗಮನಿಸಲಾಗಿದೆ.

ಸಾಂಪ್ರದಾಯಿಕವಾಗಿ ವರದಕ್ಷಿಣೆ ಪದ್ಧತಿ ಕುಡುಬಿಯರಲ್ಲಿ ಇಲ್ಲ. ಆದರೆ **ತೆರ ಅಥವಾ ಕರಾರ್ ಲೆಕ್** ಎನ್ನುವ ವಧುದಕ್ಷಿಣೆ ಪದ್ಧತಿ ಅನುಸರಿಸುತ್ತಾರೆ. ಹೆಚ್ಚಿನ ಮಹಿಳೆಯರು ಅವಿದ್ಯಾವಂತರಾಗಿದ್ದು (38%) ಕ್ಷೇತ್ರ ಭೇಟಿಯ ಆಧಾರದಲ್ಲಿ ಶೇ 17 ಮಹಿಳೆಯರು ಹೈಸ್ಕೂಲ್ ವಿದ್ಯಾಭ್ಯಾಸ ಹೊಂದಿದ್ದು ಶೇ 15 ಮಹಿಳೆಯರು ಪ್ರಾಥಮಿಕ ಶಿಕ್ಷಣ ಮುಗಿಸಿದ್ದಾರೆ. ಎಂದು ಗಮನಿಸಲಾಗಿದೆ.

ಹೆಚ್ಚಿನ ಎಲ್ಲಾ ಕುಡುಬಿಯರು ತಮ್ಮ ಮಕ್ಕಳನ್ನು ವಿದ್ಯಾವಂತರಾಗಿ ಕಡೇ ಪಕ್ಷ ಪದವಿ ಶಿಕ್ಷಣವನ್ನಾದರೂ ನೀಡಬೇಕೆಂಬ ಇಚ್ಛೆಯನ್ನು ಹೊಂದಿದ್ದಾರೆ. ಕುಡುಬಿಯರಲ್ಲಿ ವಿವಾಹ ವಿಚ್ಛೇದನಗಳು ಇಲ್ಲ. ಹೀಗಾಗದಂತೆ ಬಹಳ ಜಾಗರೂಕತೆ ವಹಿಸುತ್ತಾರೆ.

ಹೆಚ್ಚಾಗಿ ವಿಧವೆಯರಿದ್ದ ಮನೆಯಲ್ಲಿ ಮಾತ್ರವೇ ಹೆಂಗಸರು ಮನೆಯ ಎಲ್ಲಾ ವ್ಯವಹಾರಗಳನ್ನು ನೋಡಿಕೊಳ್ಳುತ್ತಾರೆ. ಗಂಡ ತನ್ನ ಜವಾಬ್ದಾರಿ ಪೂರ್ಣ ಪ್ರಮಾಣದಲ್ಲಿ ನಿರ್ವಹಿಸಲು ಅಸಾಧ್ಯವಾದ ಕುಡುಬಿ ಕುಟುಂಬಗಳಲ್ಲಿ ಮಹಿಳೆಯರೇ ಯಜಮಾನಿಕೆ ವಹಿಸಿದ್ದಾರೆ. ರಾಜಕೀಯವಾದ ಭಾಗವಹಿಸುವಿಕೆಯೂ ಕಡಿಮೆ ಪ್ರಮಾಣದಲ್ಲಿ ಇರುವುದು ಗಮನಿಸಲಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ನಿಧಾನವಾಗಿ ಸ್ಥಿತ್ಯಂತರಗೊಳ್ಳುತ್ತಿದೆ. ಒಟ್ಟು ಸಮುದಾಯಗಳ ಸಮಗ್ರ ಅಭಿವೃದ್ಧಿಗೆ ಸರಕಾರದ ಆರ್ಥಿಕ ಯೋಜನೆಗಳು ಅಗತ್ಯವಿದೆ. ಆದರೆ ಅದನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳುವಲ್ಲಿ ವಿಶೇಷವಾಗಿ ಮಾನಸಿಕವಾಗಿ ಬುಡಕಟ್ಟು ಮಹಿಳೆಯರು ಸಿದ್ಧರಾಗುವ ಅನಿವಾರ್ಯತೆ ಇದೆ.

## 1.4 ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ ಮತ್ತು ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಈ ಕೆಳಗಿನ ನಿರ್ದಿಷ್ಟ ಉದ್ದೇಶಗಳನ್ನು ಒಳಗೊಂಡಿದೆ.

1) ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಲ್ಲಿನ ಬದಲಾಗುತ್ತಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯನ್ನು ಪರಿಶೀಲಿಸುವುದು.

2) ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಆರ್ಥಿಕ ಪರಿಸ್ಥಿತಿಯನ್ನು ಅಧ್ಯಯನ ಮಾಡುವುದು.

3) ಆಧುನೀಕರಣ ಪ್ರಭಾವದಿಂದ ಬುಡಕಟ್ಟು ಮಹಿಳೆಯರಲ್ಲಿನ ಬದಲಾವಣೆಗಳು ಮತ್ತು ಸಶಕ್ತೀಕರಣ ಪ್ರಕ್ರಿಯೆಯನ್ನು ಗಮನಿಸುವುದು.

4) ದಕ್ಷಿಣ ಕನ್ನಡದ ನಾಲ್ಕು ಬುಡಕಟ್ಟು ಮಹಿಳೆಯರಿಗೆ ಸಂಬಂಧಿಸಿದಂತೆ ತುಲನಾತ್ಮಕ ಅಧ್ಯಯನ ನಡೆಸುವುದು.

### ಅಧ್ಯಯನದ ವಿಧಾನ

ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಮಹಿಳೆಯರನ್ನೇ ಕುರಿತಾದ ಅಧ್ಯಯನಗಳು ಈವರೆಗೆ ನಡೆದಿಲ್ಲವಾದುದರಿಂದ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ(ವಿಭಜಿತ) ಒಟ್ಟು 5 ತಾಲೂಕುಗಳಿವೆ. ಅವೆಂದರೆ ಬೆಳ್ತಂಗಡಿ, ಮಂಗಳೂರು, ಬಂಟ್ವಾಳ, ಪುತ್ತೂರು ಮತ್ತು ಸುಳ್ಯಗಳಾಗಿವೆ. ಬುಡಕಟ್ಟು ಅಥವಾ ಆದಿವಾಸಿ ಜನಾಂಗಗಳು ಈ ಎಲ್ಲಾ ತಾಲೂಕುಗಳಲ್ಲಿ ಹಂಚಿಹೋಗಿವೆ. ಜಿಲ್ಲೆಯಲ್ಲಿ ಕೊರಗ, ಮಲೆಕುಡಿಯ, ಮರಾಠಿ ನಾಯ್ಕ, ಕುಡುಬಿ, ಕಮ್ಮಾರ ಮತ್ತು ಪನಿಯನ್ ಎಂಬ ಒಟ್ಟು 6 ಬುಡಕಟ್ಟು ಸಮುದಾಯಗಳಿವೆ. ಕಮ್ಮಾರ, ಪನಿಯನ್ ಬುಡಕಟ್ಟುಗಳು ಬಹಳ ಕಡಿಮೆ ಸಂಖ್ಯೆಯಲ್ಲಿರುವುದರಿಂದ ಅಧ್ಯಯನಕ್ಕಾಗಿ ಈ ಸಮುದಾಯಗಳನ್ನು ಆರಿಸಲಾಗಿಲ್ಲ.

ಯಾವುದೇ ಸಂಶೋಧನೆಯ ಮೂಲ ಉದ್ದೇಶ ಜ್ಞಾನದ ವಿಸ್ತರಣೆಯಾದುದರಿಂದ ದಕ್ಷಿಣ ಕನ್ನಡದ ಮುಖ್ಯ ಬುಡಕಟ್ಟುಗಳಾದ ಕೊರಗ, ಮಲೆಕುಡಿಯ, ಮರಾಠಿ ನಾಯ್ಕ, ಹಾಗೂ ಕುಡುಬಿ ಬುಡಕಟ್ಟುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಹಾಗೂ ಈ ಒಟ್ಟು ನಾಲ್ಕು ಮುಖ್ಯ ಬುಡಕಟ್ಟುಗಳ ಮಹಿಳೆಯರ ತುಲನಾತ್ಮಕ ಅಧ್ಯಯನ ನಡೆಸುವುದೂ ಒಂದು ಉದ್ದೇಶವಾಗಿರುವುದರಿಂದ ಜಿಲ್ಲೆಯ ಮುಖ್ಯ ನಾಲ್ಕು ಬುಡಕಟ್ಟುಗಳನ್ನು ಮಾತ್ರ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ನಕ್ಷೆ : 1.1 ದಕ್ಷಿಣ ಕನ್ನಡ ಜಿಲ್ಲೆ –ಅಧ್ಯಯನ ಕ್ಷೇತ್ರ




ಸಂದರ್ಶನ ನಡೆಸಿದ ಸ್ಥಳ (ಗ್ರಾಮ)ಗಳ ವಿವರಣೆ ಅನುಬಂಧ 2 ರಲ್ಲಿ ಹಾಗೂ ಪುಟ ಸಂಖ್ಯೆ 289 ರಲ್ಲಿದೆ.

## ದಕ್ಷಿಣ ಕನ್ನಡ ಜಿಲ್ಲೆ

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯು (ಹಿಂದಿನ ಸೌತ್ ಕೆನರಾ) ಭಾರತದ ಪಶ್ಚಿಮ ಕರಾವಳಿಯಲ್ಲಿ ಮುಂಬೈ ಮತ್ತು ಕನ್ಯಾಕುಮಾರಿಯ ನಡುವೆ ಇರುವಂತಹ ದಕ್ಷಿಣ ಕರಾವಳಿ ಜಿಲ್ಲೆಯಾಗಿದ್ದು, ಇದರ ಒಟ್ಟು ವಿಸ್ತೀರ್ಣವು ರಾಜ್ಯದ ವಿಸ್ತೀರ್ಣದ ಶೇ 2.3ರಷ್ಟಿದೆ. ಶತಮಾನದ ಆರಂಭದಲ್ಲಿ ದಕ್ಷಿಣ ಕನ್ನಡ ಪ್ರದೇಶದ ವ್ಯಾಪ್ತಿಯು ಹಿಂದೆ ಈಗಿನ ಕೇರಳದ ಕಾಸರಗೋಡು ಅಲ್ಲದೆ ಹಿಂದೂ ಮಹಾಸಾಗರದಲ್ಲಿರುವ ದ್ವೀಪ ಪ್ರದೇಶವು ದಕ್ಷಿಣ ಕನ್ನಡದ ಆಡಳಿತಕ್ಕೆ ಒಳಪಟ್ಟಿದ್ದು ಮಂಗಳೂರು, ಉಡುಪಿ, ಕುಂದಾಪುರ, ಉಪ್ಪಿನಂಗಡಿ ಮತ್ತು ಕಾಸರಗೋಡು ಈ ಐದು ತಾಲೂಕುಗಳನ್ನು ಒಳಗೊಂಡಿತ್ತು. ನಂತರ ಈ ಪ್ರದೇಶಗಳ ವ್ಯಾಪ್ತಿಯಲ್ಲಿ ಹಲವಾರು ಬದಲಾವಣೆಗಳಾಗಿ 1977ರಲ್ಲಿ ಸೌತ್ ಕೆನರಾ ಹೆಸರನ್ನು ದಕ್ಷಿಣ ಕನ್ನಡವೆಂದು ಬದಲಾಯಿಸಲಾಯಿತು. ಪ್ರಾರಂಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ಎಂಟು ತಾಲೂಕುಗಳಿದ್ದು ಬಂಟ್ವಾಳ, ಬೆಳ್ತಂಗಡಿ, ಕಾರ್ಕಳ, ಕುಂದಾಪುರ, ಮಂಗಳೂರು, ಪುತ್ತೂರು, ಸುಳ್ಯ ಮತ್ತು ಉಡುಪಿಗಳಾಗಿದ್ದವು. 1977ರಲ್ಲಿ ಆಡಳಿತ ಸುಗಮಗೊಳಿಸಲು ಕರ್ನಾಟಕ ಸರ್ಕಾರ ಅಗಾಧವಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯನ್ನು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯೆಂದು ವಿಭಜಿಸಿತು.

ಜಿಲ್ಲೆಯ ಉತ್ತರ ಭಾಗದಲ್ಲಿರುವ ಮೂರು ತಾಲೂಕುಗಳಾದ ಕುಂದಾಪುರ, ಉಡುಪಿ ಮತ್ತು ಕಾರ್ಕಳ ಈಗಿನ ಉಡುಪಿ ಜಿಲ್ಲೆಯಾಗಿ, ಉಳಿದ ಐದು ತಾಲೂಕುಗಳಾದ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಮತ್ತು ಸುಳ್ಯ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿಸಲ್ಪಟ್ಟಿತು.

ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆ 2011 ರ ಪ್ರಕಾರ 20,83,625. ಇದರಲ್ಲಿ ಒಟ್ಟು ಪುರುಷರ ಸಂಖ್ಯೆ 10,32,577 ಆಗಿದ್ದು ಮಹಿಳೆಯರ ಸಂಖ್ಯೆ 10,51,048 ಲಿಂಗ ಪ್ರಮಾಣ ಪ್ರತಿ 1,000 ಪುರುಷರಿಗೆ 1,018 ಮಹಿಳೆಯರು. ಹಾಗೂ ಸರಾಸರಿ ಸಾಕ್ಷರತಾ ಪ್ರಮಾಣ 88.62% ಪುರುಷರ ಸಾಕ್ಷರತಾ ಪ್ರಮಾಣ 93.31% ಮತ್ತು ಮಹಿಳೆಯರ ಸಾಕ್ಷರತಾ ಪ್ರಮಾಣ 84.04%. ಒಟ್ಟು ಹಿಂದೂ ಧರ್ಮದ

ಜನರು ಶೇ 68.59, ಇಸ್ಲಾಂ ಧರ್ಮದಲ್ಲಿ 22.07, ಕ್ರೈಸ್ತ ಧರ್ಮದಲ್ಲಿ ಶೇ 8.69 ಹಾಗೂ ಇತರರು ಒಟ್ಟು 0.55% ರಷ್ಟು ಇರುವರೆಂದು ಸಮೀಕ್ಷೆಗಳು ತಿಳಿಸುತ್ತವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳುನಾಡಿನ ಸಂಸ್ಕೃತಿ ಪರಂಪರೆಯ ಜೊತೆಗೆ ಹಿಂದು, ಕ್ರೈಸ್ತ, ಇಸ್ಲಾಂ, ಜೈನ ,ಕೊಂಕಣಿ ಧರ್ಮಗಳು ಪ್ರಸಿದ್ಧವಾಗಿವೆ.

ಕೃಷಿಯೇ ದಕ್ಷಿಣ ಕನ್ನಡ ಜಿಲ್ಲೆಯ ಮೂಲ. ಇದರ ಜೊತೆಗೆ ವಾಣಿಜ್ಯ ಬೆಳೆಗಳಾದ ತೆಂಗು, ಅಡಿಕೆ, ಬಾಳೆ, ಗೇರು, ಕಾಳುಮೆಣಸು, ರಬ್ಬರ್, ಭತ್ತ ಇತ್ಯಾದಿಗಳಿಗೂ ಮಹತ್ವವಿದೆ. ಶಿಕ್ಷಣ, ಕೈಗಾರಿಕೆ, ಬ್ಯಾಂಕಿಂಗ್ ಉದ್ಯಮ, ವ್ಯಾಪಾರ, ಹೋಟೇಲ್ ಉದ್ಯಮ ಇತ್ಯಾದಿಗಳಿಗೂ ದಕ್ಷಿಣ ಕನ್ನಡ ಹೆಸರುವಾಸಿಯಾಗಿದೆ. ಹೆಚ್ಚಾಗಿ ವೃತ್ತಿಗಳು ಜಾತಿ ಪ್ರಧಾನವಾಗಿವೆ.

ಮಾತೃ ಪ್ರಧಾನವಾದ ಕುಟುಂಬ ಪದ್ಧತಿಯೊಂದಿಗೆ ಅಳಿಯ ಸಂತಾನ ಪದ್ಧತಿ ಆಧಾರಿತ ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿರುವುದು ದಕ್ಷಿಣ ಕನ್ನಡದ ವೈಶಿಷ್ಟ್ಯವಾಗಿದೆ.

ವಿಶೇಷವಾಗಿ ದಕ್ಷಿಣ ಕನ್ನಡದಲ್ಲಿ ತುಳು ಭಾಷೆಯೇ ಪ್ರಧಾನವಾಗಿದ್ದರೂ ಕನ್ನಡ, ಹವ್ಯಕ ಕನ್ನಡ, ಅರೆಭಾಷೆ ಕನ್ನಡ, ಕುಂದಾಪುರ ಕನ್ನಡ, ಕೊಂಕಣಿ, ಗೋವಾ ಕೊಂಕಣಿ, ಬ್ಯಾರಿ ಭಾಷೆಗಳನ್ನು ಮಾತನಾಡುವ ಜನರೂ ಈ ಜಿಲ್ಲೆಯಲ್ಲಿ ಇದ್ದಾರೆ.

ದಕ್ಷಿಣ ಕನ್ನಡದ ಮನರಂಜನೆಯ ಮೂಲಗಳಾಗಿ ಕೋಲ, ಕಂಬಳ, ಯಕ್ಷಗಾನ, ಕುಸ್ತಿ, ಚೆನ್ನೆಮಣೆ, ಇತ್ಯಾದಿಗಳಿದ್ದರೆ ಪತ್ತನಾಜೆ, ಆಟಿ, ಸೋಣ, ದೀಪಾವಳಿ, ಕೆಡ್ಡಸ, ಭೂತಾರಾಧನೆ, ಮಾರಿಹಬ್ಬ, ನೇಮ, ಶಿವರಾತ್ರಿ, ನೂಲಹುಣ್ಣಿಮೆ, ನವರಾತ್ರಿ, ಸಂಕಷ್ಟಿಗಳನ್ನು ಇಲ್ಲಿನ ಜನರು ಹೆಚ್ಚಾಗಿ ಆಚರಿಸಿ ಸಂಭ್ರಮಿಸುತ್ತಾರೆ.

**ಅಧ್ಯಯನದ ವ್ಯಾಪ್ತಿ** : 2011ರ ನಾಲ್ಕು ಬುಡಕಟ್ಟುಗಳ ಸಮೀಕ್ಷೆಯ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ಬುಡಕಟ್ಟು ಜನಸಂಖ್ಯೆ 88,933 ಕ್ರಮವಾಗಿ ಮರಾಠಿ ನಾಯ್ಕ 45,972 ಕುಡುಬಿ 26,000 ಮಲೆಕುಡಿಯ 10,629 ಹಾಗೂ ಕೊರಗರ ಜನಸಂಖ್ಯೆ 6,332 ಆಗಿರುತ್ತದೆ. ಸರಣಿ ನಮೂನೆ ವಿಧಾನ (ಸ್ನೋಬಾಲ್) ದ ಮೂಲಕ ಜಿಲ್ಲೆಯ ವಿವಿಧ ಬುಡಕಟ್ಟುಗಳ ಒಟ್ಟು ಜನಸಂಖ್ಯೆಯ ಆಧಾರದಲ್ಲಿ ಮಾಹಿತಿದಾರರನ್ನು ಆಯ್ಕೆ ಮಾಡಲಾಗಿದೆ. 2011- 12ರ ಅವಧಿಯಲ್ಲಿ ಕ್ಷೇತ್ರ ಅಧ್ಯಯನ ನಡೆಸಲಾಗಿದೆ.

## 1.5 ಅಧ್ಯಯನ ಮಾದರಿ (ನಮೂನೆ ಚೌಕಟ್ಟು) ಮತ್ತು ಅಧ್ಯಯನಕ್ಕೆ ಬಳಸಿಕೊಂಡ ತಂತ್ರಗಳು

ಅಧ್ಯಯನದಲ್ಲಿ ಖಚಿತತೆ ಮತ್ತು ನಿಷ್ಪತೆಯನ್ನು ಹೊಂದುವ ಸಲುವಾಗಿ ಹಾಗೂ ಪೂರ್ವಾಗ್ರಹವನ್ನು ಕಡಿಮೆ ಮಾಡುವರೇ ಕ್ರಮಬದ್ಧವಾದ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಜನಸಂಖ್ಯೆ ಆಧಾರದಲ್ಲಿ ಕುಡುಬಿ ಸಮುದಾಯದಿಂದ ಒಟ್ಟು 100 ಮರಾಠಿ ನಾಯ್ಕ, ಸಮುದಾಯದಿಂದ ಒಟ್ಟು 100, ಮಲೆಕುಡಿಯ ಸಮುದಾಯದಿಂದ 60 ಹಾಗೂ ಕೊರಗ ಸಮುದಾಯದಿಂದ 40 ಒಟ್ಟಾಗಿ 300 ವಿವಿಧ ಬುಡಕಟ್ಟು ಸಮುದಾಯಗಳಿಂದ ಮಹಿಳೆಯರನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ನಾಲ್ಕು ಬುಡಕಟ್ಟಿನ 18 ವರ್ಷದಿಂದ ಮೇಲ್ಪಟ್ಟ ಮತ್ತು 65 ವರ್ಷದೊಳಗಿನ ವಿವಾಹಿತ ಮತ್ತು ಅವಿವಾಹಿತ ಮಹಿಳೆಯರನ್ನು ಸಂದರ್ಶನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅಧ್ಯಯನಕ್ಕಾಗಿ ಮಾದರಿಯನ್ನು ಆಯ್ಕೆ ಮಾಡುವ ಮೊದಲು, ಸಂಬಂಧಪಟ್ಟ ಗ್ರಾಮಪಂಚಾಯತ್‌ನ ಅಧ್ಯಕ್ಷರುಗಳು, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು, ಪಂಚಾಯತ್ ಕಾರ್ಯದರ್ಶಿಗಳು, ಪುರಸಭೆಯ ಮುಖ್ಯ ಅಧಿಕಾರಿಗಳು, ಪಂಚಾಯತ್ ಸದಸ್ಯರುಗಳು, ತಾಲೂಕು ಪಂಚಾಯತ್ ಅಧ್ಯಕ್ಷರು, ಯುವಕ ಮಂಡಲಗಳ ಸಕ್ರಿಯ ಸದಸ್ಯರು, ಬುಡಕಟ್ಟು ಸಂಘಟನೆಗಳ ಸಕ್ರಿಯ ಪದಾಧಿಕಾರಿಗಳು ಮತ್ತು ಸಂಬಂಧಪಟ್ಟ ಪ್ರದೇಶದ ಸಮಾಜಕಾರ್ಯ ವಿದ್ಯಾರ್ಥಿಗಳೊಂದಿಗೆ ಮಾತುಕತೆ ನಡೆಸಲಾಗಿದೆ.

ಬುಡಕಟ್ಟು ಜನರೊಂದಿಗೆ ಕಾರ್ಯನಿರ್ವಹಿಸುತ್ತಿರುವ ಸರ್ಕಾರೇತರ ಸಂಸ್ಥೆಯ ಸಿಬ್ಬಂದಿಗಳಿಂದ ಬುಡಕಟ್ಟುಗಳ ಜನರು ವಾಸವಾಗಿರುವ ಪ್ರದೇಶಗಳ ಕುರಿತಾದ ಮಾಹಿತಿಗಳನ್ನು ಪಡೆಯಲಾಯಿತು. ಬುಡಕಟ್ಟು ಮಹಿಳೆಯರನ್ನು ಗ್ರಾಮೀಣ ಪ್ರದೇಶದಿಂದ, ನಗರಪ್ರದೇಶದಿಂದ ಮತ್ತು ಅರಣ್ಯಕ್ಕೆ ಹತ್ತಿರವಿರುವ ಪ್ರದೇಶಗಳಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. ಮಾಹಿತಿದಾರರನ್ನು ಅವರ ಮನೆಯಲ್ಲಿ ಸಂದರ್ಶಿಸಲು ಬುಡಕಟ್ಟು ಮಹಿಳೆಯರಿಗೆ ಪರಿಚಿತರಾಗಿರುವ ಸಂಬಂಧಪಟ್ಟ ಪ್ರದೇಶದ ಪಂಚಾಯತ್ ಅಧ್ಯಕ್ಷರು, ತಾಲೂಕು ಪಂಚಾಯತ್ ಅಧ್ಯಕ್ಷರು, ಯುವಕ ಮಂಡಲದ ಸದಸ್ಯರು, ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರು, ಪಂಚಾಯತ್ ಸಿಬ್ಬಂದಿಗಳು, ಬಿಲ್ಲವ ಸಂಘಟನೆಯ ಪದಾಧಿಕಾರಿಗಳು ಹಾಗೂ ಆ ಪ್ರದೇಶಗಳ ಕೆಲವು ಸಮಾಜ ಕಾರ್ಯ ವಿದ್ಯಾರ್ಥಿಗಳಿಂದ ಸಹಾಯ ಪಡೆಯಲಾಯಿತು.

## ಅಧ್ಯಯನಕ್ಕಾಗಿ ಬಳಸಿಕೊಂಡ ತಂತ್ರಗಳು

ಮಾಹಿತಿ ಸಂಗ್ರಹಕ್ಕಾಗಿ ಅನುಸೂಚಿಯನ್ನು ಉಪಯೋಗಿಸಿ ಸಂದರ್ಶನ ಅವಲೋಕನ ಮತ್ತು ಕೆಲವು ಕಡೆ ಉದ್ದೇಶಗಳಗನುಗುಣವಾಗಿ ಹಿರಿಯ ಮಹಿಳೆಯರೊಂದಿಗೆ ಗುಂಪು ಚರ್ಚೆಯನ್ನು ನಡೆಸಲಾಗಿದೆ. ಜಿಲ್ಲೆಯ ಬುಡಕಟ್ಟುಗಳ ಸಾಮಾಜಿಕ ಆರ್ಥಿಕ ಸ್ಥಿತಿ-ಗತಿ ಹಾಗೂ ರಾಜ್ಯದ ಇತರ ಬುಡಕಟ್ಟುಗಳ ಮಹಿಳೆಯರ ಸಾಮಾಜಿಕ ಆರ್ಥಿಕ ಜೀವನವನ್ನು ಅರ್ಥಮಾಡಿಕೊಳ್ಳಲು ಅನೇಕ ಅಧ್ಯಯನಕಾರರ ಅಧ್ಯಯನಗಳನ್ನು ಗಮನಿಸಲಾಗಿದೆ. ಅಗತ್ಯವಿರುವ ಕಡೆಗಳಲ್ಲಿ ಅಂತರ್‌ಜಾಲದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಜೊತೆಗೆ ಸಂಬಂಧಪಟ್ಟ ನಿಯತಕಾಲಿಕೆಗಳಿಂದ ಮತ್ತು ಪತ್ರಿಕೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಕುಡುಬಿಯರು ಹೋಳಿ ಹಬ್ಬದ ಪ್ರಯುಕ್ತ ಆಚರಿಸಿರುವ **'ಗುಮ್ಮಟೆ ನೃತ್ಯ'** ಕಾರ್ಯಕ್ರಮದಲ್ಲಿ ಪಾಲ್ಗೊಂಡು ಸಹಭಾಗಿತ್ವ ಅವಲೋಕನ ವಿಧಾನದ ಮೂಲಕ ಭಾಗವಹಿಸುವಿಕೆಯನ್ನು ಅವಲೋಕಿಸಲಾಗಿದೆ.

## ಸಂದರ್ಶನ ಅನುಸೂಚಿ ಮತ್ತು ಗುಂಪು ಚರ್ಚೆ

ಸಂಶೋಧನೆಯ ಉದ್ದೇಶಕ್ಕೆ ಅನುಗುಣವಾಗಿ ಮಾಹಿತಿ ಸಂಗ್ರಹಕ್ಕಾಗಿ ಅನುಸೂಚಿಯನ್ನು ಉಪಯೋಗಿಸಿ (ತೆರೆದ ಪ್ರಶ್ನಾವಳಿ ಮತ್ತು ಮುಚ್ಚಿದ ಪ್ರಶ್ನಾವಳಿ) ಬುಡಕಟ್ಟು ಮಹಿಳೆಯರಿಂದ ಮಾಹಿತಿ ಸಂಗ್ರಹಿಸಲಾಗಿದೆ. ವಿಶೇಷವಾಗಿ ವೈಯಕ್ತಿಕ ಮಾಹಿತಿ, ಸಾಮಾಜಿಕ ಪರಿಸ್ಥಿತಿ, ಮಕ್ಕಳ ಶಿಕ್ಷಣ, ಮಕ್ಕಳ ಉದ್ಯೋಗ, ಮಾಹಿತಿದಾರರ ಉದ್ಯೋಗ ಮತ್ತು ಆದಾಯ, ಉದ್ಯೋಗದ ತೊಂದರೆಗಳು, ಉದ್ಯೋಗ ಜೀವನದ ನಿರೀಕ್ಷೆಗಳು ಇತ್ಯಾದಿಗಳ ಬಗ್ಗೆ ಬುಡಕಟ್ಟು ಮಹಿಳೆಯರನ್ನು ಮಾಹಿತಿ ನೀಡುವಲ್ಲಿ ಪ್ರೇರೇಪಿಸಲಾಗಿದೆ.

ಸಶಕ್ತೀಕರಣ ಮತ್ತು ಅದರ ವಿವಿಧ ಆಯಾಮಗಳು, ಆರ್ಥಿಕ ಜೀವನದ ಕುರಿತಂತೆಯೂ ಬುಡಕಟ್ಟು ಮಹಿಳೆಯರಿಂದ ಮಾಹಿತಿ ಪಡಕೊಳ್ಳಲಾಗಿದೆ. ಮಹಿಳೆಯರಲ್ಲಿ ಬುಡಕಟ್ಟು ಸಮುದಾಯದ ಕುರಿತಾದ ಭಾವನೆ, ನೆರೆಹೊರೆಯವರೊಂದಿಗೆ ಸೌಹಾರ್ದತೆ, ಋತುಮತಿ ಪ್ರಕ್ರಿಯೆ ಮತ್ತು ಅಸ್ಪೃಶ್ಯತೆ, ಹೆರಿಗೆಯ ನಂತರ ಕಷಾಯ ಸೇವಿಸುವ ರೂಢಿ, ಇತ್ಯಾದಿ ವಿಷಯಗಳ ಬಗ್ಗೆ, ಸಾಧ್ಯವಾದ ಕಡೆಗಳಲ್ಲಿ ಬುಡಕಟ್ಟು ಪ್ರದೇಶದಲ್ಲಿ ಕುಟುಂಬದ ಹಿರಿಯ ಮಹಿಳೆಯರೊಂದಿಗೆ ಗುಂಪು ಚರ್ಚೆಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಗುಂಪು ಚರ್ಚೆಯಲ್ಲಿ ಪಾಲ್ಗೊಂಡ ಎಲ್ಲಾ ಬುಡಕಟ್ಟು ಮಾಹಿತಿದಾರರಲ್ಲಿ ಆಸಕ್ತಿ ಇರುವುದನ್ನು ಗಮನಿಸಲಾಗಿದೆ.

ಹಿಂದಿನ ಕಾಲದ ಕೆಲವು ಬುಡಕಟ್ಟು ಪದ್ಧತಿ (ಹೆರಿಗೆ, ದೈವ ದೇವರುಗಳ ಹರಕೆ)ಯನ್ನು ನೆನಪಿಸಿಕೊಳ್ಳಲು ಗುಂಪು ಚರ್ಚೆಯಲ್ಲಿ ಪರಸ್ಪರ ಸಹಕರಿಸುವುದು, ಸಂವಹನಗಳಲ್ಲಿ ಸಲಹೆ ನೀಡುವುದು, ತಪ್ಪಾದ ಮಾಹಿತಿಯನ್ನು ಸರಿಪಡಿಸುವುದನ್ನು ಗುಂಪು ಚರ್ಚೆಯಲ್ಲಿ ಕಂಡುಕೊಳ್ಳಲಾಗಿದೆ. ಹಾಗೆಯೇ ಗುಂಪು ಚರ್ಚೆ ಅನೌಪಚಾರಿಕವಾದುದರಿಂದ ಪಾಲ್ಗೊಂಡವರು ಜೊತೆಯಾಗಿ ಮಾತುಕತೆಗಳ ಮೂಲಕ ಸ್ನೇಹ ಸೌಹಾರ್ದತೆಯಿಂದ ಭಾಗವಹಿಸುವುದನ್ನು ಕಂಡುಕೊಳ್ಳಲಾಗಿದೆ.

## ಪೂರ್ವ ಪರೀಕ್ಷೆಗಾಗಿ ನಡೆಸಿದ ಸಂದರ್ಶನ

2010ರ ಡಿಸೆಂಬರ್ ತಿಂಗಳಲ್ಲಿ ಎಡಪದವು, ಮತ್ತು ಮಂಗಳೂರಿನ ಶಕ್ತಿನಗರದ 50 ಬುಡಕಟ್ಟು ಮಹಿಳೆಯರನ್ನು ಪ್ರಾಯೋಗಿಕವಾಗಿ ಸಂದರ್ಶನ ಮಾಡಲಾಗಿದೆ. ಪ್ರಾಯೋಗಿಕ ಸಂದರ್ಶನವು, ಸಂದರ್ಶನದ ಅನುಸೂಚಿಯಲ್ಲಿ ಅಗತ್ಯವಿರುವ ಕೆಲವು ಕಡೆ ಪರಿಷ್ಕರಿಸಲು ಮತ್ತು ಬದಲಾವಣೆ ಮಾಡಲು ಸಹಾಯಕವಾಯಿತು.

ಸಂದರ್ಶನಕ್ಕಾಗಿ ಬುಡಕಟ್ಟು ಮಹಿಳೆಯರೊಂದಿಗೆ ಆತ್ಮೀಯತೆಯನ್ನು ಬೆಳೆಸಿಕೊಳ್ಳುವಲ್ಲಿ ಬುಡಕಟ್ಟು ಮಹಿಳೆಯರಿಗೆ ಪರಿಚಿತವಾಗಿರುವ ಪಂಚಾಯತ್ ಅಧ್ಯಕ್ಷರು, ಪಂಚಾಯತ್ ಸದಸ್ಯರು, ಅಂಗನವಾಡಿ ಕಾರ್ಯಕರ್ತೆಯರು ಬುಡಕಟ್ಟು ವಾಸಸ್ಥಳಗಳಿಗೆ ಅಧ್ಯಯನಕಾರರೊಂದಿಗೆ ಭೇಟಿ ನೀಡಿದ್ದರಿಂದ ಮಹಿಳೆಯರು ನಿರಾತಂಕವಾಗಿ ಮಾಹಿತಿ ನೀಡಿದ್ದಾರೆ. ಹಾಗೆ ಅಧ್ಯಯನಕಾರರಿಗೆ ಕೆಲವು ಬುಡಕಟ್ಟು ಮಹಿಳೆಯರು ಮೊದಲೇ ಪರಿಚಿತರಾಗಿರುವುದು ಮಾಹಿತಿ ಸಂಗ್ರಹಿಸಲು ಅನುಕೂಲವಾಗಿತ್ತು.



ಇದರೊಂದಿಗೆ ಅಧ್ಯಯನಕಾರರು ಪ್ರಾದೇಶಿಕ ಭಾಷೆಯಾದ ತುಳುವಿನಲ್ಲಿಯೂ, ಸಂವಾದ ನಡೆಸಿರುವುದು ಮಾಹಿತಿ ಸಂಗ್ರಹಕ್ಕೆ ಅನುಕೂಲವಾಗಿತ್ತು, ಅಧ್ಯಯನಕ್ಕಾಗಿ ಈ ಕೆಳಗಿನ ಮೂಲಗಳಿಂದಲೂ ಮಾಹಿತಿ ಸಂಗ್ರಹಿಸಲಾಗಿದೆ.

1) ಉಲ್ಲೇಖ ಗ್ರಂಥಗಳು: ಸಂಶೋಧನಾ ವರದಿಗಳು, ನಿಯತಕಾಲಿಕೆಗಳು, ಪತ್ರಿಕೆಗಳು, ಲೇಖನಗಳು

2) ಜನಗಣತಿ ದಾಖಲೆಗಳು

3) ವಾರಪತ್ರಿಕೆಗಳು, ಮಾಸಪತ್ರಿಕೆಗಳು ಇತ್ಯಾದಿ

## 1.6 ಕ್ಷೇತ್ರ ಅಧ್ಯಯನದಲ್ಲಿ ಎದುರಾದ ಸಮಸ್ಯೆಗಳು

ಕ್ಷೇತ್ರ ಅಧ್ಯಯನದಲ್ಲಿ ಅಧ್ಯಯನಕಾರರು ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಯಿತು. ಅವುಗಳೆಂದರೆ ಹಲವು ಮಾಹಿತಿದಾರರು, ಆದಾಯ ಮತ್ತು ಹೊಂದಿರುವ ಒಡವೆಯ ಕುರಿತು ನಿಖರ ಮಾಹಿತಿ ನೀಡುವಲ್ಲಿ ತೊಡಕುಗಳಾಗಿದ್ದು, ಇಲ್ಲಿ ಅಧ್ಯಯನಕಾರರು ಇತರ ಮಾಹಿತಿಯ ಮೂಲಗಳಿಂದ ಹಾಗೂ ಪ್ರಶ್ನೆಗಳನ್ನು ಪರೋಕ್ಷವಾಗಿ ಕೇಳುವುದರ ಮೂಲಕ ಮಾಹಿತಿ ಸಂಗ್ರಹಿಸಿದ್ದಾರೆ. ಮತ್ತು ಹೆಚ್ಚಿನ ಮಾಹಿತಿದಾರರು ಬೀಡಿ ಉದ್ಯಮವನ್ನು ಅವಲಂಬಿಸಿದ್ದುದರಿಂದ ವಾರದ ವೇತನವನ್ನು ಪರಿಗಣಿಸಿ ಆದಾಯವನ್ನು ತಿಳಿದುಕೊಳ್ಳಲಾಗಿದೆ.

ಬುಡಕಟ್ಟು ವಾಸಸ್ಥಳಗಳು (ಮುಖ್ಯವಾಗಿ ಬೆಳ್ತಂಗಡಿ ತಾಲೂಕಿನ ಮಲೆಕುಡಿಯರು, ಪುತ್ತೂರು ತಾಲೂಕಿನ ಮರಾಠಿ ನಾಯ್ಕ) ತಾಲೂಕು ಕೇಂದ್ರಗಳಿಂದ ಬಹಳ ಅಂತರದಲ್ಲಿದ್ದು, ಕಾಡಿನಂಚಿನಲ್ಲಿಯೂ ಇದ್ದುದರಿಂದ ಸಮರ್ಪಕವಾದ ವಾಹನ ಸೌಲಭ್ಯಗಳ ಕೊರತೆಯೂ ಸಮಸ್ಯೆಯಾಗಿತ್ತು. ಇದಕ್ಕೆ ಪರ್ಯಾಯ ವ್ಯವಸ್ಥೆಯನ್ನು ಬಳಸಿಕೊಳ್ಳಲಾಗಿದೆ.
ಬುಡಕಟ್ಟು ಮಹಿಳೆಯರು ಹೆಚ್ಚಾಗಿ ಬೀಡಿ ಉದ್ಯಮವನ್ನೇ ಅವಲಂಬಿಸಿರುವುದರಿಂದ, ಅಪರಾಹ್ನದ ಆಹಾರ ಸೇವನೆಯ ನಂತರ ಕಿರು ವಿಶ್ರಾಂತಿ ಪಡೆಯುತ್ತಿದ್ದುದರಿಂದ ಅಧ್ಯಯನಕಾರರು ಕೇವಲ ಬೆಳಗಿನ ಹೊತ್ತು ಮಾತ್ರ ಸಂದರ್ಶನ ನಡೆಸಲು ಸಾಧ್ಯವಾಗಿದ್ದು ದಿನವೊಂದಕ್ಕೆ ನಾಲ್ಕು ಅಥವಾ ಐದು ಬುಡಕಟ್ಟು ಮಹಿಳೆಯರ ಸಂದರ್ಶನಗಳನ್ನು ನಡೆಸಲಾಯಿತು. ಈ ಕಾರಣಕ್ಕಾಗಿ ಮತ್ತೆ ಗ್ರಾಮಗಳಿಗೆ ಸಂದರ್ಶನವನ್ನು ಪುನರಾವರ್ತನೆ ಮಾಡಲಾಗಿದೆ.

ಸಂದರ್ಶನದ ವೇಳೆಯಲ್ಲಿ ಕೆಲವು ಬುಡಕಟ್ಟು ಮಹಿಳೆಯರ ಕುಟುಂಬದ ಪುರುಷ ಸದಸ್ಯರು, ಮಹಿಳೆಯರ ಪರವಾಗಿ ಮಾತುಕತೆ ನಡೆಸಿರುವುದು ನೇರವಾಗಿ ಮಹಿಳೆಯರ ಅಭಿಪ್ರಾಯ ಸಂಗ್ರಹಿಸುವಲ್ಲಿ ಸ್ವಲ್ಪ ತೊಡಕುಂಟಾಗಿತ್ತು. ಹಾಗೂ ಇಲ್ಲಿ ಅಧ್ಯಯನಕಾರರ ಸಮಾಜ ಕಾರ್ಯದ ಸಂವಹನ ಕೌಶಲ್ಯಗಳು ಪರಿಸ್ಥಿತಿಯನ್ನು ನಿಯಂತ್ರಿಸಲು ಸಹಕರಿಸಿತು.

## 1.7 ಅಧ್ಯಯನದ ಮಿತಿಗಳು:

1) ಅಧ್ಯಯನವು ದಕ್ಷಿಣ ಕನ್ನಡ ಜಿಲ್ಲೆಗೆ ಮಾತ್ರ ಸೀಮಿತವಾಗಿದೆ. ದಕ್ಷಿಣ ಕನ್ನಡದಲ್ಲಿ ಒಟ್ಟು ಆರು ಬುಡಕಟ್ಟುಗಳಿದ್ದು ಜನಸಂಖ್ಯೆ ಅಧಿಕ ಇರುವ ನಾಲ್ಕು ಬುಡಕಟ್ಟುಗಳಾದ ಕೊರಗ, ಮಲೆಕುಡಿಯ, ಮರಾಠಿ ನಾಯ್ಕ ಮತ್ತು ಕುಡುಬಿ ಬುಡಕಟ್ಟುಗಳನ್ನು ಅಧ್ಯಯನದ ಉದ್ದೇಶಕ್ಕಾಗಿ ಆಯ್ಕೆ ಮಾಡಿರುವುದು ಹಾಗೂ ಕಡಿಮೆ ಜನಸಂಖ್ಯೆ ಹೊಂದಿರುವ ಪನಿಯನ್

ಮತ್ತು ಕಮ್ಮಾರ ಬುಡಕಟ್ಟುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಲ್ಲದೆ ಇರುವುದು ಅಧ್ಯಯನದ ಮಿತಿಯಾಗಿದೆ.

2) ಅಧ್ಯಯನದ ಉದ್ದೇಶಕ್ಕಾಗಿ 300 ಮಹಿಳೆಯರನ್ನು ಮಾತ್ರ ಆಯ್ಕೆ ಮಾಡಿದ್ದು ಹಾಗೂ ಪುರುಷರನ್ನು ಆಯ್ಕೆ ಮಾಡದೆ ಇರುವುದು ಅಧ್ಯಯನದ ಇನ್ನೊಂದು ಮಿತಿಯಾಗಿದೆ.

3) ಅಧ್ಯಯನದ ಉದ್ದೇಶಕ್ಕಾಗಿ 18 ರಿಂದ 65 ವಯೋಮಾನದ ಮಹಿಳೆಯರನ್ನು ಮಾತ್ರ ಆಯ್ಕೆ ಮಾಡಲಾಗಿದೆ.

## 1.8 ಅಧ್ಯಯನದ ರೂಪುರೇಷೆಗಳು

ಪ್ರಸ್ತುತ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ. ಮೊದಲ ಅಧ್ಯಾಯವು ಪ್ರಸ್ತಾವನೆ, ಪರಿಕಲ್ಪನಾತ್ಮಕ ಮತ್ತು ತಾತ್ವಿಕ ಚೌಕಟ್ಟು, ಸಮಸ್ಯೆಯ ಹೇಳಿಕೆ ಹಾಗೂ ಅಧ್ಯಯನದ ಮಹತ್ವ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ ಮತ್ತು ವ್ಯಾಪ್ತಿ, ಅಧ್ಯಯನದ ಮಾದರಿ ಮತ್ತು ಅಧ್ಯಯನಕ್ಕೆ ಬಳಸಿಕೊಂಡ ತಂತ್ರಗಳು, ಕ್ಷೇತ್ರ ಅಧ್ಯಯನದಲ್ಲಿ ಎದುರಾದ ಸಮಸ್ಯೆಗಳು, ಅಧ್ಯಯನದ ಮಿತಿಗಳು, ಅಧ್ಯಯನದ ರೂಪು ರೇಷೆಗಳು, ಹಾಗೂ ದತ್ತಾಂಶಗಳ ಪರಿಷ್ಕರಣಾ ವಿಧಾನಗಳು, ಇತ್ಯಾದಿಗಳನ್ನೊಳಗೊಂಡಿದೆ.

ಎರಡನೇ ಅಧ್ಯಾಯವು ದಕ್ಷಿಣ ಕನ್ನಡ ಜಿಲ್ಲೆಯ ಹಾಗೂ ದೇಶದ ವಿವಿಧ ಕಡೆಯ ಬುಡಕಟ್ಟು ಜನರ ಮತ್ತು ಮಹಿಳೆಯರನ್ನು ಕುರಿತಾದ ಸಾಹಿತ್ಯ ವಿಮರ್ಶೆ ಮತ್ತು ಸಮೀಕ್ಷೆಗಳ ವಿವರಗಳನ್ನು ಒಳಗೊಂಡಿದೆ.

ಮೂರನೆಯ ಅಧ್ಯಾಯವು ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯ ಕುರಿತು ಬೆಳಕು ಚೆಲ್ಲುತ್ತದೆ.

ನಾಲ್ಕನೇ ಅಧ್ಯಾಯವು ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಆರ್ಥಿಕ ಸ್ಥಿತಿ ಗತಿಯ ಚಿತ್ರಣದತ್ತ ನೋಟ ಬೀರುತ್ತದೆ.

ಐದನೆಯ ಅಧ್ಯಾಯವು ಬುಡಕಟ್ಟು ಮಹಿಳೆಯರ ಸಬಲೀಕರಣದ ಸಮಗ್ರ ಚಿತ್ರಣದತ್ತ ನೋಟ ಬೀರುತ್ತದೆ.

ಆರನೇ ಅಧ್ಯಾಯದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾರಾಂಶ ಮತ್ತು ಉಪಸಂಹಾರದ ಕುರಿತಾದ ಮಾಹಿತಿಗಳಿವೆ. ಕೊನೆಯಲ್ಲಿ ಮುಂದಿನ ಅಧ್ಯಯನಕ್ಕಾಗಿ ಕೆಲವು ಸಲಹೆಗಳನ್ನು ನೀಡಲಾಗಿದೆ.

# ಅಧ್ಯಾಯ – ಎರಡು

## ಪೂರ್ವ ಅಧ್ಯಯನಗಳ ಪರಾಮರ್ಶನ

ಭಾರತದಲ್ಲಿ ವೇದಗಳ ಕಾಲದಿಂದಲೂ ಅಸ್ತಿತ್ವದಲ್ಲಿರುವ ಜಾತಿ ವ್ಯವಸ್ಥೆಯಲ್ಲಿ ಯಾವ ಜಾತಿಗಳಿಗೂ ಸೇರದ ಪ್ರತ್ಯೇಕವಾಗಿ ಕಾಡುಗಳಲ್ಲಿ ಉಳಿದಿರುವ ಬುಡಕಟ್ಟುಗಳು ಅಲ್ಪ ಸಂಖ್ಯೆಯಲ್ಲಿದ್ದು ಈ ಬುಡಕಟ್ಟುಗಳು ತಮ್ಮ ವಿಶಿಷ್ಟವಾದ ಸಂಸ್ಕೃತಿ ಘಟಕಗಳಾದ ಸಂಪ್ರದಾಯಗಳು, ಸಾಹಿತ್ಯ, ಸಂಗೀತ, ನೃತ್ಯಕಲೆ, ಕುಶಲಕಲೆ ಮೊದಲಾದ ಹಲವಾರು ವೈವಿಧ್ಯಗಳಿಂದ ಭಾರತದ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿವೆ. ಆದರೆ ಭಾರತದ ಸಂಸ್ಕೃತಿಯ ವಿಚಾರ ಮಾಡುವಾಗ ಜಾತಿಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬುಡಕಟ್ಟು ಸಂಸ್ಕೃತಿಯನ್ನು ಕಡೆಗಣಿಸಿರುವುದು ಕಂಡುಬರುತ್ತದೆ. ಸ್ವಾತಂತ್ರ್ಯದ ನಂತರ ಹಾಗೂ ಅದಕ್ಕೆ ಮೊದಲು ಬ್ರಿಟಿಷರ ಕಾಲದಲ್ಲಿ ಈ ಬುಡಕಟ್ಟುಗಳ ಸಂಸ್ಕೃತಿಯ ಅಧ್ಯಯನಕ್ಕೆ ಗಮನ ಕೊಡಲಾಯಿತು.

ಬುಡಕಟ್ಟುಗಳನ್ನು ಮುಖ್ಯವಾಗಿ ಎರಡು ಉದ್ದೇಶಗಳಿಗಾಗಿ ಅಧ್ಯಯನ ಮಾಡಲಾಗುತ್ತದೆ. ಒಂದನೆಯದಾಗಿ ಪ್ರತಿಯೊಂದು ಬುಡಕಟ್ಟಿನ ಸಂಸ್ಕೃತಿಯನ್ನು ತಿಳಿಯುವುದಕ್ಕಾಗಿಯೇ ಅಧ್ಯಯನ ಮಾಡುವುದು. ಎರಡನೆಯದಾಗಿ ಒಟ್ಟಾರೆ ಮಾನವ ಸಂಸ್ಕೃತಿಯ ಸ್ವರೂಪವೇನು ಎಂಬುದನ್ನು ತಿಳಿಯುವ ಉದ್ದೇಶದಿಂದ ಅಧ್ಯಯನ ಮಾಡುವುದು. ಪ್ರಪಂಚದ ವಿವಿಧ ಬುಡಕಟ್ಟುಗಳ ಅಧ್ಯಯನ ನಡೆದ ನಂತರವೇ ಸಮಾಜದ ಸ್ವರೂಪ, ಸಂಸ್ಕೃತಿಯ ಕಾರ್ಯ ಮೊದಲಾದವುಗಳ ಸ್ವರೂಪ ತಿಳಿಯಲು ಸಾಧ್ಯವಾಯಿತು.

ಆದಿವಾಸಿ ಸಂಸ್ಕೃತಿ ಸರಳವಾದುದು, ಆಧುನಿಕ ಸಂಸ್ಕೃತಿಯಷ್ಟು ಜಟಿಲವಾದುದಲ್ಲ. ಆದಿವಾಸಿ ಸಮುದಾಯದ ವ್ಯಾಪ್ತಿಯೂ ಕಡಿಮೆ ಇರುವುದರಿಂದ ಸಂಸ್ಕೃತಿಯ ಅಧ್ಯಯನಕ್ಕೆ ಸಂಬಂಧಿಸಿದ ಅಧ್ಯಯನದ ವಿಧಾನಗಳನ್ನು ರೂಪಿಸಲು ಆರಂಭದ ದಿನಗಳಲ್ಲಿ ಸಹಾಯವಾಯಿತು. ಇದರಿಂದ ಸರಳ ರಚನೆಯ ಆದಿವಾಸಿ ಸಂಸ್ಕೃತಿಯನ್ನು ಅಭ್ಯಾಸ ಮಾಡಿ ಅನಂತರ ಸಂಕೀರ್ಣ ರಚನೆಯ ಆಧುನಿಕ ಸಂಸ್ಕೃತಿಗಳ ಅಧ್ಯಯನಕ್ಕೆ ಪ್ರವೇಶಿಸುವುದು ಉತ್ತಮ ಎಂಬ ದೃಷ್ಟಿಯಿಂದ ಮಾನವ ವಿಜ್ಞಾನಿಗಳು ಆರಂಭದಿಂದಲೇ ಆದಿವಾಸಿ ಸಂಸ್ಕೃತಿಯ ಅಧ್ಯಯನಕ್ಕೆ ಮಹತ್ವ ನೀಡಿದ್ದಾರೆ. ಹಾಗೂ ಆದಿವಾಸಿ ಸಂಸ್ಕೃತಿಯು ನಾಗರಿಕತೆಯ ಪ್ರಭಾವಕ್ಕೆ ಸಿಕ್ಕಿ ತನ್ನ ಮೂಲಸ್ವರೂಪ ಕಳೆದುಕೊಳ್ಳುವ ಮೊದಲೇ ಅಧ್ಯಯನ

ಮಾಡದಿದ್ದಲ್ಲಿ ಅದು ಮಾನವ ಸಂಸ್ಕೃತಿ ಅಧ್ಯಯನದಲ್ಲಿ ದೊಡ್ಡ ಕೊರತೆಯಾಗಿ ಉಳಯುವ ಸಾಧ್ಯತೆಯಿದೆ.

ಇದರೊಂದಿಗೆ ಅನೇಕ ಅನಾರೋಗ್ಯದ ಕಾರಣಗಳಿಂದಾಗಿ ಆದಿವಾಸಿಗಳ ಅಸ್ತಿತ್ವಕ್ಕೆ ಅಪಾಯ ಬರುವಂತಹ ಪರಿಸ್ಥಿತಿಯೂ ಕೆಲವು ಕಡೆ ಉಂಟಾಗಿದೆ. ಆದಿವಾಸಿ ಸಮಾಜದ ಅಸ್ತಿತ್ವವೇ ಇಲ್ಲವಾದರೆ ಅದು ತುಂಬಲಾರದ ನಷ್ಟವಾಗುತ್ತದೆ. ಈ ಎಲ್ಲಾ ಕಾರಣಗಳಿಂದ ಮಾನವ ವಿಜ್ಞಾನಿಗಳು ಹಾಗೂ ಆದಿವಾಸಿ ವಿದ್ವಾಂಸರು ಬುಡಕಟ್ಟು ಅಧ್ಯಯನಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾರೆ.

ಈ ದೃಷ್ಟಿಯಲ್ಲಿ ಬುಡಕಟ್ಟು ಸಮುದಾಯದ ಪರಿಕಲ್ಪನೆಯ ಕುರಿತು ಆರ್ಥಿಕ, ಸಾಮಾಜಿಕ, ಧಾರ್ಮಿಕ ಜೀವನದ ಕುರಿತು ಆದಿವಾಸಿ ಕಲ್ಯಾಣದ ಕುರಿತು ಅನೇಕ ಅಧ್ಯಯನಗಳಾಗಿವೆ. ಬುಡಕಟ್ಟು ಅಧ್ಯಯನ ಮಾಡಿದವರಲ್ಲಿ ಭಾರತೀಯ ವಿದ್ವಾಂಸರು ಮಾತ್ರವಲ್ಲದೆ ಪಾಶ್ಚಾತ್ಯ ವಿದ್ವಾಂಸರೂ ಇದ್ದಾರೆ. ಬುಡಕಟ್ಟು ಕುಲಕಸುಬು, ಭಾರತದ ಬುಡಕಟ್ಟು ಮಹಿಳೆಯರ ಸ್ಥಿತಿಗತಿ ಮತ್ತು ಸಬಲೀಕರಣ, ಬದಲಾಗುತ್ತಿರುವ ಆರ್ಥಿಕ ಸನ್ನಿವೇಶವು ಬುಡಕಟ್ಟು ಸಮುದಾಯವನ್ನು ಯಾವ ರೀತಿ ಅತಂತ್ರರನ್ನಾಗಿಸಿವೆ, ಆದಿವಾಸಿ ಮಹಿಳೆಯರಿಗೆ ಶಿಕ್ಷಣದ ಪ್ರಾಮುಖ್ಯತೆ, ಬುಡಕಟ್ಟು ಸಂಸ್ಕೃತಿ ಇತ್ಯಾದಿಗಳನ್ನು ಕುರಿತು ಅನೇಕ ಅಧ್ಯಯನಗಳಾಗಿವೆ. ಈ ಅಧ್ಯಯನಗಳು ಸಂಶೋಧಕರಿಗೆ ವಿವಿಧ ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಿರುವ ಬುಡಕಟ್ಟು ಸಮುದಾಯದ ಸ್ಥಿತಿಗತಿಗಳನ್ನು ಕುರಿತು ತಿಳಿದುಕೊಳ್ಳುವಲ್ಲಿ ಸಹಾಯಕವಾಗಿದೆ.

ಭಾರತದಲ್ಲಿನ ಬುಡಕಟ್ಟುಗಳು ಅವುಗಳ ಕುಲಕಸುಬುಗಳು, ಸಂಸ್ಕೃತಿ, ಬುಡಕಟ್ಟು ಮಹಿಳೆಯರ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಹಾಗೂ ಶಿಕ್ಷಣದ ಮೂಲಕ ಮಹಿಳೆಯರ ಸಬಲೀಕರಣ ಇತ್ಯಾದಿಗಳ ಕುರಿತು ಅನೇಕ ಅಧ್ಯಯನಗಳಾಗಿವೆ.

ಆದರೆ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರನ್ನು ಕುರಿತಾದ ಹಾಗೂ ಅವರ ಸಾಮಾಜಿಕ – ಆರ್ಥಿಕ ಸ್ಥಿತಿಗತಿಯನ್ನು ಮತ್ತು ಸಬಲೀಕರಣದ ಕುರಿತಾದ ಅಧ್ಯಯನಗಳು ಆಗಿಲ್ಲದೇ ಇರುವುದರಿಂದ ಈ ದೃಷ್ಟಿಯಲ್ಲಿ ಪ್ರಸ್ತುತ ಅಧ್ಯಯನವು ಪ್ರಾಮುಖ್ಯತೆಯನ್ನು ಪಡೆಯುತ್ತದೆ.

ಎ.ವಿ ನಾವಡ ಅವರು (2013) **"ತುಳುಪೊಲಿ"** ಎಂಬ ತಮ್ಮ ಅಧ್ಯಯನದಲ್ಲಿ ಕೊರಗ ಸಮುದಾಯದ ಭಾಷೆಯ ಕುರಿತು, ಕಳೆದ ಶತಮಾನದಲ್ಲಿ ಕೊರಗರ ಬದುಕು ಹೇಗೆ ಗುಲಾಮಗಿರಿಯ ಹಿಡಿತದಲ್ಲಿತ್ತು. ಕೊರಗರ ವೃತ್ತಿ, ಉದ್ಯೋಗದ ಕುರಿತು ಮಾಹಿತಿ ಒದಗಿಸಿದ್ದಾರೆ. ಫೀರ್ ಮಹಮ್ಮದ್ ಅವರು ಒಟ್ಟು ಕೊರಗ ಸಮುದಾಯದ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಗಾಗಿ ಸೂಚಿಸಿದ ಕ್ರಿಯಾಯೋಜನೆಯ ಕುರಿತಾದ ವಿವರಣೆಗಳನ್ನು ಈ ಅಧ್ಯಯನದಲ್ಲಿ ಗಮನಿಸಬಹುದು. ಒಟ್ಟು 19 ಅಂಶಗಳನ್ನು ಒಳಗೊಂಡ ಯೋಜನೆ ವಿಶೇಷವಾಗಿ ಕೊರಗ ಮಹಿಳೆಯರ ಅಭಿವೃದ್ಧಿಗೆ ಪೂರಕವಾಗುವ ನಿಟ್ಟಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಹಕಾರಿ ಸಂಘಗಳನ್ನು ಹುಟ್ಟು ಹಾಕಿ ಅವು ಸುಸ್ಥಿರವಾಗಿ ನೆಲೆಗೊಳ್ಳುವಂತೆ ಮಾಡಬೇಕು. ಹಾಗೂ ದೀರ್ಘಕಾಲ ಅರೆಹೊಟ್ಟೆಯಲ್ಲಿ ಕುಳಿತು ಬುಟ್ಟಿ ಹೆಣೆವ ಹಾಗೂ ಶ್ರಮದಾಯಕ ಕೆಲಸಗಳಲ್ಲಿ ನಿರತರಾಗುವ ಕೊರಗ ಮಹಿಳೆಯರ ವಿವಿದೋದ್ದೇಶ ಸಹಕಾರಿ ಸಂಘ ಸ್ಥಾಪಿಸಿದರೆ ಅವರ ಸಾಮರ್ಥ್ಯಕ್ಕೆ ತಕ್ಕ ಗೌರವ ಹಾಗೂ ಬೆಲೆ ದೊರೆಯುತ್ತದೆ. ಹಾಗೂ ಬೇಕಾದ ಗೃಹೋಪಯೋಗಿ ವಸ್ತುಗಳನ್ನು ನ್ಯಾಯ ಬೆಲೆಯಲ್ಲಿ ಈ ಸಹಕಾರಿ ಸಂಘದ ಮೂಲಕ ವಿತರಿಸಬಹುದು ಎನ್ನುವ ಸಲಹೆಯನ್ನು ಗುರುತಿಸಬಹುದಾಗಿದೆ.

ಕೊರಗರ ಮಹಿಳೆಯರಲ್ಲಿ ಎಲ್ಲಾ ಹಿಂದುಳಿದ ಸಮುದಾಯದಂತೆ ಅನಕ್ಷರತೆ ಸಮಸ್ಯೆಯಾಗಿದೆ. ಆದರೆ ತಮ್ಮ ಮುಂದಿನ ತಲೆಮಾರಿಗೆ ಶಿಕ್ಷಣದ ಅಗತ್ಯವಿದೆ, ನಮ್ಮ ಮಕ್ಕಳು ನಮ್ಮಂತೆ ಕಷ್ಟ ಪಡಬಾರದು. ಎನ್ನುವ ಅರಿವು ಪ್ರಸ್ತುತ ದಿನಗಳಲ್ಲಿ ಕೊರಗ ತಾಯಂದಿರಲ್ಲಿ ಕಾಣಬಹುದು. ಮಕ್ಕಳನ್ನು ಆಶ್ರಮ ಶಾಲೆಗಳಲ್ಲಿ ಸೇರಿಸುವಲ್ಲಿ ಕೊರಗ ಸಮುದಾಯ ಹೆಚ್ಚಿನ ಒಲವು ತೋರಿಸುತ್ತಿಲ್ಲ. ಕೀಳರಿಮೆ, ಹೊಸವಾತಾವರಣದಲ್ಲಿ ಹೊಂದಿಕೊಳ್ಳುವ ಸಮಸ್ಯೆ, ಮಕ್ಕಳನ್ನು ಬಿಟ್ಟು  ಇರಲಾಗದ ಅತಿ ವಾತ್ಸಲ್ಯ, ಇವೆಲ್ಲ ಕಾರಣಗಳನ್ನು ಕೊಡುವ ಕೊರಗ ಮಕ್ಕಳ ಹೆತ್ತವರು ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣದ ಅಗತ್ಯವಿಲ್ಲ. ಯಾಕೆಂದರೆ ಅದಕ್ಕಿಂತ ಹೆಚ್ಚು ಓದಿದ ಗಂಡನ್ನು ಹುಡುಕುವುದು ಕಷ್ಟ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಎಂದು ಅಧ್ಯಯನಕಾರರು ಪ್ರತಿಕ್ರಯಿಸಿದ್ದಾರೆ.

ಕೊರಗ ಮಹಿಳೆಯರ ಆರೋಗ್ಯ ಸ್ಥಿತಿಯ ಕುರಿತು ಅಧ್ಯಯನದಲ್ಲಿ ಉಲ್ಲೇಖವಿದೆ. ಬಹುತೇಕ ಕೊರಗ ಮಹಿಳೆಯರು ರಕ್ತ ಹೀನತೆ, ಚರ್ಮರೋಗ, ಕ್ಷಯ, ಮಲೇರಿಯಾಗಳಂತಹ ಕಾಯಿಲೆಯಿದ್ದು, ವಾಸಸ್ಥಾನದ ಸುತ್ತಲಿನ ಅಶೌಚ, ಕುಡಿವ ನೀರಿನ ಕೊರತೆ, ತೀವ್ರವಾಗಿ ಕಾಡುವ ಬಡತನಗಳೊಂದಿಗೆ ಅಂಧಶ್ರದ್ಧೆ, ಭೂತಪ್ರೇತಗಳ ಕಾಟ ಎನ್ನುವ ನಂಬಿಕೆ ಕೊರಗರ ಬದುಕಿಗೆ ಶಾಪವಾಗಿದೆ. ಆದುದರಿಂದ ಕೊರಗ ಮಹಿಳೆಯರು ಬಡಕಲು

ಶರೀರಿಗಳಾಗಿದ್ದು, ಕಾಯಿಲೆ ಪೀಡಿತರು. ಕುಟುಂಬದಲ್ಲಿ ಮಾತ್ರ ಕೊರಗ ಮಹಿಳೆಯ ಪಾತ್ರ ಮಹತ್ವದ್ದು, ಮನೆಯ ನಿರ್ವಹಣೆಯೊಂದಿಗೆ ಹಣಕಾಸಿನ ವ್ಯವಹಾರವನ್ನು ಅವಳು ನಿಭಾಯಿಸುತ್ತಾಳೆ. ಮೂಲತಃ ಮಾತೃ ಮೂಲೀಯರಾದ ಕೊರಗರು ಇತ್ತೀಚೆಗೆ ಜಾತಿ ಸಮಾಜಕ್ಕೆ ಅವರ ಕುಟುಂಬ ರಚನೆ ತಿರುಗುತ್ತಿದ್ದು ಪಿತೃ ಮೂಲೀಯ ಕುಟುಂಬದ ಎಲ್ಲ ಲಕ್ಷಣಗಳು ಕಾಣಿಸಿದರೂ ಮನೆಯಲ್ಲಿ ನಿರ್ಣಾಯಕ ಪಾತ್ರ ವಹಿಸುವುದು ಮಾತ್ರ ಹೆಣ್ಣು. ಹೆಣ್ಣಿನ ಮಾತಿಗೆ ಬೆಲೆಯಿದ್ದು ಮನೆಯ ದೈನಂದಿನ ಕೆಲಸಗಳಲ್ಲಿ ಗಂಡಸು ತಲೆ ಹಾಕುವುದಿಲ್ಲ. ಕುಟುಂಬ ಸಮಸ್ಯೆ ಬಂದಾಗ ಮಾತುಕತೆಗಳಲ್ಲಿ ಮಹಿಳೆಯರೇ ಪಾತ್ರ ವಹಿಸುತ್ತಾರೆ. ವ್ಯವಹಾರಗಳಲ್ಲಿ ಕೊರಗ ಮಹಿಳೆ ಹೆಚ್ಚು ದಿಟ್ಟೆಯಾಗಿ ಕಾಣುತ್ತಾಳೆ ಎನ್ನುವ ಅಧ್ಯಯನಕಾರರು ಕೊರಗರ ಉದ್ಯೋಗದ ಬವಣೆಯ ಮತ್ತು ಸಾಂಪ್ರದಾಯಿಕ '**ಅಜಿಲು ಸೇವೆ**'ಯ ಮಾಹಿತಿಯನ್ನು ಅಧ್ಯಯನದಲ್ಲಿ ಒದಗಿಸಿದ್ದಾರೆ.

ಒಟ್ಟಿನಲ್ಲಿ ಕೊರಗ ಸಂಘಟನೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಕೊರಗ ಮಹಿಳೆಯರ ಮಾತುಕತೆಗಳಲ್ಲಿ, ವ್ಯವಹಾರಗಳಲ್ಲಿ, ಅಭಿಪ್ರಾಯ ಮಂಡಿಸುವಲ್ಲಿ ಗಟ್ಟಿತನವನ್ನು ಕಾಣಬಹುದು ಹಾಗೂ ಸಮಾಜದಲ್ಲಿ ಕೊರಗ ಮಹಿಳೆಯ ಬದಲಾಗಬೇಕಾಗಿರುವ ಸ್ಥಾನಮಾನದ ಕುರಿತು ನಿರೀಕ್ಷೆಯನ್ನು ಇಟ್ಟುಕೊಳ್ಳಬಹುದು ಎಂದು ಅಧ್ಯಯನಕಾರರು ಅಭಿಪ್ರಾಯಪಡುತ್ತಾರೆ.

ಅರವಿಂದ ಮಾಲಗತ್ತಿ ಮತ್ತು ಒಡೆಯರ್ ಡಿ. ಹೆಗ್ಗಡೆ ಇವರು '**ಕೊರಗ ಜನಾಂಗ' ವಿಶ್ಲೇಷಣಾತ್ಮಕ ಅಧ್ಯಯನ** ಎಂಬ (ಇಸವಿ ಲಭ್ಯವಿಲ್ಲ) ತಮ್ಮ ಅಧ್ಯಯನದಲ್ಲಿ ಕೊರಗ ಜನಾಂಗದ ಮೂಲದ ಪೌರಾಣಿಕ ಹಿನ್ನೆಲೆ, ಚಾರಿತ್ರಿಕ ಹಿನ್ನೆಲೆ ಮತ್ತು ಅನ್ವಯಿಕತೆಯ ಕುರಿತು ವಿವರಿಸಿದ್ದಾರೆ.

ಅಧ್ಯಯನದಲ್ಲಿ ಕೊರಗರ ದೈಹಿಕ ಲಕ್ಷಣಗಳು, ವೇಷಭೂಷಣ, ಒಳಪಂಗಡಗಳು, ಬಳ ಪದ್ಧತಿ, ಕೊರಗರಲ್ಲಿ ಜನನ-ಮರಣದ ಸಂಸ್ಕಾರಗಳನ್ನು ಕುರಿತು, ಆಹಾರ ಪದ್ಧತಿ, ಹಬ್ಬ ಹರಿದಿನಗಳು, ಆರಾಧನೆ, ಕೊರಗರ ನಂಬಿಕೆ ಹಾಗೂ ಸಂಪ್ರದಾಯಗಳು, ವಿವಾಹ ಪದ್ಧತಿ, ಸಂಗೀತ, ಮನರಂಜನೆ, ಕೊರಗರ ಭಾಷೆ ಮತ್ತು ನ್ಯಾಯಪದ್ಧತಿಯನ್ನು ಕುರಿತು ಅವಲೋಕಿಸಬಹುದಾಗಿದೆ.

ಅಧ್ಯಯನವು ಕೊರಗರ ಆರ್ಥಿಕ ಸ್ಥಿತಿಗತಿ, ವೃತ್ತಿ, ಇತರ ಜನಾಂಗಗಳೊಂದಿಗಿನ ಸಂಬಂಧ, ಜೀವನ ಕ್ರಮ, ಕೊರಗರ ಸಮಸ್ಯೆಗಳು ಹಾಗೂ ಪರಿಹಾರಕ್ಕೆ ಸಲಹೆ ಸೂಚನೆಗಳನ್ನು ಕುರಿತಾಗಿಯೂ ಒಳನೋಟ ಬೀರುತ್ತದೆ.

ಒಟ್ಟಿನಲ್ಲಿ ಈ ಅಧ್ಯಯನವು ಕೊರಗ ಬುಡಕಟ್ಟು ಜನಾಂಗದ ಕುರಿತಂತೆ ಒಟ್ಟು ಚಿತ್ರಣವನ್ನು ನೀಡುವಲ್ಲಿ ಯಶಸ್ವಿಯಾಗಿದೆ.

ಪಿ. ಕಮಲಾಕ್ಷ ಅವರು **"ದ.ಕ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ"** (1968) ಎಂಬ ಅಧ್ಯಯನದಲ್ಲಿ ಕೊರಗರು ಪ್ರಸ್ತುತ ದ.ಕ ಜಿಲ್ಲೆಯ ಮಂಗಳೂರು ನಗರ ಮತ್ತು ಉಡುಪಿ ಪೇಟೆಯಲ್ಲಿ ಹಾಗೂ ಅನೇಕ ಇನ್ನಿತರ ಗ್ರಾಮಗಳಲ್ಲಿ ವಾಸವಿರುವ ಬಗ್ಗೆ ಮಾಹಿತಿ ನೀಡಿರುತ್ತಾರೆ. ಇವರು ಆದಿವಾಸಿಗಳೆಂದು ಹಾಗೂ ಅತೀ ಪೂರ್ವದಲ್ಲಿ ಕೊರಗರ ಪಂಗಡದವರಿಗೆ ಹುಬಾಶಿಕನೆಂಬ ರಾಜನಿದ್ದುದರ ಬಗ್ಗೆ ಈ ಪಂಗಡದವರಿಗೆ ಒಬ್ಬ ಸೇನಾನಿಯ ಹಾಗೆ ಸಮಾಜದಲ್ಲಿ ಓರ್ವ ನಾಯಕನಿದ್ದು ತುಳುವಿನಲ್ಲಿ **'ಮುಟ್ಟಾಳೆ ಅರಸು'** ಎಂದು ಕರೆಯುತ್ತಿದ್ದರು. ಇವರನ್ನು ಅನಾಗರಿಕರು, ಅಸ್ಪೃಶ್ಯರು, ಅಪಶಕುನದವರು ಎಂದು ನಂಬಿದ್ದರು. ಕೊರಗರ ಸೊಪ್ಪಿನ ಗುಡಿಸಲಿಗೆ **'ಕೊಟ್ಟ'** ಎಂದು ಕರೆಯುತ್ತಿದ್ದು ಕೊರಗರಲ್ಲಿ ಮೂರು ವಿವಿಧ ಪಂಗಡಗಳು ಇರುವುದರ ಕುರಿತು ಮಾಹಿತಿ ಇದೆ. ಕಾಡಿನ ಬೀಳಲುಗಳಿಂದ ತಯಾರಿಸಲಾದ ವಸ್ತುಗಳನ್ನು ಮಾರಾಟ ಮಾಡುತ್ತಿದ್ದು ಕೆಲವರು ನೈರ್ಮಲ್ಯದ ಕೆಲಸದಲ್ಲಿ ತೊಡಗಿಸಿಕೊಂಡಿದ್ದು, ಕೆಲವರು ಕೃಷಿಯಲ್ಲಿ ಆಳುಗಳಾಗಿ ಕೆಲಸ ಮಾಡುತ್ತಿದ್ದರು ಎಂದು ಉಲ್ಲೇಖಿಸಲಾಗಿದೆ.

ಸಂಶೋಧನಾಕಾರರು ಕೊರಗರ ಬಳ (ಗೋತ್ರ)ಗಳ ಬಗ್ಗೆಯೂ ವಿವರಿಸಿದ್ದು ಮದುವೆ ನೆರವೇರಿಸುವ ಕುರಿತು ವಿವರಣೆ ನೀಡಿದ್ದಾರೆ. ವರದಕ್ಷಿಣೆ ಪದ್ಧತಿ ಇಲ್ಲದೇ ಇರುವುದರ ಕುರಿತು ಉಲ್ಲೇಖಿಸಲಾಗಿದ್ದು ವಿಧವೆ ಮರುಮದುವೆಯಾಗಬಹುದು, ಕೊರಗರಲ್ಲಿ ವಿಚ್ಛೇದನ ಪದ್ಧತಿಯು ಇಲ್ಲ ಎನ್ನುವ ಮುಖ್ಯ ಅಂಶವನ್ನು ಸಂಶೋಧನಾಕಾರರು ತಿಳಿಸಿದ್ದಾರೆ. ಹೆರಿಗೆಯ ನಂತರ ಕ್ರಮಗಳ ಕುರಿತಾದ ವಿವರಣೆ ಇದ್ದು ಕೊರಗರ ಪೂರ್ವ ಆರಾಧನೆ ಮತ್ತು ಈಗ ಬದಲಾಗಿರುವ ರೀತಿಯ ಕುರಿತೂ ವರ್ಣಿಸಲಾಗಿದೆ.

ಕೊರಗ ಮಹಿಳೆಯರು ಅಲಂಕಾರಿಕ ಮಣಿಸರಗಳ ಕುರಿತು ಆಸಕ್ತಿಯನ್ನು ಹೊಂದಿದ್ದರು ಎಂದು ಉಲ್ಲೇಖವಿದೆ. ಇದರೊಂದಿಗೆ ಸತ್ತಾಗ ಹೂಳಡುವ ಪದ್ಧತಿಯನ್ನು ಕುರಿತು ಮಾಹಿತಿ ಇದೆ.

ಒಟ್ಟಿನಲ್ಲಿ ಕೊರಗರ ಪೂರ್ವ ಇತಿಹಾಸದಿಂದ ಪ್ರಾರಂಭಿಸಿ ಕೊರಗರ ಪ್ರಸ್ತುತ ಜೀವನದ ಶೈಲಿ ಆರ್ಥಿಕ, ಸಾಮಾಜಿಕ ಜೀವನದ ಕುರಿತು ಸಂಶೋಧನಾಕಾರರು ವಿವರಿಸಿದ್ದಾರೆ.

ಬಾಬು ಕೊರಗ ಪಾಂಗಾಳ ಅವರು (2009) **"ಕೊರಗರ ಅಜಲು : ಒಂದು ವಿಶ್ಲೇಷಣೆ"** ಎಂಬ ತಮ್ಮ ಅಧ್ಯಯನದಲ್ಲಿ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪ್ರಚಲಿತದಲ್ಲಿರುವ ಕೊರಗ ಸಮುದಾಯಕ್ಕೆ ಸಂಬಂಧಿಸಿದ ಅಜಲು ಪದ್ಧತಿಯ ಬಗ್ಗೆ ವಿವರಣೆಯಿದ್ದು ಅಜಲು ಪದದ ಅರ್ಥ, ಕೊರಗರ ಅಜಲೆಂದರೇನು? ಅಜಲು ಜಾಕ್ರಿಗಳು ಯಾವುವು, ಊರಿನ ಪ್ರತಿಷ್ಠೆಗಾಗಿ ಅಜಲು ಯಾವ ರೀತಿ ಪೂರಕವಾಗಿದೆ, ಅಜಲು ಜಾಕ್ರಿಯ ಅಪಾಯಗಳು, ಅಜಲಿನಲ್ಲಿನ ಅಸ್ಪೃಶ್ಯತೆ, ಅಜಲು ಯಾವ ರೀತಿ ಸಮುದಾಯದ ಮಕ್ಕಳಿಗೆ ಶಿಕ್ಷಣ ಒಗ್ಗದಂತೆ ಮಾಡುತ್ತದೆ. ಅಜಲು ಜಾಕ್ರಿ ಆಚರಣೆಯ ಪರಿಣಾಮಗಳ ಬಗ್ಗೆ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಕಾಣಬಹುದು.

ಅಜಲು ಪದ್ಧತಿ ವಿರೋಧಿ ಆಂದೋಲನ ಮತ್ತು ಅಜಲು ವಿರೋಧಿ ಚಳುವಳಿಗಳು ವಿಧಾನಮಂಡಲದಲ್ಲಿ ಈ ಕುರಿತಾದ ಚರ್ಚೆಗಳ ಕುರಿತು ವಿವರಿಸಲಾಗಿದೆ. ಅಧ್ಯಯನಕಾರರು ಅಜಲು ಜಾಕ್ರಿಗಳಲ್ಲಿ ಮುಖ್ಯವಾಗಿ ಸ್ವಚ್ಛತೆಯ ಕೆಲಸದ ಕುರಿತು ವಿವರಿಸಿದ್ದಾರೆ. ಅಜಲಿಗೆ ಸಂಬಂಧಿಸಿದಂತೆ ಕೊರಗರಿಂದ ಊರಿನ ಸ್ವಚ್ಛತಾ ಕೆಲಸ ಮಾಡಿಸುವುದಾಗಿದ್ದು ಸತ್ತ ಪ್ರಾಣಿಗಳನ್ನು ತೆಗೆಸುವುದು, ಮದುವೆ ಮುಂತಾದ ಕಾರ್ಯಗಳಲ್ಲಿ ಎಂಜಲೆಲೆ ತೆಗೆಸುವುದು, ಇವೆಲ್ಲವೂ ಈಗ ಕಡಿಮೆಯಾದಂತೆ ಅನಿಸಿದರೂ ಅವುಗಳು ಆಚರಣೆಯಲ್ಲಿದ್ದು ಅದರ ವಿಧಾನ ಮತ್ತು ಕ್ಷೇತ್ರಗಳು ಬದಲಾಗಿವೆ. ಸತ್ತ ಪ್ರಾಣಿಗಳನ್ನು ಊರಿನ ಜಾಕ್ರಿಯ ಬದಲು, ಉದ್ಯೋಗದ ಹೆಸರಲ್ಲಿ ಗ್ರಾಮ ಪಂಚಾಯತ್ ಮೂಲಕ ತೆಗೆಸುವುದು, ಪೇಟೆಗಳಲ್ಲಿ ಶೌಚಾಲಯ ಸ್ವಚ್ಛತಾ ಕೆಲಸಗಳಲ್ಲಿ ಅನೇಕ ಪುರುಷರು ಮತ್ತು ಮಹಿಳೆಯರು ತೊಡಗಿಸಿಕೊಂಡಿದ್ದು ಕೊರಗರು ತಾವು ಇದಕ್ಕೆ ಲಾಯಕ್ಕು ಎನ್ನುವ ಧೋರಣೆ ಬೆಳೆಸಿಕೊಳ್ಳುವಲ್ಲಿ ಈ ಅಜಲು ತರಬೇತಿಗೊಳಿಸಿದೆ.

ಇದರೊಂದಿಗೆ ಅನಿಷ್ಟ ಹೊರುವುದು, ಪಂಚಮರೆಂಬ ಆರೋಪದೊಂದಿಗೆ ಪಂಚಮದಾನದೊಂದಿಗೆ ಊರವರ ಕಾಯಿಲೆಯನ್ನು ತಮಗೆ ವರ್ಗಾಯಿಸಿಕೊಳ್ಳುವ ಮೂಢನಂಬಿಕೆಯೊಂದು ಚಾಲ್ತಿಯಲ್ಲಿದೆ. ಊರಿನ ಮಾರಿ (ಅನಿಷ್ಟ ಪೀಡೆ)ಗಳನ್ನು ಹೊರಗೆ ಓಡಿಸುವಲ್ಲಿ ಕೊರಗರು, ಎಲ್ಲರಿಗಿಂತಲೂ ಮುಂದೆ ಡೋಲು ಬಾರಿಸುತ್ತಾ ದೂರಕ್ಕೆ ಓಡಬೇಕಾಗುತ್ತದೆ. ಕಂಬಳದ ಪನಿಯಲ್ಲಿ ರಾತ್ರಿಯಿಡೀ ಜಾಗರಣೆ ಕಾಯುವುದು, ಇಲ್ಲಿ ಕೊರಗರು ಮದ್ಯಪಾನ ಮಾಡುತ್ತ ಕುಣಿತಕ್ಕೆ ಮೊರೆ ಹೋಗುವುದು (ಇದನ್ನು ಅನೇಕರು

ಕೊರಗರ ಸಂಸ್ಕೃತಿಯೆಂದು ವೈಭವೀಕರಿಸಿದ್ದಾರೆ. ಎನ್ನುವುದು ಅಧ್ಯಯನಕಾರರ ನೇಡಿನ ನುಡಿಯಾಗಿದೆ) ಕಂಬಳದ ಗದ್ದೆಯನ್ನು ಅನಿಷ್ಟ ಪೀಡೆಯಿಂದ ರಕ್ಷಿಸುವುದು ಇದರ ಉದ್ದೇಶವಾಗಿದೆ. ಊರಿನ ಪ್ರತಿಷ್ಠೆಯ ಕೋಲ, ಆಯನ, ರಥೋತ್ಸವ ಮುಂತಾದ ಊರಿನ ಜಾತ್ರೆಯಲ್ಲಿ ಕೊರಗರು ಮುಖ್ಯ ಕೇಂದ್ರದಿಂದ ದೂರದಲ್ಲಿ ನಿಂತು ಡೋಲು ಚಾಕರಿ ಮಾಡುತ್ತಾರೆ. ಈ ಎಲ್ಲಾ ಅಜಲು ಚಾಕರಿಯಿಂದ ಒಟ್ಟು ಸಮುದಾಯಕ್ಕೆ ಅನೇಕ ರೀತಿಯ ಅಪಾಯಗಳಿವೆ ಎನ್ನುವ ಅಧ್ಯಯನಕಾರರು, ಅಜಲಿನಲ್ಲಿ ಅಸ್ಪೃಶ್ಯತೆಯ ಬಹಿರಂಗ ಪ್ರದರ್ಶನ, ಜೀತದ ಪ್ರತ್ಯಕ್ಷ ರೂಪ, ಬೇಡಿ ತಿನ್ನುವ ಶರ್ತ, ಜಾತಿ ಆಧಾರಿತ ಮೇಲು ಕೀಳೆಂಬ ಭಾವನೆ, ಪುರೋಹಿತ ಶಾಹಿ ಮತ್ತು ಪಂಚಮರೆಂಬ ಭೇದ, ಮದ್ಯಪಾನಕ್ಕೆ ಪ್ರೇರೇಪಣೆ, ಮೃಗೀಯ ವರ್ತನೆಗೆ ತಳ್ಳುವ ಪಾತ್ರವಿದ್ದು ಇವೆಲ್ಲವೂ ಸಮುದಾಯದಲ್ಲಿ ಸಾಮಾಜಿಕ ಕೀಳರಿಮೆ, ಮೂಢನಂಬಿಕೆಗಳು, ಗುಲಾಮಿತನ, ದಾಸ್ಯಪ್ರವೃತ್ತಿ, ನಿರಕ್ಷರತೆ ಹಾಗೂ ಅನಾರೋಗ್ಯ ಸಮಾಜ ನಿರ್ಮಾಣಕ್ಕೆ ಕಾರಣವಾಗುತ್ತದೆ ಎನ್ನುವದು ಅಧ್ಯಯನಕಾರರ ಅಭಿಪ್ರಾಯವಾಗಿದೆ.

ಒಟ್ಟಿನಲ್ಲಿ ಅಜಲು ಮತ್ತು ಡೋಲಿನ ಚಾಕರಿಯು ಸಮುದಾಯದ ಒಟ್ಟು ಅಭಿವೃದ್ಧಿಗೆ ತೊಡಕೆಂದರೂ ತಪ್ಪಾಗಲಾರದು. ಕೊರಗ ಸಂಘಟನೆ ಈ ಅಜಲಿನ ವಿರುದ್ಧ ಹೋರಾಟ ನಡೆಸುತ್ತಿರುವುದು ಗಮನಾರ್ಹ ಅಂಶವಾಗಿದೆ ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಬಿ.ಎ ವಿವೇಕ ರೈ ಮತ್ತು ಡಿ. ಯದುಪತಿ ಗೌಡ ಅವರು (1996) **"ಮಲೆಕುಡಿಯರು"** ಎಂಬ ಗ್ರಂಥದಲ್ಲಿ ಮಲೆಕುಡಿಯರ ಕುರಿತು ಈವರೆಗೆ ಆದ ಅಧ್ಯಯನಗಳ ಕುರಿತು ಉಲ್ಲೇಖಿಸಿದ್ದು ಮಲೆಕುಡಿಯರ ಹುಟ್ಟಿನ ಬಗ್ಗೆ ಇರುವ ಆಚರಣೆ, ಆಹಾರ ಉಡುಗೆ-ತೊಡುಗೆ, ವ್ಯವಸಾಯ, ತಯಾರಿಸುವ ಬೆತ್ತದ ಮತ್ತು ಮರದ ಸಾಮಾಗ್ರಿಗಳ ಕುರಿತು ಮಾಹಿತಿಯಿದೆ. ಈ ಸಮುದಾಯದಲ್ಲಿ ಜನನ ಮತ್ತು ಮರಣ ಸಮಯಗಳಲ್ಲಿ ಆಚರಿಸುವ ಕ್ರಮಗಳು ಅಲ್ಲದೆ, ಮದುವೆಯಾಗದೇ ಸತ್ತ ಗಂಡು ಹೆಣ್ಣಿಗೆ ಪ್ರೇತದ ಮದುವೆ **'ಕುಲೆ ಮದ್ಮೆ'** ಮಾಡುವುದರ ಕುರಿತು ಉಲ್ಲೇಖವಿದೆ. ಅಧ್ಯಯನಕಾರರು ಸುಮಾರು 15 ಬೇರೆ ಬೇರೆ ಬಳಿಗಳ ವಿವರ ಕೊಡುತ್ತ ವಿಧವಾ ವಿವಾಹಕ್ಕೆ ಸಮುದಾಯ ಒತ್ತು ಕೊಡುತ್ತದೆ ಎಂದು ಸ್ಪಷ್ಟಪಡಿಸಿದ್ದಾರೆ.

ವರ್ಷಕ್ಕೊಮ್ಮೆ ನಡೆಸುವ ಭೂತಾರಾಧನೆ, ಆಚರಿಸುವ ವಿವಿಧ ಹಬ್ಬಗಳು ಸಮುದಾಯದಲ್ಲಿ ಶಿಕ್ಷಣದ ಮಟ್ಟದ ಕುರಿತು ಬೆಳಕು ಚೆಲ್ಲಿದ ಅಧ್ಯಯನಕಾರರು ವಿಶೇಷವಾಗಿ

ಇವರಲ್ಲಿ ಪ್ರಚಲಿತವಿರುವ ಜನಪದ ಹಾಡುಗಳು, ಕತೆಗಳು, ಜನಪದ ವೈದ್ಯ ಆಚರಣೆಗಳು ಪದ್ಧತಿಗಳ ಕುರಿತು ಬೆಳಕು ಚೆಲ್ಲಿದ್ದಾರೆ.

ಲಾರೆನ್ಸ್ ಡಿಸೋಜ ಎಸ್.ಜೆ ಅವರು (1994) **"Malekudiyas A Primitive Tribe"** (ಮಲೆಕುಡಿಯಾಸ್ ಎ ಪ್ರಿಮಿಟಿವ್ ಟ್ರೈಬ್) ಎನ್ನುವ ಅಧ್ಯಯನದಲ್ಲಿ ಮಲೆಕುಡಿಯರ ಮೂಲದ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಇಲ್ಲಿ 'ಮಲೆ' ಅಂದರೆ ಬೆಟ್ಟ, ಪರ್ವತ ಎಂದು, 'ಕುಡಿ' ಎಂದರೆ ತುತ್ತತುದಿ ಎನ್ನುವುದನ್ನು ತಿಳಿಸುತ್ತ ಮಲೆಕುಡಿಯರು ಅಂದರೆ ಬೆಟ್ಟ ಮತ್ತು ಪರ್ವತ ಪ್ರದೇಶಗಳಿಗೆ ಹತ್ತಿರದವರೆಂದು ತಿಳಿಸಿದ್ದಾರೆ.

ಅಧ್ಯಯನಕಾರರು ಮಲೆಕುಡಿಯರ ಜೀವನ ಶೈಲಿಯ ಕುರಿತು ವಿಶ್ಲೇಷಿಸುತ್ತಾ ಮಗು ಹುಟ್ಟುವಾಗ ಆಚರಿಸುವ ಕ್ರಮಗಳು, ಮರಣದ ಸಮಯದಲ್ಲಿನ ವಿಧಿ ವಿಧಾನಗಳನ್ನು ವಿವರಿಸಿದ್ದಾರೆ. ಆರ್ಥಿಕವಾಗಿ ಹಿಂದುಳಿದ ಪಂಗಡವಾದ ಮಲೆಕುಡಿಯರ ಕಸುಬಿನ ಕುರಿತು ಇವರ ಅಧ್ಯಯನ ಬೆಳಕು ಚೆಲ್ಲಿದೆ. ಹೆಚ್ಚಿನ ಮಲೆಕುಡಿಯರು ಕೃಷಿ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಮಲೆಕುಡಿಯರ ಧಾರ್ಮಿಕ ನಂಬಿಕೆಗಳನ್ನು ಕುರಿತು ಈ ಅಧ್ಯಯನದಲ್ಲಿ ಕಾಣಬಹುದಾಗಿದ್ದು ಆರೋಗ್ಯ, ಸಂಸ್ಕೃತಿ ಮತ್ತು ಶಿಕ್ಷಣದ ಕುರಿತಾದ ಮಾಹಿತಿ ಈ ಅಧ್ಯಯನದಿಂದ ಸಿಗುತ್ತದೆ.

ಈ ಅಧ್ಯಯನದಲ್ಲಿ ಹುಟ್ಟು, ಸಾವಿನ ಸಂದರ್ಭದಲ್ಲಿ ಮಹಿಳೆಯರ ಪಾತ್ರವನ್ನು ಬಿಟ್ಟರೆ ವಿಶೇಷವಾಗಿ ಮಹಿಳೆಯರ ಕುರಿತ ವಿಶ್ಲೇಷಣೆಗಳಿಲ್ಲ. ಅಧ್ಯಯನದ ಕೊನೆಯಲ್ಲಿ ಮಲೆಕುಡಿಯರ ಪ್ರಸ್ತುತ ಸಮಸ್ಯೆಗಳ ಕುರಿತು ಬೆಳಕು ಚೆಲ್ಲಲಾಗಿದೆ.

ಡಿ.ಬಿ ರಾಮಾಚಂದ್ರಾಚಾರ್ ಅವರು **"ಕುಡಿಯರ ಸಂಸ್ಕೃತಿ"** (1993) (ಉಪಸಂಸ್ಕೃತಿ ಅಧ್ಯಯನ) ಎಂಬ ತಮ್ಮ ಅಧ್ಯಯನದಲ್ಲಿ ಮಲೆಕುಡಿಯರ ಹಿನ್ನೆಲೆ, ಅವರ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ, ಭಾಷೆ, ಸಾಹಿತ್ಯ, ಆಚರಣೆ, ಕಲೆ, ಪ್ರದರ್ಶನಾತ್ಮಕ ಕಲೆಗಳು ಮತ್ತು ಕ್ರೀಡೆಗಳು, ಮಲೆಕುಡಿಯ ಜನಾಂಗ ಸಾಗಿ ಬಂದ ಮೂರು ದಾರಿಗಳಾದ ಪ್ರಾರಂಭದ ಕುಮೇರಿ ಸಂಸ್ಕೃತಿ, ನಾಗರಿಕ ಸಮಾಜದ ಸಂಪರ್ಕಕ್ಕೆ ಬಂದಾಗಿನ ಹಂತ ಹಾಗೂ ಆಧುನಿಕ ಕಾಲದ ಮಲೆಕುಡಿಯರ ಕುರಿತಾದ ಮಾಹಿತಿಗಳಿವೆ. ಆಧುನೀಕರಣದ ಪ್ರಭಾವದಿಂದಾಗಿ ಮಲೆಕುಡಿಯರ ಜೀವನದಲ್ಲಿ ಪ್ರಸ್ತುತ ಆಗಿರುವ ಬದಲಾವಣೆಗಳ ಕುರಿತು ಈ ಅಧ್ಯಯನ ಸ್ಪಷ್ಟಪಡಿಸುತ್ತದೆ.

ಎಸ್. ಮೋಹನ್ ಅವರು **"ಮರಾಠಿ ನಾಯ್ಕರು: ಒಂದು ಸಾಂಸ್ಕೃತಿಕ ಅಧ್ಯಯನ"** (2008) ಎಂಬ ಅಧ್ಯಯನದಲ್ಲಿ ಮರಾಠಿ ಎಂಬ ಶಬ್ದದ ಹುಟ್ಟು, ಸಮುದಾಯದ ಹಿನ್ನೆಲೆ, ಭೌಗೋಳಿಕವಾಗಿ ನೆಲೆಯೂರಲು ಕಾರಣಗಳು, ವಲಸೆ, ಕ್ರಮೇಣ ಕಾಡು ಕಡಿದು ತಮ್ಮನ್ನು ವ್ಯವಸಾಯದಲ್ಲಿ ತೊಡಗಿಸಿಕೊಂಡಿರುವುದರ ವಿವರಣೆಯನ್ನು ಗಮನಿಸಬಹುದು.

ಮರಾಟಿಗರ ಸಾಮಾಜಿಕ ಜೀವನ, ಮುಖ್ಯವಾಗಿ ಜನನ ಸಮುದಾಯದಲ್ಲಿನ ಆಚರಣೆಗಳು, ನಾಮಕರಣ, ಅಮೆ, ಬಾಣಂತನ, ತೆಗೆದುಕೊಳ್ಳಬಹುದಾದ ಆಹಾರ ಪದ್ಧತಿಗಳು, ಹೆಣ್ಣು ಋತುಮತಿಯಾದ ಸಂದರ್ಭದಲ್ಲಿ ಮಾಡುವ ಸಂಪ್ರದಾಯಗಳ ಕುರಿತಾಗಿಯೂ ಅಧ್ಯಯನಕಾರರು ಗಮನ ಹರಿಸಿದ್ದಾರೆ.

ವಿವಾಹ ಮತ್ತು ಕುಟುಂಬ ವ್ಯವಸ್ಥೆ, ಬಳಿ ಪದ್ಧತಿ, ಹೆಣ್ಣು ನೋಡುವ ಶಾಸ್ತ್ರ ನಿಶ್ಚಯ, ಮದರಂಗಿ, ಕಲಶ ಶಾಸ್ತ್ರ, ದಿಬ್ಬಣ, ಧಾರಾಕಾರ್ಯ, ಕಂಕಣಧಾರೆ, ದೇಸೆ, ವಿಧವಾ ವಿವಾಹ, ಸೀಮಂತದ ಕುರಿತು ಅಧ್ಯಯನಕಾರರು ಬೆಳಕು ಚೆಲ್ಲಿದ್ದಾರೆ. ಜೀವನದ ಕೊನೆಘಟ್ಟವಾದ ಮರಣ ಸಂದರ್ಭದಲ್ಲಿ ಅನುಸರಿಸುವ ಸಂಪ್ರದಾಯಗಳು, ಚಿತೆಗೆ ಅಗ್ನಿಸ್ಪರ್ಶ ಮಾಡುವುದು, ಕರ್ಮ ಹಿಡಿಯುವುದು, ಸಾವು, ಪಿಂಡ ಬಿಡುವುದು ಮುಂತಾದ ಕಾರ್ಯಗಳ ಬಗ್ಗೆಯೂ ಮಾಹಿತಿಯಿದೆ.

ಪ್ರಮುಖ ಆಚರಣೆಯಾದ ಗೋಂದೋಳು, ಅಥವಾ ದೇವಿ ಪೂಜೆ ಪ್ರಾರಂಭವಾದ ರೀತಿ, ಭೈರವ ಪೂಜೆ, ಭೈರವನ ಆಚರಣೆಯಲ್ಲಿನ ವಿಧಿ ನಿಷೇಧಗಳು ಗ್ರಹಪ್ರವೇಶ, ಆಹಾರ ಪದ್ಧತಿ, ಪಾನೀಯಗಳು, ಉಡುಗೆತೊಡುಗೆ ಮರಾಠಿಗರ ಜನಪದ ವೈದ್ಯ ಪದ್ಧತಿ, ಜನಪದ ಕ್ರೀಡೆಗಳ ಬಗ್ಗೆಯೂ ಮಾಹಿತಿಯಿದ್ದು ಆಧುನೀಕತೆಯ ಭರದಲ್ಲಿ ಸಹಜ ಪರಿವರ್ತನೆಯ ಹಾದಿಯಲ್ಲಿ ಮುಂದಿನ ಭವಿಷ್ಯದ ಬಗ್ಗೆ ಮರಾಠಿಗರು ಯೋಚಿಸಬೇಕು ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಸಮಾಜ ಶಾಸ್ತ್ರದ ಪ್ರಾಧ್ಯಾಪಕ ಹಾಗೂ ಸಂಶೋಧಕರಾದ ವೈ ರವೀಂದ್ರನಾಥ್ ರಾವ್ (1995) ಮತ್ತು (2003) ಅವರು ಕುಡುಬಿ ಜನಾಂಗದ ಕುರಿತು ಸಮಾಜ ಶಾಸ್ತ್ರೀಯವಾಗಿ ಮತ್ತು ಸಾಮಾಜಿಕ ಮಾನವ ಶಾಸ್ತ್ರೀಯವಾಗಿ ಆಳವಾಗಿ ಅಧ್ಯಯನ ನಡೆಸಿದ ಮೊದಲ ವ್ಯಕ್ತಿಯಾಗಿದ್ದಾರೆ. ಅವರು (**"Tribal Tradition and Change. A Study of**

**Kudubis of South India")** ಟ್ರೈಬಲ್ ಟ್ರೆಡಿಷನ್ ಎಂಡ್ ಚೇಂಜ್. ಎ ಸ್ಟಡಿ ಆಫ್ ಕುಡುಬಿಸ್ ಆಫ್ ಸೌತ್ ಇಂಡಿಯಾ ಎನ್ನುವ ತಮ್ಮ ಅಧ್ಯಯನದಲ್ಲಿ ಪರಿಶಿಷ್ಟ ಪಂಗಡಕ್ಕೆ ಇನ್ನೂ ಸೇರ್ಪಡೆಯಾಗದ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಕುಡುಬಿ ಬುಡಕಟ್ಟು ಸಮುದಾಯದ ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬುಡಕಟ್ಟು ಎಂಬ ಪರಿಕಲ್ಪನೆಯಿಂದ ಆರಂಭಗೊಂಡ ಇವರ ಅಧ್ಯಯನದಲ್ಲಿ ಆದಿವಾಸಿ ಸಮುದಾಯವು ಹೇಗೆ ಹಿಂದೂ ಸಮುದಾಯಕ್ಕಿಂತ ಭಿನ್ನ ಎನ್ನುವುದನ್ನು ಸ್ಪಷ್ಟಪಡಿಸುತ್ತ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯಲ್ಲಿನ ಒಟ್ಟು ಬುಡಕಟ್ಟು ಸಮುದಾಯಗಳು, ಜನಸಂಖ್ಯೆ ಹಾಗೂ ವಿಶೇಷವಾಗಿ ಕುಡುಬಿ ಸಮುದಾಯದ ಸಂಸ್ಕೃತಿ, ಕುಟುಂಬ ವ್ಯವಸ್ಥೆ, ವಿವಾಹ ಪದ್ಧತಿ, ಧಾರ್ಮಿಕ ಸಂಸ್ಥೆ, ಆರ್ಥಿಕ ಸಂಸ್ಥೆಗಳು ಮತ್ತು ರಾಜಕೀಯ ಸಂಸ್ಥೆಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ.

ಮುಖ್ಯವಾಗಿ ಅಧ್ಯಯನಕಾರರು ಕುಡುಬಿ ಸಮುದಾಯದ ಸಾಮಾಜಿಕ ವ್ಯವಸ್ಥೆ ಮತ್ತು ಚಟುವಟಿಕೆಗಳಲ್ಲಿ ಆಗಿರುವ ಬದಲಾವಣೆ, ವಿಶೇಷವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳಾದ ಭಾಷೆ, ವಿವಾಹ ಪದ್ಧತಿ, ಆಹಾರ, ಉಡುಪುಗಳು, ಆರ್ಥಿಕ, ಧಾರ್ಮಿಕ ಮತ್ತು ನ್ಯಾಯ ತೀರ್ಮಾನಗಳ ಕುರಿತು ವಿವರಿಸಿದ್ದಾರೆ.

ಇದರೊಂದಿಗೆ ಕುಡುಬಿ ಮಹಿಳೆಯರಿಗೆ ಮನೆಯ ಒಳಗಿನ ಕೆಲಸಗಳಲ್ಲಿ ಸಂಪೂರ್ಣ ಜವಾಬ್ದಾರಿ ಹಾಗೂ ಇವರಲ್ಲಿ ವಧುದಕ್ಷಿಣೆ ಪದ್ಧತಿ ಇದೆ ಎನ್ನುವ ಅಂಶವನ್ನು ಸ್ಪಷ್ಟಪಡಿಸಿದ್ದಾರೆ.

ಕುಡುಬಿ ಜನರ ಅನೇಕ ಸಮಸ್ಯೆಗಳನ್ನೂ ಈ ಅಧ್ಯಯನದಲ್ಲಿ ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ಜೊತೆಯಲ್ಲಿ ಅವರ ಸಮಸ್ಯೆಗಳ ಪರಿಹಾರಕ್ಕಾಗಿ ಸರಕಾರಕ್ಕೆ ಮತ್ತು ಆಡಳಿತಗಾರರಿಗೆ ಅನೇಕ ಶಿಫಾರಸ್ಸುಗಳನ್ನು ಈ ಅಧ್ಯಯನದಲ್ಲಿ ಸೂಚಿಸಿದ್ದಾರೆ.

ಎ.ಡಿ ಬಸವರಾಜ (2010) ಅವರ **"ಕುಡುಬಿ ಬುಡಕಟ್ಟಿನ ಸಾಮಾಜಿಕ ಬದುಕು"** ಎಂಬ ಅಧ್ಯಯನದಲ್ಲಿ ಮುಖ್ಯವಾಗಿ ಕುಡುಬಿಯರ ಸಾಮಾಜಿಕ ಹಿನ್ನೆಲೆ, ಮಲ್ಲಿಕಾರ್ಜುನ ಲಿಂಗ ದೊರೆತ ಬಗ್ಗೆ ಇರುವ ಪುರಾಣ, ಕುಡುಬಿ ಭಾಷೆಯ ಬಗ್ಗೆ ವಿವರಣೆ, ಆಹಾರ ಪದ್ಧತಿ, ಕುಟುಂಬ ವ್ಯವಸ್ಥೆ ಕುಡುಬಿಯರ ನ್ಯಾಯ ತೀರ್ಮಾನ ಪದ್ಧತಿಯ ಕುರಿತು ವಿವರಣೆ ಇದೆ.

ಪಿತೃ ಪ್ರಧಾನ ವ್ಯವಸ್ಥೆ ಕುಡುಬಿ ಸಮುದಾಯದಲ್ಲಿ ಕಂಡುಬರುವುದರಿಂದ ಮನೆಯ ಹಿರಿಯನೇ ಇಡೀ ಕುಟುಂಬದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಆಚರಣೆಗಳನ್ನು

ನಿಯಂತ್ರಿಸುವವನಾಗಿರುತ್ತಾನೆ. ಆಸ್ತಿ ಹಕ್ಕು ತಂದೆಯನಂತರ ಮಗನಿಗೆ ಬರುತ್ತದೆ. ಮಹಿಳೆಯರು ಪುರುಷರಂತೆ ಹೊಲಗದ್ದೆ ತೋಟಗಳಲ್ಲಿ ಶ್ರಮ ಜೀವಿಯಾಗಿ ದುಡಿಯುತ್ತಾರೆ. ಕುಟುಂಬ ನಿರ್ವಹಣೆ ಜವಾಬ್ದಾರಿ ಹೊತ್ತರೂ ಅವಳಿಗೆ ವಿಶೇಷವಾದ ಸ್ಥಾನವಿಲ್ಲ. ಆದರೆ ಸಮಾನ ವ್ಯವಸ್ಥೆಯಿದೆ. ಸಮುದಾಯದಲ್ಲಿ ಅನೈತಿಕ ಸಂಬಂಧ ಇರಿಸಿಕೊಂಡರೆ ಗಂಡಿಗೂ ಬಹಿಷ್ಕಾರ ಹಾಕುವುದನ್ನು, ಗಂಡ ಸತ್ತ ನಂತರ ವಿಧವೆ ಗರ್ಭಿಣಿ ಆದರೆ ಅವಳಿಗೂ ಸಮುದಾಯದಿಂದ ಬಹಿಷ್ಕಾರ ಹಾಕುತ್ತಾರೆ. ಪತಿಯೇ ಸರ್ವಸ್ವ ಎಂದು ಒಪ್ಪಿಕೊಳ್ಳುವ ಹಿನ್ನೆಲೆಯಲ್ಲಿ ಸ್ತ್ರೀಗೆ ಸ್ಥಾನಮಾನವಿದೆ. ವಿವಾಹ ವಿಚ್ಛೇದನಗಳು ಬಹಳ ಅಪರೂಪ. ಅಂತಹವುಗಳು ನಡೆಯದಂತೆ ಜಾಗ್ರತೆ ಮಾಡುತ್ತಾರೆ.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆ ಇತರ ಸಮುದಾಯಗಳಂತೆ ಮನೆಯ ಮುಖ್ಯ ಜವಾಬ್ದಾರಿ ತೆಗೆದುಕೊಳ್ಳುತ್ತಾಳೆ ಎನ್ನುವ ಅಂಶವನ್ನು ಈ ಅಧ್ಯಯನದಿಂದ ಅರ್ಥ ಮಾಡಿಕೊಳ್ಳಬಹುದಾಗಿದೆ.

ಕೆ. ಎಂ. ಮೇತ್ರಿ ಮತ್ತು ಚೆಲುವರಾಜು ಸಂಪಾದಕರಾಗಿರುವ "ಬುಡಕಟ್ಟು ಅಧ್ಯಯನ" ಎಂಬ ನಿಯತಕಾಲಿಕದಲ್ಲಿ (2006) ಎ.ಡಿ.ಬಸವರಾಜ ಅವರು **"ಅಭಿವೃದ್ಧಿ ನೆಲೆಯಲ್ಲಿ ಸಂಪರ್ಕ ಮತ್ತು ಸಂಘರ್ಷ– ಕುಡುಬಿ ಸಮುದಾಯ"** ಎಂಬ ತಮ್ಮ ಲೇಖನದಲ್ಲಿ ವೈವಿಧ್ಯತೆಯಿಂದ ಕೂಡಿದ ನಮ್ಮ ದೇಶದಲ್ಲಿ ವಿವಿಧ ಜಾತಿಗಳು, ಸಮುದಾಯಗಳು, ಆದಿವಾಸಿಗಳು ತಮ್ಮದೇ ಸಾಂಸ್ಕೃತಿಕ ಹಿನ್ನೆಲೆಯೊಂದಿಗೆ ಬದುಕುತ್ತಾ ಬಂದಿವೆ. ಹಲವು ಬುಡಕಟ್ಟುಗಳು ಬಹಳ ಎಚ್ಚರಿಕೆಯಿಂದ ತಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿವೆ. ಮುಖ್ಯವಾಗಿ ಒಟ್ಟು 50 ಬುಡಕಟ್ಟುಗಳು ಸಂವಿಧಾನಬದ್ಧವಾಗಿದ್ದು ಉಳಿದ ಬುಡಕಟ್ಟುಗಳನ್ನು ಅಲೆಮಾರಿ ಬುಡಕಟ್ಟುಗಳು ಹಾಗೂ ಅರೆ ಅಲೆಮಾರಿ ಬುಡಕಟ್ಟು ಎಂದು ಕರೆದಿದ್ದು ಬುಡಕಟ್ಟು ಸಮುದಾಯವಾಗಿ ಕುಡುಬಿಯರು ಪಶ್ಚಿಮ ಘಟ್ಟದ ಇಳಿಜಾರಿನಲ್ಲಿ ಜೀವಿಸುತ್ತಿದ್ದು ಅನೇಕ ಸಮಸ್ಯೆಗಳಿಂದ ಬಳಲುತ್ತಿದ್ದಾರೆ.

ವಿಶೇಷವಾಗಿ ಅಧ್ಯಯನಕಾರರು ಇಲ್ಲಿ ಶಿವಮೊಗ್ಗದ ಮೇಘಾನೆ ಕುಡುಬಿಯರು ಮತ್ತು ಬಚ್ಚೋಡಿಯ ಕುಡುಬಿಯರನ್ನು ಕೇಂದ್ರವಾಗಿಟ್ಟುಕೊಂಡು ವಿಶ್ಲೇಷಿಸಿದ್ದಾರೆ. ಮೇಘಾನೆ ಕುಡುಬಿಯರು ಸರಕಾರದ ಸೌಲಭ್ಯಗಳನ್ನು ಯಾವುದನ್ನು ಬಯಸದೆ ನಾಡಿನ ಸಂಪರ್ಕವಿಲ್ಲದೆ ವಿದ್ಯುತ್, ಸಾರಿಗೆ, ಶಾಲೆ, ಅಂಗನವಾಡಿಯ ಸೌಲಭ್ಯಗಳನ್ನು ಪಡೆಯದೆ ಅವರದೇ ಆದ ಸಂಪ್ರದಾಯದಲ್ಲಿ ಬದುಕು ಸಾಗಿಸುತ್ತಿದ್ದಾರೆ. ಆದರೆ ಈಗ ಸರ್ಕಾರಿ ಅಧಿಕಾರಿಗಳು, ರಾಜಕೀಯ

ನಾಯಕರು ಸಮುದಾಯವನ್ನು ಭೇಟಿ ಮಾಡಿ ಜಾಗತೀಕರಣ ಮತ್ತು ಆಧುನೀಕರಣ ಮುಂತಾದ ಸೌಲಭ್ಯಗಳನ್ನು ಕುರಿತು ಮಾತುಕತೆ ನಡೆಸುವುದರಿಂದ ಕುಡುಬಿಯರು ಬದುಕಿನ ಅಭಿವೃದ್ಧಿಯಲ್ಲಿ ಸಂಘರ್ಷಕ್ಕೆ ಒಳಗಾಗಿದ್ದಾರೆ ಎನ್ನುವುದು ಅಧ್ಯಯನಕಾರರ ಅಭಿಪ್ರಾಯವಾಗಿದೆ.

ಸಮುದಾಯವೊಂದು ಪ್ರಾಚೀನ ಕಾಲದ ಬದುಕನ್ನು ಬಿಟ್ಟು ಬೇರೊಂದು ಬದುಕು ಕಟ್ಟಿಕೊಳ್ಳಬೇಕಾಗಿ ಬಂದಾಗ ಸಂಘರ್ಷಕ್ಕೆ ಒಳಗಾಗುತ್ತದೆ. ಹಾಗೂ ತನ್ನನ್ನು ತಾನು ವಿಮರ್ಶೆಗೆ ಒಳಪಡಿಸಿಕೊಳ್ಳಬೇಕಾಗುತ್ತದೆ ಎನ್ನುವ ಅಧ್ಯಯನಕಾರರು, ಬಚ್ಚೋಡಿಯ ಕುಡುಬಿಯರು ಪ್ರಸ್ತುತ ಇರುವ ಎಲ್ಲಾ ಸೌಲಭ್ಯಗಳನ್ನು ಪಡೆದು ಯಾವುದೇ ಸಂಘರ್ಷಕ್ಕೆ ಒಳಗಾಗದೇ ಆಧುನಿಕ ಬದುಕನ್ನು ಒಪ್ಪಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಹಿಂದಿನ ಎಲ್ಲಾ ಪದ್ಧತಿಯನ್ನು ಬಿಟ್ಟು ಆಧುನಿಕ, ಸಂಸ್ಥೆಗಳಾದ ಕೋರ್ಟು, ಕಛೇರಿ ಹಾಗೂ ಮುಖ್ಯವಾಹಿನಿಯ ಜನರಂತೆ ದೇವರುಗಳನ್ನು ಆರಾಧಿಸುವುದು ಸಾಮಾನ್ಯವಾಗಿದೆ.

ಆದರೆ ಮೇಘಾನೆಯ ಕುಡುಬಿಯರು ಇಂದಿನ ಹೊಸ ಬದುಕನ್ನು ಒಪ್ಪಿಕೊಳ್ಳದೇ ಇರುವುದು ಅವರನ್ನು ಅತಂತ್ರರನ್ನಾಗಿಸಿದೆ. ಆದ್ದರಿಂದ ಮೇಘಾನೆಯ ಕುಡುಬಿಯರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿರುವುದರಿಂದ ಈ ಅತಂತ್ರ ಸ್ಥಿತಿಯ ಬಗ್ಗೆ ಯೋಚಿಸಬೇಕಾಗಿದೆ. ಎನ್ನುತ್ತಾರೆ ಅಧ್ಯಯನಕಾರರು.

ಆದ್ದರಿಂದ ಕುಡುಬಿಯರ ಬದುಕು ಆಧುನಿಕ ಸಮಾಜದ ಸಂಪರ್ಕದೊಂದಿಗೆ ಸಂಘರ್ಷಾತ್ಮಕವಾದ ರೀತಿಯಲ್ಲಿ ಸಾಗಿದೆ. ಕುಡುಬಿ ಸಮುದಾಯವು ಇಂದಿನ ಆಧುನಿಕತೆಯ ಅಬ್ಬರಕ್ಕೆ ಧೈರ್ಯಗೆಡದೆ ಅದರಿಂದ ದೂರ ಸರಿದಿದೆ ಎಂದು ಅಧ್ಯಯನಕಾರರು ಪ್ರತಿಕ್ರಿಯಿಸಿದ್ದಾರೆ.

ಈ ಅಧ್ಯಯನದಲ್ಲಿ ಆಧುನಿಕ ಬದುಕನ್ನು ಒಪ್ಪಿಕೊಂಡು, ಹೊಂದಿಕೊಂಡು ಹೋಗುವ ಬುಡಕಟ್ಟು ಹಾಗೂ ಒಪ್ಪಿಕೊಳ್ಳದೇ ದೂರವಿರುವ ಬುಡಕಟ್ಟು ಸಮುದಾಯಗಳ (ಶಿವಮೊಗ್ಗದ ಮೇಘಾನೆ ಮತ್ತು ಬಚ್ಚೋಡಿ) ಕುರಿತು ಅಧ್ಯಯನಕಾರರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಆಧುನಿಕತೆಯನ್ನು ಒಪ್ಪಿಕೊಳ್ಳಲಾಗದ ಬುಡಕಟ್ಟುಗಳ ಸಾಮಾಜಿಕ ಜೀವನದಲ್ಲಿ ಸಂಘರ್ಷ ಸಾಮಾನ್ಯವಾಗಿರುತ್ತದೆ. ಆದರೆ ಅವರದ್ದು ಅತಂತ್ರ ಬದುಕು ಎಂದು ನಾವು ಗಮನಿಸಬಹುದಾಗಿದೆ.

ಎ.ವಿ.ನಾವಡ ಅವರು 'ತುಳುಪೋಲಿ' ಎಂಬ ತಮ್ಮ ಅಧ್ಯಯನದಲ್ಲಿ (2013) (ಗಾಯತ್ರಿ ನಾವಡ – ಕುಡುಬಿ ಸಮಗ್ರ ಅಧ್ಯಯನ ಯೋಜನೆಯ ಸಾರರೂಪ) **'ಹೊಸತು ಹಳತರ ಸಂಘರ್ಷದಲ್ಲಿ ಕುಡುಬಿಯರು'** ಎನ್ನುವ ಲೇಖನದಲ್ಲಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಗೋವಾ ಕುಡುಬಿಯರ ಪ್ರಭೇದಗಳು ಮತ್ತು ಜೀವನಾವೃತ್ತ ಆಚರಣೆಗಳ ಕುರಿತು ಮಾಹಿತಿ ನೀಡಿದ್ದಾರೆ.

ಕುಡುಬಿಯರು ಸಾಮಾಜಿಕ ಸ್ತರ ವಿಂಗಡನೆಯ ಯಾವ ಗುಂಪಿಗೆ ಸೇರುತ್ತಾರೆ ಎನ್ನುವ ಜಿಜ್ಞಾಸೆಯಿದೆ. ಅವರಲ್ಲಿ ಬುಡಕಟ್ಟಿನ ಎಲ್ಲ ಲಕ್ಷಣಗಳನ್ನು ಗುರುತಿಸಲು ಸಾಧ್ಯವಿದೆ ಎನ್ನುತ್ತ ಸಾಂಸ್ಕೃತಿಕ ಸಮನಾಂಶಗಳ ನಿಟ್ಟಿನಿಂದ ಅವರನ್ನು ಜನಪದ ವರ್ಗ, ಕೃಷಿಯಾಧಾರಿತವಾಗಿರುವುದರಿಂದ ವೃತ್ತಿ ವರ್ಗ ಎಂದು, ನಾಗರಿಕತೆಯೊಂದಿಗೂ ತಮ್ಮ ಸಂಪ್ರದಾಯಗಳೊಂದಿಗೂ ಬದುಕುತ್ತಿರುವುದರಿಂದ ಸಂಪ್ರದಾಯ ಶೀಲವರ್ಗ ಎಂದು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಯನಕಾರರು ಕುಡುಬಿಯರ ಮುಖ್ಯ ನಾಲ್ಕು ಪ್ರಭೇದ (ಗೋವೆ, ಕುಮಿ, ನಾಡ, ಕೊಡಿಯಾಲ) ಗಳನ್ನು ಹೆಸರಿಸಿದ್ದು ಮೂಲಸ್ಥಿತಿ, ವಾಸಸ್ಥಾನ, ಉದ್ಯೋಗದ ಹಿನ್ನೆಲೆಯಿಂದ ಈ ಪದಗಳ ಉಗಮವಾಗಿರಬಹುದು ಎಂದಿದ್ದು ಕುಡುಬಿಯರ ಮೂಲ ಒಳವಿಭಜನೆಗಳು ಹಾಗು ಕುಡುಬಿಯರ ಪುರುಷ ಮತ್ತು ಮಹಿಳೆಯರ ಹೆಸರುಗಳು, ವೇಷಭೂಷಣದ ಕುರಿತು ಮಾಹಿತಿ ಇದೆ. ಕುಡುಬಿ ಮಹಿಳೆಯರ ಮೂಲ ವಿಶಿಷ್ಟ ಉಡುಪಿನ ಬಗ್ಗೆಯೂ ವಿವರಣೆ ನೀಡಿದ ಸಂಶೋಧನಾಕಾರರು ಕುಡುಬಿ ಮಹಿಳೆಯರು ನಿರಾಭರಣೆಯಾದರೂ ಅಲಂಕಾರ ಪ್ರಿಯರು ಎನ್ನುವ ಅಂಶವನ್ನು ಪ್ರಸ್ತುತಪಡಿಸಿದ್ದು ಮದುವೆ, ಹೋಳಿಹಬ್ಬ ಮುಂತಾದ ವಿಶೇಷ ಸಂದರ್ಭಗಳಲ್ಲಿ ವಿಶೇಷವಾಗಿ ಅಲಂಕರಿಸಿಕೊಳ್ಳುತ್ತಾರೆಂಬ ಮಾಹಿತಿ ಇದೆ.

ಕುಡುಬಿಯರ ಆಹಾರ ಪದ್ಧತಿಯ ಕುರಿತು ಬೆಳಕು ಚೆಲ್ಲಿದ ಅಧ್ಯಯನಕಾರರು ಕುಡುಬಿಯರು ಭತ್ತದ ಬೇಸಾಯದೊಂದಿಗೆ ತರಕಾರಿಗಳನ್ನು ಬೆಳೆಸುತ್ತಿದ್ದಾರೆ ಎಂದು ಪ್ರಸ್ತುತ ಪಡಿಸಿದ್ದಾರೆ. ಜೀವನ ಪ್ರಕ್ರಿಯೆಯ ಆಚರಣೆಗಳಾದ ಹುಟ್ಟು, ವಿವಾಹ, ಸಾವಿನ ಸುತ್ತದ ಆಚರಣೆ, ಕೋಲೆಹಬ್ಬ (ಜಕ್ಕಿನ ಒಳಗೆ ಸೇರಿಸುವುದು) ಕುಡುಬಿಯರ ಒಳಾಡಳಿತ, ಧಾರ್ಮಿಕ ವ್ಯವಸ್ಥೆ, ಭೂತಗಳ ಬಗ್ಗೆಯಿರುವ ವಿಶೇಷ ಭಯ,

ಗೌರವ, ಕುಡುಬಿಯರ ಬೇಟೆಯೆಂಬ ಧಾರ್ಮಿಕ ಕ್ರಿಯೆ ಇತ್ಯಾದಿಗಳನ್ನು ಸಂಶೋಧನಾಕಾರರು ಪರಿಣಾಮಕಾರಿಯಾಗಿ ಬಣ್ಣಿಸಿದ್ದಾರೆ.

ಪ್ರಸ್ತುತ ಆರ್ಥಿಕ ಅಭದ್ರತೆಯೊಂದಿಗೆ ಬದುಕುತ್ತಿರುವ ಕುಡುಬಿಯರಿಗೆ ವಿಶೇಷವಾಗಿ ಯಾವುದೇ ರಾಜಕೀಯ ಒಲವು ಇಲ್ಲದಿರುವುದು, ಶಿಕ್ಷಣದ ಕೊರತೆಯಿರುವುದು, ಸಾಮಾಜಿಕವಾಗಿ ಹಿಂದುಳಿದಿದ್ದು ಸರ್ಕಾರವು ಇವರನ್ನು ಪರಿಶಿಷ್ಟ ಪಂಗಡದಿಂದ ಕಿತ್ತುಹಾಕಿರುವುದು ಮತ್ತು ಹಿಂದುಳಿದ ಜಾತಿ ಪ್ರವರ್ಗಕ್ಕೆ ಸೇರಿಸಿರುವುದು ಮುನ್ನಡೆಗೆ ಕಂಟಕವಾಗಿದೆ ಎಂದು ಅಧ್ಯಯನಕಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಅಧ್ಯಯನದಲ್ಲಿ ಕುಡುಬಿಯರದ್ದು ಪಿತೃವಂಶೀಯ ಕುಟುಂಬ ವ್ಯವಸ್ಥೆಯಾಗಿರುವುದರಿಂದ, ಮದುವೆಯಾದ ಗಂಡು ಮಕ್ಕಳು ತಂದೆಯ ಮನೆಯಲ್ಲೇ ವಾಸಮಾಡುವುದು ಹಾಗೂ ಕುಟುಂಬದಲ್ಲಿ ಕುಡುಬಿ ಸ್ತ್ರೀಯರ ಸ್ಥಾನಮಾನ, ಸಮಾಧಾನಕರವಾಗಿಲ್ಲ ಎಂಬ ಉಲ್ಲೇಖವಿದೆ.

ಮದುವೆಯ ದಿನ ತಾಯಿ ಮನೆಯಿಂದ ಬರುವಾಗ ಹಕ್ಕು, ಅಧಿಕಾರ ಭಾವನಾತ್ಮಕ ಸಂಬಂಧಗಳನ್ನು ಕಳಚಿಕೊಂಡು ಬರುವ ಆಕೆಗೆ ಗಂಡನ ಮನೆಯೇ ಸರ್ವಸ್ವವಾಗಿದ್ದು ಮೊದಲ ಹೆರಿಗೆಗೂ ತಾಯಿ ಮನೆಗೆ ಹೋಗುವಂತಿಲ್ಲ. ತಾಯಿ ತಂದೆ ತೀರಿಕೊಂಡಾಗಲೂ ಉತ್ತರಕ್ರಿಯೆಯಲ್ಲಿ ಪಾಲ್ಗೊಳ್ಳುವಂತಿಲ್ಲ. ಸತತ ದುಡಿಮೆಯೊಂದಿಗೆ ಮಕ್ಕಳ ಲಾಲನೆ ಪಾಲನೆಯೂ ಅವಳದ್ದೇ ಜವಾಬ್ದಾರಿ. ಕುಡುಬಿ ಹೆಣ್ಣು ಕುಟುಂಬದ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳಲು ಅವಕಾಶವಿರುವುದಿಲ್ಲ. ಅಡುಗೆ ಮನೆ ನಿರ್ವಹಣೆಯೇ ಆಕೆಯ ಜವಾಬ್ದಾರಿ. ಇಲ್ಲಿ ಹೆಣ್ಣಿಗೆ ಮರುಮದುವೆಗೆ ಅವಕಾಶವಿಲ್ಲದೆ ಇರುವುದು, ಜನಪದ ಹಾಡು, ಕುಣಿತ, ಕತೆಗಳ ಪ್ರದರ್ಶನದಲ್ಲಿ ಆಕೆಗೆ ಪ್ರಾತಿನಿಧ್ಯವಿಲ್ಲದೆ ಇರುವುದು. ವಧುವಿನ ತಾಯಿ ಮಗಳ ಮದುವೆಯಲ್ಲಿ ಪಾಲ್ಗೊಳ್ಳದೆ ಇರುವುದು ಮದುವೆಯಾದ ಹೆಣ್ಣು ತಾಯಿ ಮನೆಯ ಬಂಧುತ್ವದಿಂದ ಪೂರ್ಣವಾಗಿ ಹೊರಸಾಗುವುದು ಇತ್ಯಾದಿಗಳು ಕುಡುಬಿ ಹೆಣ್ಣಿನ ಸಾಮಾಜಿಕ ಸ್ಥಾನಮಾನ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ತೃಪ್ತಿಕರವಾಗಿಲ್ಲ ಎಂದು ಅನ್ನಿಸಿದರೆ ತಪ್ಪಾಗಲಾರದು ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಕೆ. ಎಂ. ಮೈತ್ರಿ ಅವರು **"ಬುಡಕಟ್ಟು ಕುಲಕಸುಬುಗಳು"** ಎಂಬ ತಮ್ಮ ಅಧ್ಯಯನದಲ್ಲಿ (2002) ಬುಡಕಟ್ಟು ಜನಾಂಗಗಳ ಅಭಿವೃದ್ಧಿಗೆ ಕೈಗೊಳ್ಳಲಾದ ಯೋಜನೆಗಳು

ಅವರನ್ನು ತಲುಪಿಲ್ಲ. ಅದರೊಂದಿಗೆ ಈ ಜನಾಂಗ ಪರಂಪರೆಯಿಂದ ರೂಪಿಸಿಕೊಂಡು ಬಂದಿದ್ದ ಕುಲಕಸುಬುಗಳು ಮರೆಯಾಗುತ್ತಿದ್ದು, ಅವುಗಳ ಜಾಗವನ್ನು ಅರ್ಥವತ್ತಾಗಿ, ಇತರ ಯಾವುದೇ ವೃತ್ತಿಗಳು ತುಂಬಿಲ್ಲ. ಜನ್ಮ ಸಹಜವಾಗಿ ಬಂದ ವೃತ್ತಿಗಳ ಲಾಭವನ್ನು ಇತರರು ಪಡೆಯುತ್ತಿರುವುದರಿಂದ ಬುಡಕಟ್ಟು ಜನ ಅತಂತ್ರರಾಗಿದ್ದು ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಇನ್ನಷ್ಟು ಧಾರುಣವಾಗಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಅಧ್ಯಯನದಲ್ಲಿ ಕರ್ನಾಟಕದ ಬುಡಕಟ್ಟುಗಳ ಸಂಕ್ಷಿಪ್ತ ಪರಿಚಯದೊಂದಿಗೆ ಅವುಗಳ ಕುಲಕಸುಬುಗಳ ಸ್ಥಿತಿಗತಿಗಳ ಅವಲೋಕನವನ್ನು ಮಾಡಲಾಗಿದೆ. ಸುಮಾರು 49 ಕರ್ನಾಟಕದ ಬುಡಕಟ್ಟುಗಳ ಕುಲಕಸುಬುಗಳ ವಿವರಣೆಯನ್ನು ಸಂಶೋಧನಾಕಾರು ನೀಡಿದ್ದು, ಬುಡಕಟ್ಟುಗಳಲ್ಲಿ ಅಲೆಮಾರಿ, ಬೇಟೆ ಹಾಗೂ ಆಹಾರ ಸಂಗ್ರಾಹಕ ಬುಡಕಟ್ಟು, ಪಶುಪಾಲಕ ಹಾಗೂ ಕೃಷಿಕ ಬುಡಕಟ್ಟುಗಳೆಂದು ವರ್ಗೀಕರಿಸಲಾಗಿದೆ.

ಅಧ್ಯಯನಕಾರರು ತಮ್ಮ ಈ ಅಧ್ಯಯನದಲ್ಲಿ ಕೊರಗ ಬುಡಕಟ್ಟುಗಳ ಬಗ್ಗೆಯೂ ಬೆಳಕು ಚೆಲ್ಲಿದ್ದಾರೆ. 'ಕೊರಗ' ಪದದ ಅರ್ಥ, ಪ್ರಸ್ತುತ ಜನಸಂಖ್ಯೆ, ಉಪಪಂಗಡಗಳು, ಒಳಪಂಗಡಗಳು, ರಕ್ತಸಂಬಂಧ, ಸೂಚಕ ಬಳಗಳು, ಆಚರಣೆಗಳು, ಅಭಿವೃದ್ಧಿಯ ಮಾರ್ಗೋಪಾಯಗಳು, ಹಾಗೂ ಕುಲಕಸುಬುಗಳನ್ನು ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮಲೆಕುಡಿಯ ಬುಡಕಟ್ಟುಗಳ ಬಗ್ಗೆಯೂ ಸಂಶೋಧನಾಕಾರರು ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಮಲೆಕುಡಿಯರ ಹೊರ ಬಾಂಧವ್ಯದ ಬಳಗಳು, ಹಬ್ಬ ಹರಿದಿನಗಳು, ಸಾಕ್ಷರತೆಯ ಪ್ರಮಾಣ ಹಾಗೂ ಕುಲಕಸುಬುಗಳ ಕುರಿತು ಈ ಅಧ್ಯಯನದಲ್ಲಿ ಮಾಹಿತಿ ಇದೆ.

ಮರಾಠಿ ನಾಯ್ಕರ ಜನಸಂಖ್ಯೆ, ಬಳಗಳು, ಜಾತಿ, ಪಂಚಾಯತಿ, ಜನನ ಮರಣ, ಋತುಮತಿಯಾಗುವ ಸಂದರ್ಭದ ಆಚರಣೆ ಮತ್ತು ತೊಡಗಿಸಿಕೊಂಡಿರುವ ಕಸುಬುಗಳ ಕುರಿತು ಸಂಶೋಧನಾಕಾರರು ಬೆಳಕು ಚೆಲ್ಲಿದ್ದಾರೆ.

ಮಧು ಗುಂಡ್ಲುಪೇಟೆ ಅವರು (2009) **"ಬುಡಕಟ್ಟು ಜನಾಂಗಗಳ ಒಂದು ಅವಲೋಕನ"** ಎಂಬ ತಮ್ಮ ಅಧ್ಯಯನದಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿರುವ ಸೋಲಿಗ, ಜೇನುಕುರುಬ, ಕಾಡುಕುರುಬ ಜನಾಂಗಗಳನ್ನು ಕುರಿತು ಬೆಳಕು ಚೆಲ್ಲಿದ್ದಾರೆ.

ಬುಡಕಟ್ಟು ಜನರಲ್ಲಿ ವಿಭಿನ್ನ ಭಾಷೆ, ಧರ್ಮ, ಸಂಸ್ಕೃತಿ, ಸಂಪ್ರದಾಯ, ವೃತ್ತಿ, ಉಡುಗೆ ಊಟೋಪಚಾರಗಳಿವೆ. ಬಹುಪಾಲು ಬುಡಕಟ್ಟು ಜನರು ಇಂದಿಗೂ ಕೂಡ ಮುಖ್ಯ ವಾಹಿನಿಯ ಸಂಪರ್ಕವನ್ನೇ ಕಾಣದೆ ಶೋಷಣೆಗೊಳಪಟ್ಟು ಅಸಹಾಯಕರಾಗಿದ್ದಾರೆ. ಸ್ವಾತಂತ್ರ್ಯಾನಂತರ ವಿವಿದೋದ್ದೇಶ ಗಿರಿಜನ ಯೋಜನೆಗಳನ್ನು ಜಾರಿಗೊಳಸಿದ್ದು 6ನೇ ಪಂಚವಾರ್ಷಿಕ ಯೋಜನೆ ಅಂತ್ಯದವರೆಗೆ ಸುಮಾರು 180 ಸಮಗ್ರ ಗಿರಿಜನಾಭಿವೃದ್ಧಿ ಕ್ಷೇತ್ರಗಳು ಮತ್ತು 72 ಪುರಾತನ ಗಿರಿಜನ ಪ್ರದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳನ್ನು ಜಾರಿಗೊಳಸಲಾಗಿದೆ. ಇಂದಿಗೂ ರಾಷ್ಟದಲ್ಲಿ ಬುಡಕಟ್ಟು ಜನರಿರುವೆಡೆಯಲ್ಲಿ ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆಯಿದ್ದರೂ ಗಿರಿಜನ ಸಬಲೀಕರಣ ಪೂರ್ಣವಾಗಿಲ್ಲ ಎನ್ನುವ ಅಭಿಪ್ರಾಯ ಅಧ್ಯಯನಕಾರರದ್ದು.

ಈ ಅಧ್ಯಯನದಲ್ಲಿ ವಿಶೇಷವಾಗಿ ಅಧ್ಯಯನಕಾರರು ಬಂಡಿಪುರ ಅರಣ್ಯದಲ್ಲಿರುವ ಬೆಟ್ಟ ಕುರುಬರ ಸಂಸ್ಕೃತಿ, ಉಗಮ, ಆರ್ಥಿಕ ಜೀವನ ಮತ್ತು ಸೋಲಿಗರ ಸಾಂಸ್ಕೃತಿಕ ಜೀವನ, ಸೋಲಿಗರ ಐತಿಹಾಸಿಕ ಹಿನ್ನೆಲೆ, ಆರ್ಥಿಕ ಜೀವನ, ಬದಲಾದ ನಾಗರಿಕ ಜೀವನದ ಕುರಿತೂ ಬೆಳಕು ಚೆಲ್ಲಿದ್ದಾರೆ.

ಬುಡಕಟ್ಟುಗಳ ಅಭಿವೃದ್ಧಿಗಿರುವ ಮಾರ್ಗಗಳು ಮತ್ತು ಈ ಕುರಿತಂತೆ ಮಾನವಶಾಸ್ತ್ರಜ್ಞರ ಚಿಂತನೆಗಳು, ಪಂಚಶೀಲ ತತ್ವದ ಮಹತ್ವ ಹಾಗೂ ಬುಡಕಟ್ಟುಗಳಲ್ಲಿರುವ ವಿವಾಹ ಪದ್ಧತಿ, ಧಾರ್ಮಿಕ ಜೀವನದ ಕುರಿತೂ ಮಾಹಿತಿ ನೀಡಿದ್ದಾರೆ.

ಜೇನು ಕುರುಬರ ಉಗಮ, ಪಂಗಡಗಳು ಆರ್ಥಿಕ ಜೀವನ, ಸಾಮಾಜಿಕ ಜೀವನ ಹಾಗೂ ಭಾಷೆಯ ಕುರಿತಂತೆ ವಿವರಣೆಯಿದ್ದು ಪರಿಶಿಷ್ಟ ವರ್ಗಗಳ ಸಂವಿಧಾನಾತ್ಮಕ ಸೌಲಭ್ಯಗಳ ಕುರಿತಂತೆ ಗಿರಿಜನ ಉಪಯೋಜನೆ ಹಾಗೂ ಬುಡಕಟ್ಟು ಅರಣ್ಯ ಕಾಯ್ದೆಯ ಕುರಿತೂ ಅಧ್ಯಯನಕಾರರು ವಿವರಿಸಿದ್ದಾರೆ. ಇದರೊಂದಿಗೆ ಚಾಮರಾಜನಗರ ಜಿಲ್ಲೆಯ

ಆದಿವಾಸಿ ಮಕ್ಕಳ ಶೈಕ್ಷಣಿಕ ಸಮಸ್ಯೆಗಳು, ಸರ್ಕಾರೇತರ ಸಂಸ್ಥೆಗಳ ಕಾರ್ಯ ಚಟುವಟಿಕೆ ಹಾಗೂ ಸಲಹೆಗಳನ್ನು ಕುರಿತೂ ವಿವರಣೆ ಇದೆ.

ಒಟ್ಟಿನಲ್ಲಿ ಅಧ್ಯಯನಕಾರರು ಸೋಲಿಗರು, ಜೇನುಕುರುಬ ಮತ್ತು ಬೆಟ್ಟ ಕುರುಬ ಜನಾಂಗಗಳ ಸ್ಥಾನ ಮಾನ, ಸವಾಲುಗಳು ಮತ್ತು ಅಭಿವೃದ್ಧಿ ಅವಕಾಶಗಳ ಬಗ್ಗೆ ವೈಜ್ಞಾನಿಕವಾದ ಸಂಶೋಧನೆ ನಡೆಸಿ ಸಮಾಜಕ್ಕೆ ಕೊಡುಗೆಯನ್ನಿತ್ತಿದ್ದಾರೆ.

ಮಂಜುನಾಥ ಬೇವಿನಕಟ್ಟೆ ಅವರು (2007) **'ಆದಿವಾಸಿ ಸಂಸ್ಕೃತಿಯ ಸ್ಥಿತಿಗತಿ'** ಎಂಬ ತಮ್ಮ ಅಧ್ಯಯನದಲ್ಲಿ ಬುಡಕಟ್ಟು ಸಂಸ್ಕೃತಿಯ ಬಗ್ಗೆ ಉಪಯುಕ್ತ ಬೆಳಕು ಚೆಲ್ಲಿದ್ದಾರೆ. ಗಿರಿಜನ ಸಂಸ್ಕೃತಿಯು ಕಾಲಾಂತರದಲ್ಲಿ ಬದಲಾಗಿ ಜಾತಿಗಳಾಗಿ ಮಾರ್ಪಟ್ಟು ಮುಂದೆ ಹಿಂದೂ ಧರ್ಮದ ಚೌಕಟ್ಟಿಗೆ ಒಳಗಾಗಿ ತೀವ್ರವಾಗಿ ಪರಿವರ್ತನೆ ಹೊಂದಿರುವುದನ್ನು ಇವರ ಅಧ್ಯಯನದಲ್ಲಿ ಗಮನಿಸಬಹುದು.

ಅಧ್ಯಯನಕಾರರು ಬುಡಕಟ್ಟು ಧರ್ಮ, (ಸಮಾಜದಲ್ಲಿ ಶಾಂತಿ ನೆಮ್ಮದಿಯಿಂದ ಜೀವಿಸಲು ರೂಪಿಸಿಕೊಂಡು ಬಂದ ವ್ಯವಸ್ಥೆ) ಬುಡಕಟ್ಟು ಚಹರೆ ಎಂದರೆ, ಬುಡಕಟ್ಟು ಅಧ್ಯಯನದ ಮುಖೇನ ಬುಡಕಟ್ಟು ಜನರು ತಮ್ಮ ಸೃಜನಶೀಲತೆಯನ್ನು ಉಳಿಸಿಕೊಳ್ಳುವುದು. ತಮ್ಮದಲ್ಲದ ಸಂಸ್ಕೃತಿಯತ್ತ ದಾಪುಗಾಲು ಹಾಕದೇ ಇರುವುದು, ಸಂಸ್ಕೃತಿಗಳ ವೈವಿಧ್ಯಗಳ ಮೂಲಕ ಏಕರೂಪಿ ಆಕ್ರಮಣವನ್ನು ತಡೆಯುವುದು ಹಾಗೂ ಕೆಲವೇ ಜನರ ರಾಷ್ಟ್ರ ಸಂಸ್ಕೃತಿಯನ್ನು ಜನಸಂಸ್ಕೃತಿಯ ಮೇಲೆ ಹೇರಿ ಅಧಿಕಾರ ಸ್ಥಾಪಿಸಬಯಸುವ ಶಕ್ತಿ, ರಾಜಕಾರಣ ಹಾಗೂ ಸಾಂಸ್ಕೃತಿಕ ದಬ್ಬಾಳಿಕೆ ತಡೆಯಬೇಕಿದೆ ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಯನಕಾರರು ಬೇಡನಾಯಕರ ಮೂಲ ವೃತ್ತಿಯ ಬಗ್ಗೆ ವಿವರಿಸುತ್ತಾ ಕಾಡುಗಳಿಲ್ಲದ ಕಾರಣ ಬೇಡನಾಯಕರು ತಮ್ಮ ಪೂರ್ವಾಗ್ರಹಗಳನ್ನು ತೊರೆದು ಸಮಕಾಲೀನ ಸಮಾಜದೊಂದಿಗೆ ಬೆರೆಯುವುದು ಅನಿವಾರ್ಯ ಎನ್ನುವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಸಮುದಾಯಗಳ ಬದುಕು ಅತ್ಯಂತ ದಯನೀಯವಾಗಿರುವ ಈ ಸಂದರ್ಭದಲ್ಲಿ ಅವರ ಬಗೆಗಿನ ಅಧ್ಯಯನಗಳು ಅವರಲ್ಲಿ ಸಾಮಾಜಿಕ ಎಚ್ಚರವನ್ನುಂಟುಮಾಡಬೇಕು. ಎಂದೂ ಅಭಿಪ್ರಾಯಪಡುತ್ತಾರೆ.

ಒಟ್ಟಿನಲ್ಲಿ ಬುಡಕಟ್ಟು ಸಂಸ್ಕೃತಿಯು ಆಧುನೀಕತೆಯ ಪ್ರವೇಶದಿಂದಾಗಿ ತನ್ನ ಮೂಲಸ್ಥಿತಿಯಿಂದ ದೂರಸರಿಯಬೇಕಾಗಿ ಬಂದರೂ ಅದು ಅನಿವಾರ್ಯ ಎನ್ನುವ ಅಭಿಪ್ರಾಯ ಸಂಶೋಧಕರದ್ದು.

ಎಸ್ ಎಸ್ ಅಂಗಡಿ ಅವರು (2008) **'ಕರ್ನಾಟಕ ಬುಡಕಟ್ಟು ಭಾಷೆ'** ಎಂಬ ತಮ್ಮ ಅಧ್ಯಯನದಲ್ಲಿ (ಮಾನವಶಾಸ್ತ್ರ ಅಧ್ಯಯನ) ಗಿರಿಜನ ಸಮುದಾಯದ ಭಾಷಾ ಬಳಕೆಯನ್ನು ಕುರಿತು, ಮಾನವ ಶಾಸ್ತ್ರದ ತತ್ವಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವಿಮರ್ಶಿಸಿದ್ದಾರೆ. ಗಿರಿಜನರ ಭಾಷಾ ಬಳಕೆಯ ಸಾಮಾಜಿಕ ಆಯಾಮವನ್ನು ಅಧ್ಯಯನ ಮಾಡಿ ಆ ಸಮುದಾಯವನ್ನು ಪ್ರಧಾನ ಧಾರೆಗೆ ತರಬೇಕೆನ್ನುವುದು ಮತ್ತು ಭಾಷಾ ನೀತಿ ಮತ್ತು ಶಿಕ್ಷಣ ನೀತಿಗಳಲ್ಲಿ ಸಾಮ್ಯತೆ ಮತ್ತು ಸಾಮರಸ್ಯತೆ ಇರುವ ಭಾಷಾ ಯೋಜನೆಗಳನ್ನು ರೂಪಿಸಬೇಕೆನ್ನುವುದು ಸಂಶೋಧನಾಕಾರರ ನಿರೀಕ್ಷೆಯಾಗಿದೆ. ಬುಡಕಟ್ಟು ಸಮುದಾಯಗಳ ನೆಲೆಯನ್ನು ರೂಢಿ, ಸಂಪ್ರದಾಯಗಳನ್ನು ಮತ್ತು ಸಾಮಾಜಿಕ ನಡವಳಿಕೆಗಳನ್ನು ತಿಳಿದುಕೊಳ್ಳುವುದರಿಂದ ಮಾತ್ರವೇ ಕರ್ನಾಟಕ ಸಂಸ್ಕೃತಿಯ ಪುನಃರಚನೆ ಆಗುತ್ತದೆ. ಆದಿಮಾನವನು ಆಧುನಿಕ ಮಾನವನ ಮಟ್ಟವನ್ನು ಮುಟ್ಟಿದ ಇತಿಹಾಸ, ನಾಗರಿಕತೆಯ ಪಟ್ಟ ಹಾಗೂ ನಾಗರಿಕತೆ ವಿಕಾಸವಾದಂತೆ ಭಾಷೆಯ ಬೆಳವಣಿಗೆಯ ರೀತಿಯನ್ನು ಈ ಅಧ್ಯಯನದಲ್ಲಿ ಚಿತ್ರಿಸಲಾಗಿದೆ.

ಬುಡಕಟ್ಟು ಸಮುದಾಯದವರು ತಮ್ಮ ಸಾಮಾಜಿಕ ಸ್ವಾಸ್ಥ್ಯವನ್ನು ಕಂಡುಕೊಳ್ಳಲು ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದು ಅವುಗಳಲ್ಲಿ ಬಂಧುತ್ವ ಸೂಚಕಗಳು ಮಹತ್ವದ ಪಾತ್ರವಹಿಸುತ್ತವೆ. ಆದಿಮಾನವನು ಬದುಕಿನ ವಾಸ್ತವತೆಯನ್ನು ಎದುರಿಸಲು ಅಶಕ್ತನಾದಾಗ ತನಗಿಂತಲೂ ಅತೀತವಾದ ಶಕ್ತಿಗೆ ಮೊರೆಹೋಗುತ್ತಾನೆ. ಆಗ ಮಾಂತ್ರಿಕ ಮತ್ತು ಸಂಪ್ರದಾಯಗಳು ಬದುಕಿನ ಪುಟದಲ್ಲಿ ಒಂದಲ್ಲ ಒಂದು ರೀತಿ ಬಳಕೆಯಾಗುತ್ತದೆ. ಕರ್ನಾಟಕದ ಪ್ರಮುಖ ಜನಾಂಗಗಳಾದ ಕಾಡುಗೊಲ್ಲರು, ಕಾಡು ಕುರುಬರು, ಮ್ಯಾಸಬೇಡರು ಮತ್ತು ಹಾಲಕ್ಕಿ ಸಮುದಾಯಗಳ ಸಂಸ್ಕೃತಿ ಅಧ್ಯಯನದಲ್ಲಿ ಭಾಷೆ ಪ್ರಮುಖ ಪಾತ್ರವಹಿಸುತ್ತದೆ. ಈ ಬುಡಕಟ್ಟುಗಳ ಸಾಮಾಜಿಕ ಸ್ಥಿತಿ ಮತ್ತು ಸಾಂಸ್ಕೃತಿಕ ಪುರಾಣ, ಐತಿಹ್ಯ ಮುಂತಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅರಿತುಕೊಳ್ಳುವಲ್ಲಿ ಭಾಷೆ ನೆರವಾಗುತ್ತದೆ. ಭಾಷಾ ಸಮುದಾಯಗಳು ಭಾಷೆ ಮತ್ತು ಸ್ತರವಿನ್ಯಾಸ ಭಾಷೆಯ ಸಾಮಾಜಿಕ ಚಹರೆ ಮುಂತಾದವುಗಳ ಕುರಿತು ಅಧ್ಯಯನಕಾರರು ಮಾಹಿತಿ ನೀಡಿದ್ದಾರೆ.

ಒಟ್ಟಿನಲ್ಲಿ ಭಾಷೆ ಸ್ವಯಂಮಾನವ ವಿಕಾಸದ ಪ್ರತೀಕ. ಆದುದರಿಂದ ಅವೆರಡು ಒಂದರಿಂದ ಒಂದು ಪ್ರಯೋಜನ ಪಡೆಯುತ್ತವೆ. ಮಾನವ ಭಾಷಾ ಶಾಸ್ತ್ರವು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದು ಭಾಷಾ ಸಮುದಾಯವನ್ನು ಅರ್ಥಮಾಡಿಕೊಳ್ಳಲು ಹೇಗೆ ನೆರವಾಗಬಲ್ಲುದು ಎಂಬುದನ್ನು ಈ ಅಧ್ಯಯನದ ಮೂಲಕ ಮನದಟ್ಟು ಮಾಡಲಾಗಿದೆ.

ಕೆ ಬೈರಪ್ಪ ಅವರು **"ಭಾರತೀಯ ಆದಿವಾಸಿ ಸಮುದಾಯಗಳು"** (1994) ಎಂಬ ತಮ್ಮ ಅಧ್ಯಯನದಲ್ಲಿ ಬುಡಕಟ್ಟು ಸಮುದಾಯದ ಅರ್ಥ ಮತ್ತು ಮಹತ್ವ, ವ್ಯಾಖ್ಯಾನ, ಅಧ್ಯಯನದ ಅವಶ್ಯಕತೆ ಮತ್ತು ಕಲ್ಯಾಣ ಕಾರ್ಯಕ್ರಮಗಳ ಉದ್ದೇಶಕ್ಕಾಗಿ ವಿಂಗಡಿಸಲಾಗಿದೆ. ವಲಯಗಳು, ಭಾರತದಲ್ಲಿನ ಪ್ರಮುಖ ಆದಿವಾಸಿ ಬುಡಕಟ್ಟುಗಳು, ಆದಿನಾಸಿಗಳ ಲಕ್ಷಣಗಳು, ಆದಿವಾಸಿಗಳ ಕೌಟುಂಬಿಕ ಜೀವನ, ಧಾರ್ಮಿಕ ಜೀವನ ಮತ್ತು ಆರ್ಥಿಕ ಜೀವನದ ಕುರಿತು ಬೆಳಕು ಚೆಲ್ಲಿದ್ದಾರೆ.

ಸಂಶೋಧನಾಕಾರರು ಆ ಅಧ್ಯಯನದಲ್ಲಿ ಭಾರತದ ಪ್ರಮುಖ ಬುಡಕಟ್ಟುಗಳಾದ ತೋಡ ಮತ್ತು ಸಂತಾಲರ ಉದ್ಯೋಗ, ಆಹಾರ, ವಾಸಸ್ಥಾನ, ಉಡುಗೆ ತೊಡುಗೆಗಳು, ಸಾಮಾಜಿಕ ಸಂಘಟನೆ, ವಿವಾಹ ಪದ್ಧತಿ, ಶಾಸ್ತ್ರ ವಿಧಿಗಳು, ಅಂತ್ಯ ಸಂಸ್ಕಾರ, ರಕ್ತಸಂಬಂಧಿಗಳ ಕುರಿತಾದ ಭಾವನೆ, ಬಿಲ್ಲು ಬಾಣಗಳ ಮಹತ್ವ, ಪಂಚಾಯತಿ ವ್ಯವಸ್ಥೆ ಮತ್ತು ಧಾರ್ಮಿಕ ಜೀವನದ ಕುರಿತು ವಿಶ್ಲೇಷಿಸಿದ್ದಾರೆ. ಇದರೊಂದಿಗೆ ಅಧ್ಯಯನಕಾರರು ಆದಿವಾಸಿಗಳು ಎದುರಿಸುತ್ತಿರುವ ಮುಖ್ಯ ಸಮಸ್ಯೆಗಳ ಕುರಿತು ವಿವರಣೆ ನೀಡಿದ್ದಾರೆ.

ಆದಿವಾಸಿಗಳ ಕಲ್ಯಾಣ ಸಾಧಿಸಲು ಅನುಸರಿಸಬಹುದಾದ ಮಾರ್ಗೋಪಾಯಗಳ ಕುರಿತಂತೆ ಮೂರು ಮುಖ್ಯ ಅಭಿಪ್ರಾಯಗಳಾದ ಪ್ರತ್ಯೇಕವಾದ, (School of Segregation) ಸಮೀಕರಣವಾದ, (School of Association) ವಿಲೀನೀಕರಣದ (School of Integration) ಬಗ್ಗೆ ವಿವರಣೆಯೂ ಇದೆ. ಆದಿವಾಸಿಗಳ ಕಲ್ಯಾಣ ಕಾರ್ಯಕ್ರಮಗಳು ಮತ್ತು ಸಂವಿಧಾನಾತ್ಮಕ ಕ್ರಮಗಳ ಕುರಿತಂತೆಯೂ, ಅಧ್ಯಯನಕಾರರು ಗಮನಹರಿಸಿದ್ದಾರೆ.

ಒಟ್ಟಿನಲ್ಲಿ ಬುಡಕಟ್ಟು ಜನಾಂಗದ ಕುರಿತಂತೆ, ಪರಿಣಾಮಕಾರಿಯಾದ ಚಿತ್ರಣವೊಂದನ್ನು ನಮ್ಮದಾಗಿಸಿಕೊಳ್ಳುವಲ್ಲಿ ಈ ಅಧ್ಯಯನ ಬಹಳ ಸಹಕಾರಿಯಾಗುವುದರಲ್ಲಿ ಸಂದೇಹವಿಲ್ಲ.

ಗಂಗಾಧರ ದೈವಜ್ಞ ಅವರು **"ಬುಡಕಟ್ಟು ಸಮಾಜ – ಹುಟ್ಟು ಸಾವಿನ ನಡುವೆ"** ಎಂಬ (2000) ತಮ್ಮ ಅಧ್ಯಯನದಲ್ಲಿ ಕರ್ನಾಟಕದ ಹಸಲರು, ಕಾಡುಕುರುಬರು, ಜೇನುಕುರುಬರು, ಸೋಲಿಗರು, ಮ್ಯಾಸಬೇಡರು, ಗೌಳಿಗರು, ಕಾಡಗೊಲ್ಲರು, ಹಾಲಕ್ಕಿಗಳು ಮತ್ತು ಗೊಂಡರು ಮುಂತಾದ ಬುಡಕಟ್ಟುಗಳನ್ನು ಕೇಂದ್ರವಾಗಿಟ್ಟುಗೊಂಡು, ಹುಟ್ಟಿನ ಸಂದರ್ಭದಲ್ಲಿನ ಆಚರಣೆಗಳು, ಮದುವೆ ಸಂದರ್ಭದ ಆಚರಣೆಗಳು, ಸಾವಿನ ಸಂದರ್ಭದ ವಿಶಿಷ್ಟ ಆಚರಣೆಗಳು, ಸಾವಿನ ನಂತರ ದೆವ್ವ ಭೂತಗಳ ಪರಿಕಲ್ಪನೆಯ ಕುರಿತು ವಿಶ್ಲೇಷಿಸಿದ್ದಾರೆ.

ಆಧುನಿಕ ಸಮಾಜದ ಪ್ರಭಾವ ಪ್ರೇರಣೆಗಳು ಗಿರಿಜನ ಸಮುದಾಯದ ಆಚರಣೆಗಳಲ್ಲಿ ಯಾವ ರೀತಿ ಬದಲಾವಣೆ ತಂದಿವೆ, ನಾಗರಿಕ ಪ್ರಪಂಚದಿಂದ ದೂರವಿದ್ದು ತಮ್ಮದೇ ಜೀವನಕ್ರಮ ಅನುಸರಿಸಿಕೊಂಡು ವಿಶಿಷ್ಟ ಸಂಸ್ಕೃತಿ ಉಳಿಸಿಕೊಂಡು ಬಂದಿದ್ದ ಬುಡಕಟ್ಟು ಸಮುದಾಯಗಳ ಮೇಲೆ ಆಧುನಿಕ ಪರಿಸರದ ಗಾಳಿ ಬೀಸಿದ್ದರಿಂದ ನೂರಾರು, ಸಾವಿರಾರು ವರ್ಷಗಳಿಂದ ಬೇರು ಬಿಟ್ಟುಕೊಂಡಿದ್ದ ಅವರ ಸಂಸ್ಕೃತಿ ವಿಚಾರಗಳು ಸಡಿಲಗೊಳ್ಳುತ್ತಿವೆ. ಹಾಗೂ ಬುಡಕಟ್ಟು ಜನರ ಆಚಾರವಿಚಾರ, ನಡೆ ನುಡಿ, ಸಂಸ್ಕಾರಗಳಲ್ಲಿ ಬದಲಾವಣೆಗಳಾಗಿವೆ.

ಸರಕಾರಿ ಯೋಜನೆಗಳಿಂದಾಗಿ, ಶಿಕ್ಷಣ ವ್ಯವಸ್ಥೆಯಿಂದ ಬುಡಕಟ್ಟುಗಳು ಹೊಸ ಬಗೆಯ ಎಚ್ಚರಿಕೆ ಪಡೆದುಕೊಂಡಿವೆ. ಶಿಕ್ಷಣಕ್ಕೆ ರೂಪಾಂತರಗೊಳ್ಳುವುದರಿಂದ ತನ್ನ ಸಂಸ್ಕೃತಿಯಿಂದ ದೂರ ಸರಿಯುವ ಸಾಧ್ಯತೆಗಳು ಇದ್ದು, ಅವನ್ನು ಸಕಾರಾತ್ಮಕವಾಗಿ ಪರಿಶೀಲಿಸಬೇಕಾಗುತ್ತದೆ. ಶಿಕ್ಷಣ, ಬೋಧನಾ ವ್ಯವಸ್ಥೆಯಲ್ಲಿ ಬದಲಾವಣೆಯಾಗಬೇಕೆ? ಸ್ವತಂತ್ರವಾಗಿ ಬದುಕು ಕಂಡುಕೊಳ್ಳುವ ವೃತ್ತಿಪರ ಶಿಕ್ಷಣ ಅಳವಡಿಸಬೇಕೆ? ಎಂದು ಆಲೋಚಿಸಬೇಕಾಗಿದೆ ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಸಿ.ಪಾರ್ವತಮ್ಮ ಅವರು (2007) **"ಆದಿವಾಸಿ ಸಮುದಾಯಗಳ ಅಭಿವೃದ್ಧಿ"** ಎಂಬ ತಮ್ಮ ಅಧ್ಯಯನದಲ್ಲಿ ಕರ್ನಾಟಕ ಮತ್ತು ಮೈಸೂರು ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಗಳು ಯಾವ ರೀತಿ ಬುಡಕಟ್ಟು ಸಮುದಾಯ ಅಭಿವೃದ್ಧಿಯಲ್ಲಿ ತೊಡಗಿವೆ ಎನ್ನುವ

ವಿಚಾರವನ್ನು ಮಂಡಿಸಿದ್ದಾರೆ. ಈ ಅಧ್ಯಯನದಲ್ಲಿ ವಿಶೇಷವಾಗಿ ಮೈಸೂರು ಜಿಲ್ಲೆಯ ಬಿಳಿಗಿರಿ ರಂಗನ ಬೆಟ್ಟದಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ (ವಿ.ಜಿ.ಕೆ.ಕೆ) ಬೇಗೂರ ವಲಯದ ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್(ಎಸ್.ವಿ.ವೈ.ಎಂ) ಹಾಗೂ ಹುಣಸೂರು ತಾಲೂಕಿನ ಡೀಡ್(ಡೆವಲಪ್‌ಮೆಂಟ್ ಥ್ರೂ ಎಜುಕೇಶನ್) ಸಂಸ್ಥೆಗಳ ಕಾರ್ಯ ವೈಖರಿಯನ್ನು ಬಣ್ಣಿಸಿದ್ದಾರೆ. ಸಂಬಂಧಿಸಿದಂತೆ ಫಲಾನುಭವಿಗಳು ಸರಕಾರಿ ಅಧಿಕಾರಿಗಳು ಮತ್ತು ಸುತ್ತ ಮುತ್ತಲ ಬುಡಕಟ್ಟುಗಳಲ್ಲದ ಗ್ರಾಮಸ್ಥರ ಅಭಿಪ್ರಾಯಗಳನ್ನು ಸಂಗ್ರಹಿಸಿ ಈ ಮೂರು ಸಂಸ್ಥೆಗಳ ಕುರಿತಾದ ಅಭಿಪ್ರಾಯಗಳನ್ನು ಅಧ್ಯಯನಕಾರರು ಸ್ಪಷ್ಟೀಕರಿಸಿದ್ದಾರೆ.

ಇದರೊಂದಿಗೆ ಈ ಅಧ್ಯಯನದಲ್ಲಿ ಸರ್ಕಾರವು ಆರಂಭಿಸಿರುವ ಯೋಜನೆಗಳ ಕುರಿತು ಬುಡಕಟ್ಟು ಜನರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಗಮನಿಸಬಹುದು.

ಸರ್ಕಾರೇತರ ಸಂಘ-ಸಂಸ್ಥೆಗಳು ಹಾಗೂ ಸರ್ಕಾರದ ಯೋಜನೆಗಳ ಬಗ್ಗೆ ಈ ಬುಡಕಟ್ಟು ಜನರಿಗೆ ಅರ್ಥ ಮಾಡಿಸುವಲ್ಲಿಯೂ ವಿಶೇಷ ಪಾತ್ರ ವಹಿಸಿವೆ ಎಂದೂ ಅಧ್ಯಯನ ಸಾಬೀತುಪಡಿಸುತ್ತದೆ.

ಬುಡಕಟ್ಟು ಜನರು ಅರಣ್ಯ ಇಲಾಖೆಯ ಕಾನೂನಿನ ಕುರಿತಾಗಿಯೂ ಬಹಳ ನಿಷ್ಠುರವಾಗಿದ್ದು, ಸರ್ಕಾರಿ ಕಾನೂನುಗಳು ಬುಡಕಟ್ಟು ಜನರನ್ನು ಒಕ್ಕಲೆಬ್ಬಿಸಿದ್ದು ಅವರ ಜೀವನ ನಿರ್ವಹಣೆ ಬೇಕಾಗುವ ಯಾವ ವ್ಯವಸ್ಥೆಯನ್ನೂ ಮಾಡಿಲ್ಲ. ಅಲ್ಲದೆ ಅರಣ್ಯ ಇಲಾಖೆಯಿಂದ ತಮಗೆಲ್ಲ ಬಹಳ ಚಿತ್ರಹಿಂಸೆಯಾಗಿದೆ, ಎಂದು ಬುಡಕಟ್ಟು ಜನರು ನೋವು ವ್ಯಕ್ತಪಡಿಸಿರುವುದನ್ನು ಈ ಅಧ್ಯಯನದಲ್ಲಿ ಕಾಣಬಹುದಾಗಿದೆ.

ಬುಡಕಟ್ಟು ಜನರ ಸ್ಥಿತಿ, ಮೀಸಲಾತಿ ನೀತಿ, ರಾಜಕೀಯ ಇಚ್ಛಾ ಶಕ್ತಿಯ ಕೊರತೆ ಹೆಚ್ಚಿನ ಸಂಖ್ಯೆಯಲ್ಲಿ ಬುಡಕಟ್ಟು ಜನರಲ್ಲದವರು ಬುಡಕಟ್ಟು ಜನರ ಗುಂಪಿಗೆ ಸೇರ್ಪಡೆಯಾಗಿದ್ದು ಮೀಸಲಾತಿ ಸೌಲಭ್ಯವನ್ನು ಪಡೆಯಲು ಬುಡಕಟ್ಟುಗಳಲ್ಲದ ಜನರು ಬುಡಕಟ್ಟು ಪಟ್ಟಿಗೆ ಸೇರಿಕೊಳ್ಳಲು ನಾನಾ ತರಹದ ಒತ್ತಡ ಹೇರುವುದು ಹಾಗೂ ಇದರಿಂದ ನಿಜವಾಗಿ ಬುಡಕಟ್ಟು ಜನಾಂಗಕ್ಕೆ ಸೇರಿದವರಿಗೆ ತೊಂದರೆಯಾಗುತ್ತದೆ, ಎನ್ನುವ ವಿಚಾರವನ್ನು ಅಧ್ಯಯನ ಒಳಗೊಂಡಿದೆ.

ದೇಶದಲ್ಲಿ ಅನೇಕ ಸರ್ಕಾರೇತರ ಸಂಘ ಸಂಸ್ಥೆಗಳು ಅಲ್ಲಲ್ಲಿ ತಲೆಯೆತ್ತುತ್ತಿವೆ. ಬುಡಕಟ್ಟು ಕಲ್ಯಾಣದ ಹೆಸರಲ್ಲಿ ಹಣ ದುರುಪಯೋಗವಾಗುತ್ತಿದೆ. ಅನೇಕ ಕಡೆ ಒಂದೇ

ಪ್ರದೇಶದಲ್ಲಿ ಅನೇಕ ಸ್ವಯಂ ಸೇವಾ ಸಂಸ್ಥೆಗಳಿವೆ. ಇದರಿಂದ ಲಭ್ಯವಿರುವ ಕಡಿಮೆ ಸಂಪನ್ಮೂಲ ದುರುಪಯೋಗವಾಗುತ್ತದೆ. ಎನ್ನುವ ವಿಚಾರವನ್ನು ಈ ಅಧ್ಯಯನದಲ್ಲಿ ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಸರ್ಕಾರೇತರ ಸಂಘ ಸಂಸ್ಥೆಗಳನ್ನು ತಪಾಸಣೆಗೆ ಒಳಪಡಿಸಬೇಕು, ಪರಿಣಾಮಕಾರಿಯಾದ ಸರ್ಕಾರೇತರ ಸಂಘ, ಸಂಸ್ಥೆಗಳನ್ನು ಗುರುತಿಸಿ ಗೌರವಿಸಬೇಕು. ಎನ್ನುವ ಅಂಶವನ್ನು ಈ ಅಧ್ಯಯನದಲ್ಲಿ ಕಾಣಬಹುದಾಗಿದೆ.

ಕೆ.ಎಸ್.ಲಾಲ್ ಅವರ **"ಮಧ್ಯಯುಗೀನ ಭಾರತದಲ್ಲಿ ಪರಿಶಿಷ್ಟ ವರ್ಗ, ಜಾತಿಗಳ ವೃದ್ಧಿ"** (ಕನ್ನಡಾನುವಾದ ವಸಂತನಾಯಕ್ ಪಲಿಮಾರ್ಖರ್) (2012) ಎಂಬ ತಮ್ಮ ಅಧ್ಯಯನದಲ್ಲಿ ಅನೇಕ ಹಿಂದುಳಿದ ವರ್ಗಗಳು ಇತಿಹಾಸ ಪೂರ್ವ ಅಥವಾ ಅತಿ ಪ್ರಾಚೀನ ಕಾಲದಿಂದಲೂ ಇದ್ದವರು. ಮಧ್ಯಯುಗದ ಅವಧಿಯ ಸುಮಾರು ಒಂದು ಸಾವಿರ ವರ್ಷಗಳಲ್ಲಿ ಅನೇಕರು ಈ ವರ್ಗಗಳಿಗೆ ಸೇರ್ಪಡೆ ಆಗಿದ್ದು ಮೇಲ್ವರ್ಗದ ಶೋಷಣೆ ಏನಿದ್ದರೂ ಇತ್ತೀಚಿನ ಕಾಲದಲ್ಲಿ ಆರಂಭವಾಗಿದ್ದು ಕಷ್ಟಕ್ಕೆ ಸಿಲುಕಿದ್ದ ಕೆಳಜಾತಿಯವರಿಗೆ ಮೇಲ್ವರ್ಗದ ಜನರು ಪೂರ್ಣ ರಕ್ಷಣೆ ನೀಡಿದ್ದರು. ಮತ್ತು ಕೆಳಜಾತಿಯವರು ಸ್ವಾತಂತ್ರ್ಯದ ರಕ್ಷಣೆಗಾಗಿ ಮೇಲ್ಜಾತಿಯ ಕ್ಷತ್ರಿಯರೊಂದಿಗೆ ಕೂಡಿ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿದರು ಎನ್ನುವ ಉಲ್ಲೇಖ ಈ ಅಧ್ಯಯನದಲ್ಲಿದೆ.

ಮಧ್ಯಕಾಲೀನ ಅವಧಿಯಲ್ಲಿ ಶತಮಾನಗಳ ಕಾಲದ ದೌರ್ಜನ್ಯ ಸಂಘರ್ಷದ ನಡುವೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ದೀರ್ಘಕಾಲ ಕಾಡು ಹಳ್ಳಿಗಳಲ್ಲಿ ಕಟ್ಟಿಕೊಂಡ ಎಲೆಮನೆಗಳಲ್ಲಿ ಕಾಡುಪ್ರಾಣಿಗಳಂತೆಯೇ ವಿಂಗಡನೆಗೊಂಡು ಪ್ರತ್ಯೇಕವಾಗಿ ಜೀವನ ನಡೆಸಿದರು. ಕಾಡಿನ ವಾಸ್ತವ್ಯದಲ್ಲೇ ಈ ಜನರು ತಮ್ಮದೇ ಆದ ಜೀವನದ ಕಾನೂನು ಹಾಗೂ ತಮ್ಮದೇ ಆದ ಆಚಾರ ವಿಚಾರಗಳನ್ನು ರೂಪಿಸಿಕೊಂಡವರು ಎಂದ ಲೇಖಕರು ಮಧ್ಯಯುಗದ ಭಾರತದಲ್ಲಿ ಮುಸ್ಲಿಂ ಆಕ್ರಮಣದ ವಿರುದ್ಧ ಭಾರತೀಯ ಬುಡಕಟ್ಟುಗಳ ಸಂಘರ್ಷ ಕೆಳಜಾತಿಯ ಜನರಿಂದಾದ ನೇರ ಸಂಘರ್ಷ ಹಾಗೂ ಒಟ್ಟಾರೆಯಾಗಿ ಹಿಂದುಳಿದ ಜಾತಿಗಳಿಂದ ಹಿಂದೂ ಸಮಾಜಕ್ಕೆ ಯಾವ ರೀತಿಯ ಕೊಡುಗೆ ಸಂದಿದೆ ಎನ್ನುವುದನ್ನು ಈ ಅಧ್ಯಯನದಲ್ಲಿ ವರ್ಣಿಸಿದ್ದಾರೆ.

ಮಧ್ಯಕಾಲೀನ ಇತಿಹಾಸದಲ್ಲಿ ಸತತ ಆಕ್ರಮಣಗಳ ಹೊರತಾಗಿಯೂ ಇಸ್ಲಾಮಿ ದೇಶವಾಗದೆ ಉಳಿದ ನಾಡೆಂದರೆ ಅದು ಭಾರತ ಮಾತ್ರ. ಸಮಾಜದ ಎಲ್ಲಾ ವರ್ಗಗಳ

ಉನ್ನತ ಹಾಗೂ ಕೆಳಸ್ತರದ ಜಾತಿಗಳು, ಪರಿಶಿಷ್ಟರು, ಹಿಂದುಳಿದವರು, ಸವರ್ಣರು, ದಲಿತರು ಹೀಗೆ ದೇಶದ ಎಲ್ಲ ಪಂಗಡಗಳ ಜನರು ಮಾಡಿದ ತ್ಯಾಗದಿಂದ ಇದು ಸಾಧ್ಯವಾಯಿತೆನ್ನುವ ಅಂಶವನ್ನು ಈ ಅಧ್ಯಯನದಿಂದ ತಿಳಿಯಬಹುದು. ಒಟ್ಟಿನಲ್ಲಿ ಮಧ್ಯಕಾಲೀನ ಯುಗದಲ್ಲಿ ಮುಸಲ್ಮಾನ ಸೇನೆಯ ಆಕ್ರಮಣದ ವಿರುದ್ಧ (ಮೊಗಲರು) ಬುಡಕಟ್ಟು ಸಮುದಾಯವು 18ನೇ ಶತಮಾನದವರೆಗೂ ಹೋರಾಟ ನಡೆಸಿದವು. ಎನ್ನುವುದನ್ನು ಗಮನಿಸಬಹುದಾಗಿದೆ.

"ಗಿರಿಜನ ಸಂಸ್ಕೃತಿ" ಎಂಬ ಗ್ರಂಥದಲ್ಲಿ ತೀ.ನಂ ಶಂಕರನಾರಾಯಣ ಅವರು (2000) **"ಬುಡಕಟ್ಟುಗಳ ಲಕ್ಷಣ ಮತ್ತು ಸ್ವರೂಪ"** ಎಂಬ ಲೇಖನದಲ್ಲಿ ಬುಡಕಟ್ಟು ಎಂಬ ಪದವನ್ನು ವಿಶ್ಲೇಷಿಸಿದ್ದಾರೆ. ಬುಡಕಟ್ಟು ಯಾವ ಸಂದರ್ಭಗಳಲ್ಲಿ ತನ್ನ ಮೂಲ ಸ್ವರೂಪವನ್ನು ಮತ್ತು ಸ್ವಾತಂತ್ರ್ಯವನ್ನು ಕಳೆದುಕೊಂಡು ಜಾತಿಯಾಗಿ ಪರಿವರ್ತಿತವಾಗುತ್ತದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟುಗಳ ಅಧ್ಯಯನ ಕ್ರಮದ ಬಗ್ಗೆಯೂ ಪ್ರಸ್ತಾಪಿಸಿದ ಅಧ್ಯಯನಕಾರರು ಎರಡು ಉದ್ದೇಶಗಳಿಗಾಗಿ ಬುಡಕಟ್ಟುಗಳನ್ನು ಅಧ್ಯಯನ ಮಾಡಲಾಗುತ್ತಿದ್ದು ಒಂದು ಅವರ ಸಂಸ್ಕೃತಿಯನ್ನು ಅರಿಯಲು, ಇನ್ನೊಂದು ಮಾನವನ ಸಂಸ್ಕೃತಿಯ ಸ್ವರೂಪವನ್ನು ಅರಿತುಕೊಳ್ಳಲು ಅಧ್ಯಯನ ಮಾಡುವುದು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮಾನವ ವಿಜ್ಞಾನಿಗಳು ಆದಿವಾಸಿ ಬುಡಕಟ್ಟುಗಳ ಸಾಂಸ್ಕೃತಿಕ ಅಧ್ಯಯನ ಮಾಡುವ ಮೊದಲು ಮಾಡಬೇಕಾಗಿರುವ ಸಿದ್ಧತೆಗಳೇನು ಎಂದು ಅಧ್ಯಯನಕಾರರು ವಿವರಿಸುತ್ತ ಭಾರತದಲ್ಲಿ ವೇದಗಳ ಕಾಲದಿಂದಲೂ ಅಸ್ತಿತ್ವದಲ್ಲಿರುವ ಜಾತಿ ವ್ಯವಸ್ಥೆಯ ಜೊತೆ ಜೊತೆಗೆ ಯಾವ ಜಾತಿಗೂ ಸೇರದೆ ಇಲ್ಲದ್ದರಿಂದ, ಪ್ರತ್ಯೇಕವಾಗಿ ಕಾಡುಗಳಲ್ಲಿರುವ ಬುಡಕಟ್ಟು ಸಮುದಾಯಗಳು ಬಹು ಸಂಖ್ಯೆಯಲ್ಲಿದ್ದು ತಮ್ಮ ಸಂಸ್ಕೃತಿಯಿಂದ ಭಾರತದ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದೆ ಎಂದಿದ್ದಾರೆ. ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ಕಾಲದಿಂದ ಕಾಲಕ್ಕೆ ಬದಲಾಗಿದ್ದು ಮುಖ್ಯವಾಗಿ ಬ್ರಿಟಿಷರಿಂದಾಗಿ ಪರ್ವತ/ಅರಣ್ಯ ಪ್ರದೇಶಗಳು ಬುಡಕಟ್ಟುಗಳಿಂದ ತಪ್ಪಿ ಹೋಗಿ ಬುಡಕಟ್ಟುಗಳು ಇಂದು ಅತಂತ್ರ ಸ್ಥಿತಿಯಲ್ಲಿವೆ. ಭೂಮಿ ಮತ್ತು ಸಂಸ್ಕೃತಿಯನ್ನು ಕಳೆದುಕೊಂಡ ಬುಡಕಟ್ಟುಗಳ ಜೀವನ ಸ್ವಾತಂತ್ರ್ಯಾನಂತರ ಮಂದಗತಿಯಲ್ಲಿ ಬದಲಾಗುತ್ತಿದೆ ಎಂದು ಅಧ್ಯಯನಕಾರರು ಅಭಿಪ್ರಾಯಪಡುತ್ತಾರೆ.

ಒಟ್ಟಿನಲ್ಲಿ ಈ ಅಧ್ಯಯನವು ಬುಡಕಟ್ಟುಗಳ ಬದಲಾಗುತ್ತಿರುವ ಚಿತ್ರಣವನ್ನು ನೀಡುತ್ತದೆ.

"ಗಿರಿಜನ ಸಂಸ್ಕೃತಿ" ಎಂಬ ಗ್ರಂಥದಲ್ಲಿ ಅಂಬಳಿಕೆ ಹಿರಿಯಣ್ಣ ಅವರು (2000) **"ಬುಡಕಟ್ಟು ಸಮೂಹಗಳ ಬದಲಾಗುತ್ತಿರುವ ಆರ್ಥಿಕ ಜೀವನ"** ಎಂಬ ತಮ್ಮ ಲೇಖನದಲ್ಲಿ ಕೈಗಾರಿಕೀಕರಣ ಮತ್ತು ಆಧುನಿಕ ಶಿಕ್ಷಣಗಳಿಂದ ಶ್ರೇಣೀಕೃತ ಜಾತಿ ವ್ಯವಸ್ಥೆ ಮತ್ತು ವೃತ್ತಿರಚನೆಗಳ ನಡುವಿನ ಸಂಬಂಧ ನಶಿಸಿ, ಜಾತ್ಯಾತೀತ ಕಸುಬುಗಳು ಹುಟ್ಟಿದ್ದು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ನಡೆದ ಬದಲಾವಣೆಯು ಕ್ರಮೇಣ ಜಾತಿ ಸಮಾಜಗಳು ಮುಕ್ತ ವರ್ಗ ವ್ಯವಸ್ಥೆಗೆ ಪರಿವರ್ತನೆ ಹೊಂದಲು ಪ್ರೇರೇಪಣೆಯಾಯಿತು ಎಂದು ಪ್ರತಿಕ್ರಯಿಸಿದ್ದಾರೆ.

ವೃತ್ತಿ ಮತ್ತು ಜಾತಿ ಕಟ್ಟಿನಿಂದ ಕಳಚಿಕೊಳ್ಳುತ್ತಿರುವ ಬುಡಕಟ್ಟುಗಳು ಸಾಗುತ್ತಿರುವ ದಿಕ್ಕನ್ನು ಅಧ್ಯಯನಕಾರರು ಪ್ರಸ್ತಾಪಿಸುತ್ತ, ಇದರಿಂದಾಗಿ ಬುಡಕಟ್ಟು ಸಮೂಹದ ಆರ್ಥಿಕ ಜೀವನವೂ ಬದಲಾಗುತ್ತಿರುವುದನ್ನು ಸ್ಪಷ್ಟಪಡಿಸಿದ್ದಾರೆ. ಬುಡಕಟ್ಟು ಆರ್ಥಿಕ ಚಟುವಟಿಕೆಗಳು ಬಡತನದಿಂದ ಕೂಡಿವೆ ಎಂದ ಅಧ್ಯಯನಕಾರರು, ಕಾಡಿನಲ್ಲೇ ನೆಲೆಸುತ್ತ ಮೂಲಸ್ಥಾನದಿಂದ ಕದಲದೆ ಇರುವುದು, ಭೂಮಿಯ ಫಲವತ್ತತೆಗೆ ಅನುಗುಣವಾಗಿ ವ್ಯವಸಾಯದಲ್ಲಿ ತೊಡಗದೆ ಇರುವುದು, ಕಾಡಿನ ಸಂಪನ್ಮೂಲಗಳನ್ನು ಅತ್ಯಲ್ಪ ಬೆಲೆಗೆ ಮಾರುವುದು, ಕೃಷಿಕಾರ್ಮಿಕರಾಗಿ ಹೋದವರು ದುಶ್ಚಟಗಳಿಗೆ ಬಲಿಯಾಗಿ ಸಾಲದಲ್ಲಿ ಮುಳುಗುವುದು ಹಾಗೂ ಹೊಸ ಆರ್ಥಿಕ ಚಟುವಟಿಕೆಗಳಲ್ಲಿ ಆಸಕ್ತಿ ತೋರಿಸದೆ ಇರುವುದು ಇತ್ಯಾದಿಗಳಿಂದ ಬುಡಕಟ್ಟುಗಳ ಆರ್ಥಿಕ ಜೀವನ ಸುಧಾರಿಸಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಜನರ ಅಭಿವೃದ್ಧಿಗಾಗಿ ಅನೇಕ ಸಲಹೆಗಳನ್ನು ಕಾರ್ಯರೂಪಕ್ಕೆ ತರಬೇಕಾಗಿದೆ ಎಂದಿರುವ ಅಧ್ಯಯನಕಾರರು ಈ ಅಧ್ಯಯನದಲ್ಲಿ ಆಧುನೀಕರಣ ಮತ್ತು ಕೈಗಾರಿಕೀಕರಣದಿಂದಾಗಿ ಸ್ವಾಯುತ್ತತೆಯನ್ನು ಕಳಕೊಂಡ ಬುಡಕಟ್ಟು ಸಮುದಾಯದಲ್ಲಿ ಆರ್ಥಿಕವಾಗಿ ಬದಲಾವಣೆ ತರುವಲ್ಲಿ ಕಾಲಕ್ಕನುಗುಣವಾಗಿ ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದರ ಅಗತ್ಯವಿದೆ ಎಂದು ಅಭಿಪ್ರಾಯ ಮಂಡಿಸಿದ್ದಾರೆ.

ಶಾ ಮತ್ತು ಯತೀಂದ್ರ ಸಿಂಗ್ ಸೋಡಿಯಾ ಸಂಪಾದಕರಾಗಿರುವ **"ಟ್ರೈಬಲ್ ಇಶ್ಯೂಸ್ ಇನ್ ಇಂಡಿಯಾ"** (Tribal Issues in India) ಎಂಬ ಅಧ್ಯಯನದಲ್ಲಿ (2004) ಬುಡಕಟ್ಟು ಸಮುದಾಯದ ಆಸ್ತಿಯಾದ ಭೂಮಿಯನ್ನು ಅವರಿಂದ ಕಸಿದುಕೊಂಡು ಕಾಡಿನ ಹಕ್ಕನ್ನು ಅವರಿಂದ ಕಿತ್ತೊಗೆದು ಅವರನ್ನು ಅತಂತ್ರರನ್ನಾಗಿಸುವ ಹುನ್ನಾರ ಮೊದಲಿನಿಂದಲೂ ಅಂದರೆ ಬ್ರಿಟಿಷ್ ಕಾಲದಿಂದಲೂ ನಮ್ಮಲ್ಲಿರುವುದು ಎಂದು ಅಧ್ಯಯನಕಾರರು

ಪ್ರತಿಕ್ರಯಿಸಿದ್ದಾರೆ. ವಿಶೇಷವಾಗಿ, ಗುಜರಾತ್ ಮತ್ತು ಮಧ್ಯಪ್ರದೇಶದ ಬುಡಕಟ್ಟುಗಳ ಜೀವನಾಧಾರವಾಗಿದ್ದ ಭೂಮಿಯನ್ನು ಕಿತ್ತುಕೊಂಡಿದ್ದನ್ನು ತರ್ಕಿಸಿದ ಅಧ್ಯಯನಕಾರರು, 73ನೇ ಸಂವಿಧಾನದ ತಿದ್ದುಪಡಿ, ಬುಡಕಟ್ಟು ಜನಾಂಗಗಳಲ್ಲಿ ತಂದಿರುವ ಬದಲಾವಣೆಯನ್ನು ವಿವರಿಸುತ್ತಾ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಿನ್ನಡೆ, ಅದಕ್ಕೆ ಪರಿಹಾರೋಪಾಯಗಳ ಕುರಿತು ವಿವರಿಸಿದ್ದಾರೆ.

ಬದಲಾಗುತ್ತಿರುವ ಆರ್ಥಿಕ ಸನ್ನಿವೇಶ ಯಾವ ರೀತಿ ಸಮುದಾಯಗಳನ್ನು ಸಂಕಷ್ಟಕ್ಕೀಡುಮಾಡಿವೆ ಎನ್ನುವುದನ್ನು ಬಹಳ ಕಾಳಜಿಯಿಂದ ಅಧ್ಯಯನಕಾರರು ಇಲ್ಲಿ ವರ್ಣಿಸಿದ್ದಾರೆ. ಬೃಹತ್ ನೀರಾವರಿ ಇಲ್ಲಿನ ಬುಡಕಟ್ಟುಗಳನ್ನು ಕಷ್ಟಕ್ಕೀಡು ಮಾಡಿವೆಯಲ್ಲದೆ ಸ್ಥಳಾಂತರಗೊಳಸಿರುವುದು ಹಾಗೂ ಅಧಿಕಾರಿಗಳ, ಸಮಾಜದ ಮತ್ತು ಬುಡಕಟ್ಟುಗಳ ಒಟ್ಟು ಚರ್ಚೆಯು ಯಾವ ರೀತಿ ಅವರಿಗೆ ಪುನರ್ವಸತಿಯನ್ನು ಕಲ್ಪಿಸಿತು ಎಂದೂ ಈ ಅಧ್ಯಯನದಲ್ಲಿ ನಾವು ಗಮನಿಸಬಹುದಾಗಿದೆ.

ಒಟ್ಟಿನಲ್ಲಿ ಗಮನಿಸುವುದಾದರೆ ಆಧುನಿಕ ಪ್ರಪಂಚದ ಚಟುವಟಿಕೆಗಳು ಈ ಭೂಮಿಯ ಮೂಲನಿವಾಸಿಗಳನ್ನು ಅತಂತ್ರರನ್ನಾಗಿಸಿದ್ದ ಚಿತ್ರಣ ಈ ಅಧ್ಯಯನದಲ್ಲಿದೆ.

ವಿದ್ಯಾಭೂಷಣ್ ರಾಮ್ ಅವರು **"ಇನ್‌ಟ್ರೋಸ್‌ಪೆಕ್ಟಿವ್ ಟೈಮ್ ಫಾರ್ ಆದಿವಾಸಿ ಮೂವ್‌ಮೆಂಟ್ ಫಾರ್ ಅಟೋನಮಿ"** (Introspective Time for Adivasi Movement for Autonomy) (2012) ಎಂಬ ಲೇಖನದಲ್ಲಿ ಆದಿವಾಸಿಗಳ ಸಂಪತ್ತನ್ನು ನಾಚಿಕೆಯಿಲ್ಲದೆ ಕೊಳ್ಳೆ ಹೊಡೆಯಲಾಗಿದೆ. ಆಸೆಬುರುಕ ಮತ್ತು ದೊಡ್ಡ ಶ್ರೀಮಂತರು ತಮ್ಮ ಲಾಭಕ್ಕಾಗಿ ಆದಿವಾಸಿಗಳ ಪರಿಸರ ಭೂಮಿಯನ್ನು ಹಾಳುಗೆಡವಿದ್ದಾರೆ. ಉತ್ತರಖಂಡ, ಉತ್ತರಪ್ರದೇಶ ಮತ್ತು ಬಿಹಾರದ ಹಲವು ಆದಿವಾಸಿಗಳ ಸಮುದಾಯವಾದ ಬೋಕ್ಸಾ(Boxas) ಕೋಲ್ಸ್ (Kols) ಮತ್ತು ತೌರಾಸ್ (Thowras)ಗಳ ಅವಶ್ಯಕತೆಗಳನ್ನು ಪಾರ್ಲಿಮೆಂಟ್‌ಗಳಲ್ಲಾಗಲಿ, ರಾಜ್ಯದ ಅಸೆಂಬ್ಲಿಗಳಲ್ಲಾಗಲಿ (State Assembly) ಸರಿಯಾಗಿ ಮಂಡಿಸಿಲ್ಲ. ಹಾಗಾಗಿ ಆದಿವಾಸಿ ನೀತಿ ಸಂಹಿತೆಯಲ್ಲಿ (Tribal Policy) ನಿಜವಾದ ಬೇಡಿಕೆಗಳನ್ನು ಹಕ್ಕುಗಳನ್ನು ನಿರ್ಲಕ್ಷಿಸಲಾಗಿದೆ. ಪರಿಣಾಮವಾಗಿ ಆದಿವಾಸಿಗಳು ಅವರ ಭೂಮಿ ಮತ್ತು ಕಾಡಿನ ಸ್ವಚ್ಛಂದತೆಯನ್ನು ಕಳಕೊಂಡಿದ್ದಾರೆ. ಇದು ಅವರ ಒಟ್ಟು ಅಭಿವೃದ್ಧಿ, ಸಂಸ್ಕೃತಿ, ಉದ್ಯೋಗ, ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿದೆ.

2011ರ ಅಂಕಿ-ಅಂಶಗಳಲ್ಲಿ ಒಟ್ಟು 8.2% ಆದಿವಾಸಿಗಳು ಭಾರತದಲ್ಲಿದ್ದಾರೆ ಎಂದು ಗುರುತಿಸಲಾಗಿದೆ. ಇದರಲ್ಲಿ ಹೆಚ್ಚಿನವರು ಭೂಮಿರಹಿತರು ಹಾಗೂ ಲಿಂಗಾನುಪಾತ 2001ರ ಪ್ರಕಾರ 978 ಮತ್ತು ಸಾಕ್ಷರತಾ ಪ್ರಮಾಣ 47%. ತಮ್ಮ ಪರಿಸರ, ಭೂಮಿಯ ಆರಾಧಕರಾಗಿದ್ದ ಬುಡಕಟ್ಟುಗಳ ಭೂಮಿ ಈಗ ಕೈಗಾರಿಕೋದ್ಯಮಗಳ ಸ್ವತ್ತಾಗಿದೆ ಎಂದು ಅಧ್ಯಯನ ಬಿಂಬಿಸುತ್ತದೆ.

I.L.O (International Labour Organization) ಪ್ರಕಾರ 1947 ರಿಂದ 2001 ರವರೆಗೆ ವಿವಿಧ ಅಭಿವೃದ್ಧಿ ಯೋಜನೆಗಳಿಗೋಸ್ಕರ 55.16% ಆದಿವಾಸಿಗಳ ಸ್ಥಳಾಂತರವಾಗಿದೆ. ಇದರಲ್ಲಿ ಹೆಚ್ಚಿನವರಿಗೆ ಇನ್ನೂ ಪುನರ್ ವ್ಯವಸ್ಥೆಯಾಗಿಲ್ಲ (Rehabilitation) ಎಂದು ಅಧ್ಯಯನಕಾರರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಒಟ್ಟಿನಲ್ಲಿ ತಮ್ಮ ನೆಲ-ಪ್ರಕೃತಿಯನ್ನುಳಿಸಲು ಆದಿವಾಸಿಗಳಲ್ಲಿ ನಾಯಕತ್ವ ಬೆಳೆದು ಸರಕಾರದೊಂದಿಗೆ ಸೂಕ್ತ ಚರ್ಚೆ ನಡೆಸುವ ಅಗತ್ಯವಿದೆ ಎಂದು ಲೇಖಕರು ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಪ್ರಕಾಶ್‌ಚಂದ್ರ ಮೆಹ್ತಾ ಅವರು (2006) **"ಡೆವಲಪ್ ಮೆಂಟ್ ಆಫ್ ಇಂಡಿಯನ್ ಟ್ರೈಬ್ಸ್"** (Development of Indian Tribes) ಎಂಬ ತಮ್ಮ ಅಧ್ಯಯನದಲ್ಲಿ ಬುಡಕಟ್ಟು ಅಭಿವೃದ್ಧಿಯ ವಿವಿಧ ಆಯಾಮಗಳನ್ನು ವಿಶ್ಲೇಷಿಸಿದ್ದಾರೆ. ಬುಡಕಟ್ಟು ಸಮುದಾಯದ ಅಭಿವೃದ್ಧಿ ಎಂದರೆ ಅಥವಾ ಆದಿವಾಸಿಗಳ ಅಭಿವೃದ್ಧಿಯ ಮೂಲ ಉದ್ದೇಶವೆಂದರೆ ಉತ್ತಮ ಜೀವನಕ್ಕಾಗಿ ಅವಕಾಶಗಳನ್ನು ಹೆಚ್ಚಿಸುವುದು ಎಂದಿದ್ದಾರೆ. ಇದರೊಂದಿಗೆ ಬುಡಕಟ್ಟು ಅಭಿವೃದ್ಧಿಗೆ ನೈಸರ್ಗಿಕ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಉಪಯೋಗದ ಮಹತ್ವವನ್ನು ಗುರುತಿಸಿದ್ದಾರೆ. ಸಂಪತ್ತು ಮತ್ತು ಆದಾಯದ ಸಮಾನ ಹಂಚಿಕೆ, ಮಾನವ ಶಕ್ತಿಯ ಬಳಕೆ ಹಾಗೂ ಮಾನವ ಪರಿಸರದ ಸಂರಕ್ಷಣೆಯೂ ಒಟ್ಟು ಅಭಿವೃದ್ಧಿಯಲ್ಲಿ ಅಡಕವಾಗಿದೆ. ಬುಡಕಟ್ಟುಗಳ ಸಮಗ್ರ ಅಭಿವೃದ್ಧಿ ಎಂದರೆ, ಬದಲಾವಣೆಯೊಂದಿಗೆ ಬೆಳವಣಿಗೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಇದರೊಂದಿಗೆ ಅಧ್ಯಯನಕಾರರು ನೆಹರು ಚಿಂತನೆಯನ್ನು ಪ್ರಸ್ತುತ ಪಡಿಸುತ್ತ ಆದಿವಾಸಿ ಅಭಿವೃದ್ಧಿಯಲ್ಲಿ ಯಾವುದೇ ರೀತಿಯ ಒತ್ತಡ ಹೇರಬಾರದು ಎಂದು ಪ್ರತಿಕ್ರಿಯಿಸಿದ್ದಾರೆ. ಆದಿವಾಸಿ ಸಂಸ್ಕೃತಿಯನ್ನು ಗೌರವಿಸುವುದು, ಆದಿವಾಸಿ ಯುವಕರಲ್ಲಿ

ನಾಯಕತ್ವ ಬೆಳೆಸುವುದು ಮತ್ತು ಆದಿವಾಸಿ ಅಭಿವೃದ್ಧಿಯಲ್ಲಿ ಸ್ಥಳೀಯ ಆಡಳಿತದ ಮಹತ್ವಗಳನ್ನು ಅಧ್ಯಯನಕಾರರು ಪ್ರಸ್ತುತಪಡಿಸಿದ್ದಾರೆ.

ಆದಿವಾಸಿ ಕಲ್ಯಾಣಕ್ಕಿರುವ ವಿವಿಧ ನಿಲುವುಗಳಾದ ರಾಜಕೀಯ, ಆಡಳಿತಾತ್ಮಕ, ಧಾರ್ಮಿಕ, ಸರ್ಕಾರೇತರ ಸಂಘ ಸಂಸ್ಥೆಗಳ ಮತ್ತು ಮಾನವ ಶಾಸ್ತ್ರೀಯ ವಿಶ್ಲೇಷಣೆಯನ್ನು ಈ ಅಧ್ಯಯನದಲ್ಲಿ ಗಮನಿಸಬಹುದು.

ಬುಡಕಟ್ಟು ಸಮುದಾಯದ ವಿವಿಧ ಯೋಜನೆ ಬುಡಕಟ್ಟು ಪ್ರದೇಶವೆಂದು ಗುರುತಿಸಲು ಇರುವ ಮಾನದಂಡ ಹಾಗೂ ಹಣಕಾಸಿನ ಹಂಚುವಿಕೆಯ ಕುರಿತಾದ ವಿಶ್ಲೇಷಣೆಯೂ ಈ ಅಧ್ಯಯನದಲ್ಲಿದೆ.

ಒಟ್ಟಿನಲ್ಲಿ ಬುಡಕಟ್ಟು ಸಮುದಾಯದ ಅಭಿವೃದ್ಧಿಗೆ ಈವರೆಗೆ ಭಾರತ ಸರ್ಕಾರ ಕೈಗೊಂಡ ವಿವಿಧ ಯೋಜನೆಗಳು, ಸದ್ಯದ ಬುಡಕಟ್ಟು ಸಮುದಾಯದ ಪರಿಸ್ಥಿತಿ ಮತ್ತು ಮುಂದಿನ ಯೋಜನೆಗಳ ಕುರಿತು ವಿಸ್ತಾರವಾದ ಮಾಹಿತಿ ಈ ಅಧ್ಯಯನದಲ್ಲಿದೆ.

ಪ್ರಕಾಶ್‌ಚಂದ್ರ ಮೆಹ್ತಾ ಅವರು (2004) **"Ethnographic Atlas of Indian Tribes"** (ಎತ್ನೋಗ್ರಫಿಕ್ ಅಟ್ಲಾಸ್ ಆಫ್ ಇಂಡಿಯನ್ ಟ್ರೈಬ್ಸ್) ಎಂಬ ಸಂಪಾದಕೀಯ ಗ್ರಂಥದಲ್ಲಿ ಭಾರತದ ಆದಿವಾಸಿಗಳ ಭೌಗೋಳಿಕ ಹಂಚಿಕೆ, ಒಟ್ಟು ಜನಸಂಖ್ಯೆ, ಬುಡಕಟ್ಟು ಪದದ ವಿವಿಧ ವ್ಯಾಖ್ಯಾನಗಳು ಹಾಗೂ ಅವುಗಳ ವಿಶ್ಲೇಷಣೆ, ಆದಿವಾಸಿ ಪದದ ಅರ್ಥ ಇವುಗಳ ಕುರಿತಾದ ಮಾಹಿತಿ ಲಭ್ಯವಿದೆ.

ಅಧ್ಯಯನಕಾರರು ಬುಡಕಟ್ಟು ಅಭಿವೃದ್ಧಿ ಪರಿಕಲ್ಪನೆಯನ್ನು ಕುರಿತು ಇಲ್ಲಿ ವಿಶ್ಲೇಷಿಸಿದ್ದಾರೆ. ಭಾರತೀಯ ಕಾರ್ಮಿಕ ಸಂಘಟನೆ (Indian Labour Organization) ಪ್ರಕಾರ ಅಭಿವೃದ್ಧಿ ಎನ್ನುವುದು "ಬುಡಕಟ್ಟು ಜನರ ಜೀವನ ಮಟ್ಟದಲ್ಲಿ ಆಗುವ ಗುಣಮಟ್ಟದ ಬದಲಾವಣೆ, ಹಾಗೂ ಸಮಾಜದ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ನಿರ್ಧಾರ ತೆಗೆದುಕೊಳ್ಳುವುದೇ ನಿಜವಾದ ಅಭಿವೃದ್ಧಿ" ಎಂದಿರುವುದನ್ನು ಅಧ್ಯಯನಕಾರರು ವಿಶ್ಲೇಷಿಸಿ ಅಭಿವೃದ್ಧಿಯ ಮುಖ್ಯ ಧ್ಯೇಯಗಳೆಂದರೆ ಆದಾಯ ಮತ್ತು ಸಂಪತ್ತಿನ ಸಮಾನ ಹಂಚಿಕೆ, ನೈಸರ್ಗಿಕ ಸಂಪನ್ಮೂಲಗಳ ಸರಿಯಾದ ಬಳಕೆ ಮತ್ತು ಮಾನವ ಪರಿಸರ ಸಂರಕ್ಷಣೆ ಎಂದಿದ್ದಾರೆ.

ಬುಡಕಟ್ಟು ಆರ್ಥಿಕತೆಯನ್ನು ಅಧ್ಯಯನಕಾರರು ವಿವರಿಸುತ್ತ ಬುಡಕಟ್ಟು ಸಮುದಾಯಕ್ಕೆ ಮತ್ತು ಅರಣ್ಯಕ್ಕೆ ಬಹಳ ಹತ್ತಿರದ ಸಂಬಂಧಗಳಿವೆ. ಇವೆರಡನ್ನು ಬೇರೆ ಬೇರೆಯಾಗಿ ಪರಿಗಣಿಸಲು ಕಷ್ಟ ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಜನರ ಅಭಿವೃದ್ಧಿಯಲ್ಲಿ ಹೊರಗಿನ ಸಮಾಜದ ಪಾತ್ರ ಅಗತ್ಯವಿಲ್ಲ. ಅಭಿವೃದ್ಧಿಗಾಗಿ ಅವರ ಮೇಲೆ ಒತ್ತಡ ಹೇರುವುದು ಸರಿಯಲ್ಲ. ಬುಡಕಟ್ಟು ಜನರ ಭೂಒಡೆತನ ಮತ್ತು ಕಾಡಿನ ಹಕ್ಕನ್ನು ಗೌರವಿಸಬೇಕು. ಬುಡಕಟ್ಟು ಜನರ ಅಭಿವೃದ್ಧಿಗಾಗಿ ಅವರದ್ದೇ ಸಮುದಾಯದ ಗುಂಪಿಗೆ ತರಬೇತಿ ನೀಡಿ ಸಿದ್ಧಗೊಳಿಸಬೇಕು. ತಾಂತ್ರಿಕ ಸಹಕಾರಕ್ಕಾಗಿ ಮಾತ್ರ ಹೊರಗಿನಿಂದ ಸಲಹೆಗಳನ್ನು ತೆಗೆದುಕೊಳ್ಳಬಹುದು. ಹೆಚ್ಚಿನ ಸಂಖ್ಯೆಯ ಯೋಜನೆಗಳನ್ನು ಬುಡಕಟ್ಟು ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಬಾರದು ಹಾಗೂ ಯೋಜನೆಗಳ ಸಂಖ್ಯೆಯಿಂದ ಮೌಲ್ಯಮಾಪನ ಮಾಡುವ ಬದಲು ಗುಣಮಟ್ಟದ ಜೀವನದಿಂದ ಅಳೆಯಬೇಕು ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಅಭಿವೃದ್ಧಿಗೆ ವಿವಿಧ ಆಯಾಮಗಳ ಕುರಿತಂತೆ ಪ್ರತಿಕ್ರಯಿಸಿದ ಅಧ್ಯಯನಕಾರರು ಬುಡಕಟ್ಟು ಪ್ರದೇಶಗಳಲ್ಲಿ ಯೋಜನೆಗಳನ್ನು ಯಾವ ರೀತಿ ರೂಪಿಸಬೇಕೆಂದು ಸಲಹೆಗಳನ್ನು ನೀಡಿದ್ದಾರೆ.

ಅಧ್ಯಯನಕಾರರು ಬುಡಕಟ್ಟು ಅಭಿವೃದ್ಧಿಯ ಬಗ್ಗೆ ವಿಶ್ಲೇಷಣೆ ಮಾಡಿ ಪರಿಣಾಮಕಾರಿಯಾದ ಸಲಹೆಗಳನ್ನು ನೀಡಿರುವುದರಿಂದ "ಬುಡಕಟ್ಟು ಅಭಿವೃದ್ಧಿ ಎಂದರೆ ಕೇವಲ ಆರ್ಥಿಕಾಭಿವೃದ್ಧಿಯಲ್ಲ ಜೀವನದ ಗುಣಮಟ್ಟದಲ್ಲಾಗುವ ಒಟ್ಟು ಬದಲಾವಣೆ" ಎನ್ನುವ ಅಂಶವನ್ನು ಈ ಅಧ್ಯಯನದ ಮೂಲಕ ತಿಳಿಯಬಹುದಾಗಿದೆ.

ಜಿ.ಆನಂದ ಅವರು (2000) **"Education of Tribals An Ashram School Approach"** (ಎಜುಕೇಶನ್ ಆಫ್ ಟ್ರೈಬಲ್ಸ್ ಆ್ಯನ್ ಆಶ್ರಮ್ ಸ್ಕೂಲ್ ಅಪ್ರೋಚ್) ಎಂಬ ತಮ್ಮ ಅಧ್ಯಯನದಲ್ಲಿ ಆಂದ್ರಪ್ರದೇಶದ ಚೆಂಚು ಮತ್ತು ಸುಗಾಲೀಸ್ (Sugalis) ಬುಡಕಟ್ಟು ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಅಲ್ಲಿರುವ ಆಶ್ರಮ ಶಾಲೆಗಳ ಸ್ಥಿತಿ-ಗತಿಗಳನ್ನು ಅಧ್ಯಯನ ಮಾಡಿದ ಆಧಾರದಲ್ಲಿ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಇದಕ್ಕಾಗಿ ಅಧ್ಯಯನಕಾರರು ಎರಡು ಗುಂಪಿನ ವಿದ್ಯಾರ್ಥಿಗಳನ್ನು ಮಾತ್ರವಲ್ಲದೆ, ಅವರ ಹೆತ್ತವರನ್ನು, ಶಿಕ್ಷಕರನ್ನು, ಮುಖ್ಯ ಶಿಕ್ಷಕರು ಹಾಗೂ ಆಶ್ರಮ ಶಾಲೆಯ ನಿಲಯ ಪಾಲಕರನ್ನು ಸಂದರ್ಶಿಸಿದ ಆಧಾರದ ಮೇಲೆ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿರುತ್ತಾರೆ.

ಬುಡಕಟ್ಟು ಶಿಕ್ಷಣದ ಬಗ್ಗೆ ವಿವರಿಸಿದ ಅಧ್ಯಯನಕಾರರು ಶಿಕ್ಷಣದಲ್ಲಿ ಆಶ್ರಮಶಾಲೆಗಳ ಪಾತ್ರವನ್ನು ವಿವರಿಸಿದ್ದಾರೆ. ಜೊತೆಗೆ ಆಂಧ್ರಪ್ರದೇಶದ ಮುಖ್ಯವಾದ ಬುಡಕಟ್ಟುಗಳಾದ ಚೆಂಚುಗಳು ಮತ್ತು ಸುಗಾಲಿಸ್‌ಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಜೀವನ ಹಾಗೂ ಕುಟುಂಬ ಹಾಗೂ ಸಮಾಜದಲ್ಲಿ ಚೆಂಚು ಮತ್ತು ಸುಗಾಲಿಗಳ ಸ್ಥಿತಿ ಗತಿಯ ಕುರಿತು ಬೆಳಕು ಚೆಲ್ಲಿದ್ದಾರೆ. ಆಶ್ರಮ ಶಾಲೆಗಳ ಪರಿಕಲ್ಪನೆಯ ಕುರಿತು, ಅಲ್ಲಿನ ದಾಖಲಾತಿ, ಆಡಳಿತ ವ್ಯವಸ್ಥೆ, ಒಟ್ಟು ಆಶ್ರಮ ಶಾಲೆಗಳ ಸ್ಥಿತಿ ಗತಿಯ ಕುರಿತು ಬುಡಕಟ್ಟು ವಿದ್ಯಾರ್ಥಿಗಳ ಶಿಕ್ಷಕರ ಮತ್ತು ಹೆತ್ತವರ ಅಭಿಪ್ರಾಯವನ್ನು ಅಧ್ಯಯನಕಾರರು ಪ್ರಸ್ತುತ ಪಡಿಸಿದ್ದಾರೆ.

ಇದರೊಂದಿಗೆ ಅಧ್ಯಯನಕಾರರು ಆಶ್ರಮ ಶಾಲೆಗಳ ವಿವಿಧ ಸಮಸ್ಯೆಗಳ ಕುರಿತು ಬೆಳಕು ಚೆಲ್ಲಿದ್ದಾರೆ. ಇವುಗಳಲ್ಲಿ ಮುಖ್ಯವಾಗಿ ಆಶ್ರಮಶಾಲೆಗಳಲ್ಲಿ ಶಿಕ್ಷಣ ಸಾಮಾಗ್ರಿಗಳ ಕೊರತೆ, ಸ್ಥಳದ ಅಭಾವ, ತರಬೇತಿ ರಹಿತ ಮತ್ತು ಬುಡಕಟ್ಟು ಸಂಸ್ಕೃತಿಯ ಪರಿಚಯವಿಲ್ಲದ ಅಧ್ಯಾಪಕರುಗಳ ನೇಮಕಾತಿ, ಆಶ್ರಮ ಶಾಲೆಯ ಮುಖ್ಯೋಪಾಧ್ಯಾಯರಿಗಿರುವ ಇತರ ಹೆಚ್ಚುವರಿ ಹೊಣೆಗಳು, ಶಿಕ್ಷಕರು, ವಿದ್ಯಾರ್ಥಿಗಳ ಆಶ್ರಮ ಶಾಲೆಯಲ್ಲಿಯೇ ಉಳಿದುಕೊಳ್ಳದೇ ರಾತ್ರಿ ಮನೆಗೆ ಹೋಗಿ, ಮರುದಿನ ಬೆಳಗ್ಗೆ ಆಶ್ರಮ ಶಾಲೆಗೆ ಬರುವುದು(ಸಾಮಾನ್ಯ ಶಾಲೆಗಳಂತೆ) ಮಕ್ಕಳು ದುಡಿಮೆಯಿಂದಾಗಿ ಆಶ್ರಮ ಶಾಲೆಗೆ ಗೈರುಹಾಜರಿ, ಪಠ್ಯಪುಸ್ತಕದ ಭಾಷೆ, ಬುಡಕಟ್ಟು ಸಂಸ್ಕೃತಿ ಮತ್ತು ಭಾಷೆ ತಿಳಿದಿಲ್ಲದ ಅಧ್ಯಾಪಕರು, ಬುಡಕಟ್ಟುಗಳಿಗೆ ಸೂಕ್ತವಲ್ಲದ ಕಲಿಕೆಯ ವಿಧಾನ, ಆಶ್ರಮ ಶಾಲೆಗಳಿಗೆ ಪರಿವೀಕ್ಷಣೆಯ ಕೊರತೆ (ಅಧಿಕಾರಿಗಳ ಪರಿಶೀಲನೆಯ ಉದ್ದೇಶ, ಉಗ್ರಾಣ ಮತ್ತು ಲೆಕ್ಕಪತ್ರಗಳು ಮಾತ್ರ – ವಿದ್ಯಾರ್ಥಿಯ ಒಟ್ಟು ಪ್ರಗತಿ ಅಲ್ಲ) ಶಿಕ್ಷಕರು ಮತ್ತು ಆಶ್ರಮ ಶಾಲೆಯ ನಿಲಯಪಾಲಕರೊಂದಿಗೆ ಹೊಂದಾಣಿಕೆಯಿಲ್ಲದೇ ಇರುವುದು ಆಶ್ರಮ ಶಾಲೆಗಳ ಬಹುದೊಡ್ಡ ಸಮಸ್ಯೆಯಾಗಿದೆ. ಅಧ್ಯಯನಕಾರರು ಕೊನೆಯಲ್ಲಿ ಆಶ್ರಮಶಾಲೆಗಳು ಬುಡಕಟ್ಟು ವಿದ್ಯಾರ್ಥಿಗಳನ್ನು ಸೆಳೆಯಲು ಅನೇಕ ಸಲಹೆಗಳನ್ನು ನೀಡಿರುತ್ತಾರೆ.

ಒಟ್ಟಿನಲ್ಲಿ ಈ ಗ್ರಂಥವು ಬುಡಕಟ್ಟು ಆಶ್ರಮಶಾಲೆಗಳ ಪರಿಸ್ಥಿತಿ ಮತ್ತು ಸಮಸ್ಯೆಗಳು ಹಾಗೂ ಮುಂದಕ್ಕೆ ಕೈಗೊಳ್ಳಬೇಕಾಗಿರುವ ಕ್ರಮಗಳ ಕುರಿತು ವಿಶ್ಲೇಷಣೆಯನ್ನು ನೀಡುತ್ತದೆ.

ಎಂ. ನಂಜಮ್ಮಣ್ಣಿ ಅವರು **"ಸಾಮಾಜಿಕ ಮಾನವಶಾಸ್ತ್ರ"** ಎಂಬ (1971) ತಮ್ಮ ಅಧ್ಯಯನದಲ್ಲಿ ಪ್ರಾಚೀನ ಮಾನವನ ಸಂಸ್ಕೃತಿ ಹಾಗೂ ಸಾಮಾಜಿಕ ಜೀವನದ ಕುರಿತು ಬೆಳಕು ಚೆಲ್ಲಿದ್ದಾರೆ. ಆದಿವಾಸಿ ಜನಾಂಗಗಳ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳ ಅರಿವು ಇಲ್ಲದಿದ್ದರೆ ಅವರ ಕಲ್ಯಾಣ ಸಾಧಿಸಲು ಅಸಾಧ್ಯ ಎಂದಿರುವ ಅಧ್ಯಯನಕಾರರು ಆದಿವಾಸಿಗಳ ಬಂಧುತ್ವದ ಕುರಿತು ವಿನೋದ ಸಂಬಂಧಗಳು, ಶಿಶುಮೂಲ ಸಂಬೋಧನೆ, ಮಾತೃ ಪ್ರಧಾನ ಸಂಬಂಧ, ಪಿತೃಭಗಿನೀ ಪ್ರಧಾನ ಸಂಬಂಧ, ಪ್ರಸೂತಿಕಾಧರ್ಮಾರೋಹಣ (ಆದಿವಾಸಿ ಜನಾಂಗದಲ್ಲಿ ಸ್ತ್ರೀ ಪ್ರಸವಿಸಿದ ಕೂಡಲೇ ನೆರವೇರಿಸುವ ಕೆಲವು ಚಟುವಟಿಕೆಗಳು) ಕುಲದ ಬೆಳವಣಿಗೆ ಮತ್ತು ನಂಬಿಕೆ, ವಿವಾಹ ಸಂಪ್ರದಾಯ, ವಿವಾಹ ಬಗೆಗಳು, ಆದಿವಾಸಿಗಳಲ್ಲಿ ಜೀವನ ಸಂಗಾತಿಯನ್ನು ಆರಿಸುವ ವಿಧಾನಗಳು, ಕುಟುಂಬದ ಮಹತ್ವ, ಮಾತೃಪ್ರಧಾನ ಮತ್ತು ಪಿತೃಪ್ರಧಾನ ಕುಟುಂಬ, ಆಸ್ತಿ ವ್ಯವಸ್ಥೆ, ಕಾನೂನು ಮತ್ತು ದಂಡನೆಗಳ ಕುರಿತಾದ ವಿವರಣೆಯಿದೆ.

ಪ್ರಾಚೀನ ಸಮಾಜದಲ್ಲಿ ಧರ್ಮ, ಮಾಂತ್ರಿಕ ವಿದ್ಯೆ, ನಿರ್ಬಂಧಗಳು, ಕಲೆ ಮತ್ತು ಕಸುಬು, ಮನೆಕಟ್ಟಡ, ಉಪಕರಣಗಳು, ನೃತ್ಯ ಕಲೆ ಮತ್ತು ಸಮಾಜ, ಆದಿವಾಸಿ ಸಮುದಾಯದಲ್ಲಿ ಸ್ತ್ರೀಯರ ಸ್ಥಾನಮಾನಗಳ ಕುರಿತು ವಿವರವಾಗಿ ವಿಶ್ಲೇಷಿಸಿದ್ದಾರೆ. ಅಧ್ಯಯನಕಾರರು ದಕ್ಷಿಣ ಭಾರತದ ಕೆಲವು ಆದಿವಾಸಿಗಳಾದ ತೊಡವರು, ಬಡಗರು, ಕೋಟರು ಇತ್ಯಾದಿಗಳ ಜೀವನ ಶೈಲಿಯ ಕುರಿತು ವಿವರಿಸಿದ್ದಾರೆ.

ಒಟ್ಟಿನಲ್ಲಿ ಈ ಅಧ್ಯಯನವು ಪ್ರಾಚೀನ ಕಾಲದ ಆದಿಮಾನವನ ಒಟ್ಟು ಜೀವನ ವಿಧಾನಕ್ಕೆ ಹೆಚ್ಚು ಮಹತ್ವ ನೀಡಿದೆ.

ಎಸ್. ಶ್ರೀಕಾಂತ್ ಅವರು **"ಸಮುದಾಯ ಸಂಘರ್ಷ"** ಎಂಬ 2000 ಸಂಪಾದಿತ ಅಧ್ಯಯನದಲ್ಲಿ ಎಂ. ಭೈರೇಗೌಡ ಮತ್ತು ಎಸ್ ಶ್ರೀಕಾಂತ್ ಅವರ "ಆದಿವಾಸಿ ಸಂಸ್ಕೃತಿ ಆಧುನಿಕ ಸಂಘರ್ಷ" ಎಂಬ ಲೇಖನದಲ್ಲಿ ಬುಡಕಟ್ಟು ಜನರ ಭಿನ್ನವಾದ ಪ್ರತ್ಯೇಕವಾದ ಜೀವನ ಕ್ರಮದ ಕುರಿತು ವಿವರಿಸಿದ್ದಾರೆ. ಈ ಪ್ರತ್ಯೇಕವಾದ ಜೀವನ ಕ್ರಮದ ಮೇಲೆ ನಗರ ಸಂಸ್ಕೃತಿಯ ಪ್ರಭಾವದ ಕುರಿತೂ ಮಾಹಿತಿ ಇದ್ದು, ಅದು ಯಾವ ರೀತಿ ಬುಡಕಟ್ಟು ಜನರ ಬದುಕನ್ನು ಸಂಕೀರ್ಣಗೊಳಿಸಿದೆ, ಹೇಗೆ ಅವರ ಅಸ್ತಿತ್ವಕ್ಕೆ ತೊಂದರೆಯಾಗಿದೆ, ಪರಿಣಾಮವಾಗಿ ಬುಡಕಟ್ಟು ಜನರು ನಿರ್ಗತಿಕರಾಗುತ್ತಿದ್ದಾರೆ ಎಂದ ಅಧ್ಯಯನಕಾರರು ಉದಾಹರಣೆಯಾಗಿ

ಮೈಸೂರು ಜಿಲ್ಲೆಯ ಹುಣಸೂರಿನ ಮತ್ತು ನಾಗರಹೊಳೆಯ ಬುಡಕಟ್ಟು ಜನರನ್ನು ಹೆಸರಿಸಿದ್ದಾರೆ.

ಆದಿವಾಸಿಗಳಲ್ಲಿರುವ ಸಾಮಾಜಿಕ ಮೌಲ್ಯಗಳು, ಸರಳತೆ, ಸಮಾನತೆ, ಪರಸ್ಪರ ಗಂಡು ಹೆಣ್ಣುಗಳಲ್ಲಿ ಗೌರವ ಹಾಗೂ ಸ್ವಾವಲಂಬಿ ಜೀವನದ ಬಗ್ಗೆ ಪ್ರಸ್ತಾಪಿಸುತ್ತ ಅಧ್ಯಯನಕಾರರು ಆಧುನಿಕ ಮಾನವ ಆದಿವಾಸಿ ಸಮುದಾಯದಿಂದ ಕಲಿತುಕೊಳ್ಳಬೇಕಾದುದು ಬಹಳ ಇದೆ ಎಂದು ಅಭಿಪ್ರಾಯಪಡುತ್ತಾರೆ.

ಆದಿವಾಸಿತನವು ಸ್ವಾವಲಂಬಿ ಬದುಕಿಗೆ ದಾರಿ ಮಾಡಿಕೊಟ್ಟು ಹೆದರಿಕೆಗೆ ಅವಕಾಶ ನೀಡುವುದಿಲ್ಲ. ಆದರೆ ಆಧುನಿಕ ಮಾನವ ಪರಾವಲಂಬಿ ಬದುಕು ನಡೆಸುವುದರಿಂದ ದುಗುಡ ದುಮ್ಮಾನಗಳು ಅವನಲ್ಲಿ ಅಧಿಕ ಎಂದು ವಿವರಿಸಿದ ಅಧ್ಯಯನಕಾರರು ಪ್ರಸ್ತುತ ಕರ್ನಾಟಕ ಮೂಲನಿವಾಸಿ ಬುಡಕಟ್ಟು ಜನರು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ಚಿತ್ರಿಸಿದ್ದಾರೆ.

ಬಿ. ಪ್ರೇಮಾನಂದ ಅವರು **"ಬುಡಕಟ್ಟು ಅಭಿವೃದ್ಧಿ"** ಎಂಬ(2010)ತಮ್ಮ ಅಧ್ಯಯನದಲ್ಲಿ 'ಬುಡಕಟ್ಟು' ಎಂಬ ಪದದ ಅರ್ಥ ಸಮಾಜವನ್ನು ಭಂಗಗೊಳಿಸದೆ ಸಮಸ್ಯೆಗಳನ್ನು ಸೃಷ್ಟಿಸದೆ ತಮ್ಮ ಸಂಸ್ಕೃತಿಯೊಂದಿಗೆ ಅವರನ್ನು ಅಭಿವೃದ್ಧಿ ಪಡಿಸಬೇಕು ಎನ್ನುವ ಅಧ್ಯಯನಕಾರರು, ಇಲ್ಲಿ ನೆಹರೂ ಚಿಂತನೆಯನ್ನು ವಿಶ್ಲೇಷಿಸಿದ್ದಾರೆ. ಯಾವ ರೀತಿ ಆಧುನೀಕರಣವು ಈಗ ಬುಡಕಟ್ಟು ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದೆ ಎನ್ನುವುದನ್ನೂ, ಯೂರೋಪ್ ಮಾದರಿಯ ನೀತಿ ನಮ್ಮ ದೇಶಕ್ಕೆ ಅಗತ್ಯವಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದಿವಾಸಿ ಸಂಸ್ಕೃತಿ ಉಳಿಯಬೇಕಾದರೆ ಪಾರಂಪರಿಕ ಉತ್ಪಾದನಾ ವ್ಯವಸ್ಥೆ ಮತ್ತು ಸಾಮುದಾಯಿಕ ಬದುಕು ಉಳಿಯಬೇಕು ಎಂದಿರುವ ಅಧ್ಯಯನಕಾರರು ಕಾಡಿನ ಹಕ್ಕನ್ನು ಆದಿವಾಸಿಗಳಿಂದ ಸರ್ಕಾರ ಕಿತ್ತುಕೊಂಡ ಕಾರಣ ಅವರು ಅತಂತ್ರರಾಗಿದ್ದಾರೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ, ಮುಂದುವರಿದ ಬುಡಕಟ್ಟುಗಳು ತಮ್ಮ ಸಮುದಾಯಕ್ಕೆ ಶಿಕ್ಷಣ ವ್ಯವಸ್ಥೆ ಕಲ್ಪಿಸಬೇಕು ಎಂದು ಸಲಹೆ ನೀಡಿದ್ದಾರೆ. ಬುಡಕಟ್ಟುಗಳು ಭಾರ ಎಂದು ಪರಿಗಣಿಸದೆ, (ಕೂಲಿಕಾರರು) ಉತ್ಪಾದನಾ ದೃಷ್ಟಿಯಿಂದ ನೋಡುವುದು, ಅವರನ್ನು ಅವರ ಪಾಡಿಗೆ ಬಿಟ್ಟು ಬಿಡುವುದು ಹಾಗೂ ಅವರನ್ನು ತುಳಿಯದೆ ಇರುವುದರಿಂದ ಅವರು ತಾವಾಗಿಯೇ ಅಭಿವೃದ್ಧಿ ಹೊಂದುತ್ತಾರೆ ಎಂದು ಅಧ್ಯಯನಕಾರರು ಅಭಿಪ್ರಾಯಪಡುತ್ತಾರೆ.

ಮಹದೇವ ಸ್ವಾಮಿ ಕೆ ಅವರು (2006) **"ಬುಡಕಟ್ಟು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ"**ಗಳ ಕುರಿತಾದ ತಮ್ಮ ಅಧ್ಯಯನದಲ್ಲಿ ಮೈಸೂರು ಜಿಲ್ಲೆಯ ಹುಣಸೂರು ಮತ್ತು ಹೆಗ್ಗಡೆ ದೇವನಕೋಟೆ ತಾಲೂಕಿನ ಬೆಟ್ಟ ಕುರುಬ ಮತ್ತು ಜೇನುಕುರುಬರ ಸಾಮಾಜಿಕ ಮತ್ತು ಆರ್ಥಿಕ ಜೀವನದ ಕುರಿತಾಗಿ ವಿವರಿಸಿದ್ದಾರೆ. ಈ ಬುಡಕಟ್ಟು ಜನರ ಮುಖ್ಯ ಕಸುಬು ಕಾಡನ್ನು ಅವಲಂಬಿಸಿದೆ. ಪ್ಲಾಸ್ಟಿಕ್ ಯುಗದ ಪ್ರಾರಂಭದ ನಂತರ ಕುಲಕಸುಬಿಗೆ ಆಪತ್ತು ಬಂದಿದ್ದು ಆರ್ಥಿಕತೆಯಲ್ಲಿ ಸದೃಢವಾಗಿ ಜೀವನ ನಡೆಸಲು ಅಶಕ್ತರಾಗಿದ್ದಾರೆ. ಇದರೊಂದಿಗೆ ಕುಡಿತದ ಚಟವೂ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತಿದೆ. ಶಿಕ್ಷಣದ ಕೊರತೆಯಿಂದಾಗಿ ಭವಿಷ್ಯದ ಕುರಿತಾದ ನಿರ್ಣಯ ತೆಗೆದುಕೊಳ್ಳಲೂ ಸಾಧ್ಯವಾಗದ ಬುಡಕಟ್ಟು ಜನರ ಒಟ್ಟು ಅಭಿವೃದ್ಧಿಗೆ ಸರ್ಕಾರ, ಸರ್ಕಾರೇತರ ಸಂಸ್ಥೆಗಳು, ಶ್ರೀಮಂತರು, ದಾನಿಗಳು ಮತ್ತು ನಾಗರಿಕರು ಕೈ ಜೋಡಿಸುವುದು ಅನಿವಾರ್ಯ ಎಂದು ಅಧ್ಯಯನಕಾರರು ಅಭಿಪ್ರಾಯ ಪಡುತ್ತಾರೆ.

ವಿಜಯಲಕ್ಷ್ಮಿ ಅವರು "ಬುಡಕಟ್ಟು ಅಧ್ಯಯನ" ಎಂಬ ನಿಯತಕಾಲಿಕದಲ್ಲಿ (2013) ಬುಡಕಟ್ಟು ಸಮುದಾಯಗಳಲ್ಲಿ **"ಮಾತೃ ಪ್ರಧಾನತೆ ಚರ್ಚೆಯ ವಿವಿಧ ನೆಲೆಗಳು"** ಎಂಬ ತಮ್ಮ ಲೇಖನದಲ್ಲಿ ಮನುಷ್ಯ ಆಹಾರ ಸಂಗ್ರಹಣೆ, ಬೇಟೆಯಿಂದ ಆಹಾರ, ಉತ್ಪಾದನೆಯ ಹಂತ, ಹೆಚ್ಚಾದ ಆಹಾರವನ್ನು ಹಂಚಿಕೊಳ್ಳುವ ಅಗತ್ಯತೆಯನ್ನು ವಿವರಿಸುತ್ತ ಈ ಹಂತದ ಸಮಾಜದಲ್ಲಿ ಹೆಣ್ಣು ಗಂಡು ನಿಸರ್ಗದ ಸಹಜೀವಿಗಳು. ಇವರಿಬ್ಬರೊಳಗಿನ ಲೈಂಗಿಕ ಸಂಬಂಧಗಳು ನಿಯಮಗಳಗೊಳಪಡದೆ ಇದ್ದುದರಿಂದ ಮಗು ತಾಯಿಯ ಸಾಮಾಜಿಕ ಚಹರೆಯನ್ನು ಸಹಜವಾಗಿ ಹೊಂದಿರುತ್ತಿದ್ದು ತನ್ನ ಅಗಾಧ ಶಕ್ತಿಯಿಂದ, ಸಹನಶೀಲತೆಯಿಂದ, ಇನ್ನೊಂದು ಜೀವಕ್ಕೆ ಜೀವ ಕೊಡುವ ಮಹಿಳೆ ನಿಗೂಢವಾದ ಮತ್ತು ಅಸಾಮಾನ್ಯ ಶಕ್ತಿಯನ್ನು ಪಡೆದಾಕೆ ಎಂಬ ಗ್ರಹಿಕೆಯು ಹೆಣ್ಣಿಗೆ ಮಹತ್ವ ನೀಡಿತು.

ಈ ವ್ಯವಸ್ಥೆಯಲ್ಲಿ ಪಿತೃತ್ವಕ್ಕೆ ಮಹತ್ವವಿರಲಿಲ್ಲ. ವ್ಯಕ್ತಿಯನ್ನು ತಾಯಿ ಮುಖೇನ ಗುರುತಿಸಲಾಗುತ್ತದೆಯೇ ವಿನಹ ತಂದೆಯ ಮುಖೇನ ಅಲ್ಲ, ಮನುಷ್ಯನ ಮರು ಉತ್ಪಾದನೆ ಹಾಗೂ ಒಡೆತನಕ್ಕೆ ನೆರವಾಗುವ ಸ್ತ್ರೀ ಮತ್ತು ಅದಕ್ಕಾಗಿಯೇ ಮಾನವ ಸಂತತಿಗೆ ಕಾರಣವಾಗುವ ಹೆಣ್ಣನ್ನು ಮಾನವ ಸಮಾಜದ ಪ್ರಧಾನ ಚಹರೆಯನ್ನಾಗಿಸುವ ಚಾರಿತ್ರಿಕ ಘಟನೆಗಳನ್ನು ಈ ಅಧ್ಯಯನವು ಪ್ರಸ್ತುತ ಪಡಿಸುತ್ತದೆ ಹಾಗೂ ನಿಸರ್ಗಗಳು ಇಲ್ಲಿ ಸಮಾಜದ ಕೇಂದ್ರಗಳಾದವು ಹಾಗೂ ಕೇಂದ್ರಗಳು ಆರಾಧನೆಗೊಳಪಟ್ಟವು. ದುಡಿಮೆಯ ಪ್ರಕ್ರಿಯೆಯಲ್ಲಿ ಅಸಮಾನತೆಗಳು, ಭೇದಭಾವಗಳಿರಲಿಲ್ಲ. ಸ್ವಂತ ಆಸ್ತಿ, ಗುಲಾಮನನ್ನು ನೇಮಿಸುವುದಾಗಲಿ,

ರಾಜ್ಯದ ಕಲ್ಪನೆಯಾಗಲೀ ಇರಲಿಲ್ಲ. ಕೃಷಿ ಹಂತದಲ್ಲಿ ಭೂಮಿ ಉತ್ಪಾದನಾ ಕೇಂದ್ರವಾಗುತ್ತಿದ್ದಂತೆಯೇ ಅಧಿಕ ಉತ್ಪಾದನೆಯಿಂದಾಗಿ ಉಳಿಕೆಯಾಗತೊಡಗಿ ಬಳಿಕ ಸಾಮುದಾಯಿಕ ಒಡೆತನದ ಬದಲಿಗೆ ಖಾಸಗಿ ಆಸ್ತಿಯಾಗಿ ರೂಪುಗೊಂಡು ಬದಲಾಗುತ್ತ ಮಹಿಳೆ ಪುರುಷನಿಗೆ ಖಾಸಗಿ ಆಸ್ತಿಯಾದಳು.

ಕುಟುಂಬ ಅಸ್ತಿತ್ವಕ್ಕೆ ಬಂದು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮುಕ್ತತೆ ಅನುಭವಿಸುತ್ತಿದ್ದ ಮಹಿಳೆ, ಪುರುಷ ಕೇಂದ್ರಿತ ಸಮಾಜದಲ್ಲಿ ತನ್ನೆಲ್ಲಾ ಮಾನ್ಯತೆಗಳನ್ನು ಕಳಕೊಂಡಳು. ಕೃಷಿ ಉತ್ಪಾದನೆಯ ಹೆಚ್ಚುವರಿ ಉತ್ಪಾದನೆ ದಕ್ಕಿಸಿಕೊಳ್ಳುವ ಪಾಲಕ ವರ್ಗ ಎಂಬ ವಿಭಜನೆಯಾಯಿತು. ಇಲ್ಲಿ ಬಹುಸಂಖ್ಯಾತ ದುಡಿವ ವರ್ಗ ಮತ್ತು ಮಹಿಳೆ ಊಳಿಗಮಾನ್ಯ ಸಮಾಜದಲ್ಲಿ ತಮ್ಮ ಶ್ರಮ ಬಿಟ್ಟಿಯಾಗಿ ವ್ಯಯಿಸಿ ಯಾವ ಫಲವೂ ಇಲ್ಲದೆ ಬದುಕುವಂತಾಯಿತು.

ಆದ್ದರಿಂದ ಮಾತೃ ಪ್ರಧಾನತೆ ಎನ್ನುವ ಪರಿಕಲ್ಪನೆಯು ಮಹಿಳೆಯ ಪ್ರಚ್ಛನ್ನ ಶಕ್ತಿಯ ಕಾರಣಕ್ಕೆ ಆಕೆಯನ್ನು ದೈವತ್ವಕ್ಕೆ ಏರಿಸಿದ್ದು, ಉತ್ಪಾದನಾ ಸಾಧನಗಳು ಯಾವಾಗ ಪುರುಷನ ಕೈಗೆ ಹಸ್ತಾಂತರವಾದವೋ ಆಗಲೇ ಮಹಿಳೆ ತಾನು ಹೊಂದಿದ್ದ ಪ್ರಾಧಾನ್ಯತೆಯನ್ನು ಕಳೆದುಕೊಳ್ಳಬೇಕಾಗಿ ಬಂತು ಎನ್ನುವುದನ್ನು ಈ ಅಧ್ಯಯನ ಬಿಂಬಿಸುತ್ತದೆ.

ನೀತಾ ಲೋದಾ ಅವರು **"ಸ್ಟೇಟಸ್ ಆಫ್ ಟ್ರೈಬಲ್ ವಿಮೆನ್"** (Status of Tribal Women) ಎಂಬ ತಮ್ಮ ಅಧ್ಯಯನದಲ್ಲಿ (2003) ಬುಡಕಟ್ಟು ಮಹಿಳೆಯರ ಪ್ರಸ್ತುತ ಸ್ಥಾನಮಾನದ ಕುರಿತು ಸಮಗ್ರವಾಗಿ ಬೆಳಕು ಚೆಲ್ಲಿದ್ದಾರೆ. ಈ ಅಧ್ಯಯನವು ರಾಜಸ್ಥಾನದ ಬಿಲ್‌ಮಿನಾ ಬುಡಕಟ್ಟು ಮಹಿಳೆಯರ ಜೀವನದ ಸಾಂಸ್ಕೃತಿಕ ಅಂಶಗಳು, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಬುಡಕಟ್ಟು ಮಹಿಳೆಯ ಮೇಲೆ ವಿಜ್ಞಾನ, ತಂತ್ರಜ್ಞಾನ ಮತ್ತು ಆಧುನೀಕರಣದ ಪ್ರಭಾವ ಹಾಗೂ ಎಷ್ಟರಮಟ್ಟಿಗೆ ಬುಡಕಟ್ಟು ಮಹಿಳೆ ಈ ತಂತ್ರಜ್ಞಾನವನ್ನು ಉಪಯೋಗಿಸಿಕೊಳ್ಳುವಲ್ಲಿ ಶಕ್ತಳು. ಹಾಗೂ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಇವುಗಳ ಪರಿಣಾಮವೇನು ಎಂಬುದರ ಕುರಿತು ವಿವರಿಸುತ್ತದೆ.

ಸಂಶೋಧನಾಕಾರರು ಈ ಅಧ್ಯಯನದಲ್ಲಿ ರಾಜಸ್ಥಾನದ ಉದಯಪುರ ಜಿಲ್ಲೆಯ ಅತೀ ಹಿಂದುಳಿದ ಮತ್ತು ಮುಂದುವರಿದ ಬುಡಕಟ್ಟುಗಳ ಕುರಿತು ಅಧ್ಯಯನ

ಮಾಡಿದ್ದು ಅವರ ದುಡಿಮೆ ಕುಟುಂಬದಲ್ಲಿ ನಿರ್ಧಾರ ತೆಗೆದುಕೊಳ್ಳುವಲ್ಲಿ ಯಾವ ರೀತಿಯ ಪಾತ್ರವಹಿಸುತ್ತವೆ ಎಂದೂ ವಿಶ್ಲೇಷಿಸಿದ್ದಾರೆ.

ಅಧ್ಯಯನಕಾರರು ಕುಟುಂಬದಲ್ಲಿ ಸಂಪತ್ತಿನ ಮೇಲೆ ಅಧಿಕಾರ ಇಲ್ಲದೇ ಇರುವುದನ್ನು ಸ್ಪಷ್ಟಪಡಿಸಿದ್ದಾರೆ. ತವರು ಮನೆಯಿಂದ ತಮಗೆ ಮದುವೆ ಸಮಯದಲ್ಲಿ ಸಿಕ್ಕಿದ ವಸ್ತುಗಳ ಮೇಲೆ ಮಾತ್ರ ಅಧಿಕಾರವಿದ್ದುದು, ಅಧ್ಯಯನದ ಮೂಲಕ ತಿಳಿದುಬಂದಿದೆ. ಸರಳ ತಾಂತ್ರಿಕ ವಸ್ತುಗಳ ನಿರ್ವಹಣೆಯ ಜ್ಞಾನ ಬುಡಕಟ್ಟು ಮಹಿಳೆಯರಿಗಿಲ್ಲದೆ, ಒಂದು ರೀತಿಯ ಕೀಳರಿಮೆ ಕಾಡುತ್ತಿದೆ.

ಈ ಕುರಿತಂತೆ ತರಬೇತಿಯ ಅವಶ್ಯವಿದೆ ಹಾಗೂ ಆರ್ಥಿಕವಾಗಿ ಮಹಿಳೆಯರನ್ನು ಸಶಕ್ತಗೊಳಿಸಲು ಆದಾಯ ಹೆಚ್ಚಿಸಲು ಸ್ವಉದ್ಯೋಗ ತರಬೇತಿಯ ಅಗತ್ಯವಿದೆ. ಎಂದು ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ.

ಉದಯಪ್ರಕಾಶ್ ಸಿನ್ಹಾ ಮತ್ತು ರೇಖಾ ಸಿನ್ಹಾ 2007 ರಲ್ಲಿ **ಮಾಡಿದ "ವಿಮೆನ್ ಎಮ್‌ಪವರ್‌ಮೆಂಟ್ ಎಂಡ್ ಫ್ಯಾಮಿಲಿ ಮೇನೇಜ್‌ಮೆಂಟ್ ಇನ್ ಟ್ರೈಬಲ್ ರೀಜನ್"** (Women Empowerment and Family Management in Tribal Region) ಎಂಬ ತಮ್ಮ ಅಧ್ಯಯನದಲ್ಲಿ ಆದಿವಾಸಿ ಮಹಿಳೆಯರ, ವಿಶೇಷವಾಗಿ ಶಾಂತಾಲ ಬುಡಕಟ್ಟು ಮಹಿಳೆಯರ ಮನೆ ನಿರ್ವಹಣೆ, ಲಿಂಗಪಾತ್ರ ಮತ್ತು ನಿರ್ಧಾರ ತೆಗೆದುಕೊಳ್ಳುವ ಕುರಿತು ಬೆಳಕು ಚೆಲ್ಲಿದ್ದಾರೆ. ಇದರೊಂದಿಗೆ ಶಕ್ತಿಯುತ ಆಹಾರದ ಸಮಸ್ಯೆ, ವಿರಾಮದ ವೇಳೆಯ ಕೆಲಸಗಳನ್ನು ಕುರಿತು ಅವಲೋಕನ ಮಾಡಿದ್ದಾರೆ.

ಆದಿವಾಸಿ ಮಹಿಳೆಯರು ಆರ್ಥಿಕತೆಯಲ್ಲಿ ಮುಖ್ಯವಾಗಿ ಕೃಷಿಯೊಂದಿಗೆ ಬೇಟೆ, ಮೀನುಗಾರಿಕೆ, ಹೈನುಗಾರಿಕೆಯಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುವುದನ್ನು ವಿಶ್ಲೇಷಿಸಿದ್ದಾರೆ. ಬುಟ್ಟಿ ತಯಾರಿಕೆ ಮತ್ತು ನೇಯ್ಗೆ ಕೆಲಸದ ಮೂಲಕವೂ ಕುಟುಂದ ಆರ್ಥಿಕತೆಗೆ ಬುಡಕಟ್ಟು ಮಹಿಳೆಯರು ಸಹಕರಿಸುತ್ತಾರೆ. ಶಾಂತಾಲ್ ಮಹಿಳೆಯರಿಗೆ, ಮುಖ್ಯವಾಹಿನಿಗೆ ಹೋಲಿಸಿದರೆ ಗಂಡಸರಷ್ಟೇ ಸಮಾನ ಅವಕಾಶಗಳು ಇವೆ. ಆದರೆ ನಿರ್ಧಾರ ತೆಗೆದುಕೊಳ್ಳುವಲ್ಲಿ ಮಾತ್ರ ಗಂಡಸರಿಗೆ ಅಡಿಯಾಳಾಗಿದ್ದು, ಇದರಲ್ಲಿ ಮುಖ್ಯವಾಗಿ ವಯಸ್ಸು, ಶಿಕ್ಷಣ, ಮತ್ತು ಆರ್ಥಿಕ ಚಟುವಟಿಕೆಗಳು ಪಾತ್ರವಹಿಸುತ್ತವೆ. ಆದರೂ ಗ್ರಾಮದ ರಾಜಕೀಯ ಚಟುವಟಿಕೆಗಳಲ್ಲಿ ಮಹಿಳೆ ಪಾಲು ಪಡೆದಿಲ್ಲ. ಇವರಲ್ಲಿ ಸಾಂಪ್ರದಾಯಿಕ ಚಟುವಟಿಕೆಗಳಾದ ಜನಪದಗೀತೆ, ನೃತ್ಯಗಳು,

ಹಬ್ಬಗಳು ಮುಖ್ಯವಾದರೂ, ವಿದ್ಯುನ್ಮಾನ ಮಾಧ್ಯಮಗಳು ಈಗ ಮುಖ್ಯವಾಗುತ್ತದೆ. ಶಾಂತಾಲ್ ಮಹಿಳೆಯರಿಗೆ ಪರಿಸರದ ವ್ಯವಸ್ಥೆ (eco system) ಬಗ್ಗೆ ಇರುವ ಅಗಾಧ ಜ್ಞಾನವೇ ಅವರ ಶಕ್ತಿಯುತ ಆಹಾರ ನಿರ್ವಹಣೆಗೆ ಕಾರಣವಾಗಿದೆ. ಒಟ್ಟಿನಲ್ಲಿ ಆದಿವಾಸಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಮಹಿಳೆ ಮುಖ್ಯ ಪಾತ್ರವಹಿಸುತ್ತಾಳೆ ಎಂಬ ಉಲ್ಲೇಖವಿದೆ,

ವಿ.ಕೆ ಶ್ರೀವಾತ್ಸವ ಅವರು (2006) **"ಟ್ರೈಬಲ್ ವಿಮೆನ್ ಆಂಡ್ ಎಜುಕೇಶನಲ್ ಪ್ರೋಗ್ರಾಮ್"** (Tribal Women and Educational Programme) ಎಂಬ ತಮ್ಮ ಲೇಖನದಲ್ಲಿ ಆದಿವಾಸಿ ಮಹಿಳೆಯರಿಗೆ ಶಿಕ್ಷಣ ಅಗತ್ಯತೆಯನ್ನು ವಿವರಿಸಿದ್ದಾರೆ.

ಈ ನಿಟ್ಟಿನಲ್ಲಿ ಭಾರತ ಸರ್ಕಾರ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳ ವಿವಿಧ ಯೋಜನೆಗಳ ಕುರಿತು ಮತ್ತು ಅದರ ಪರಿಣಾಮದ ಬಗ್ಗೆ ಮಾಹಿತಿ ನೀಡಿದ್ದಾರೆ. ಮಧ್ಯ ಪ್ರದೇಶದ ಛತ್ತೀಸ್‌ಗಡ್‌ನಲ್ಲಿನ ಒಟ್ಟು 200 ಕುಟುಂಬಗಳಿಗೆ ಈ ಯೋಜನೆ ಅನ್ವಯವಾಗಿದ್ದು ಹೇಗೆ ಶಿಕ್ಷಣ ಒಟ್ಟು ಮೌಲ್ಯಗಳಲ್ಲಿ, ವರ್ತನೆಗಳಲ್ಲಿ ಬದಲಾವಣೆ ತರುತ್ತದೆ, ಜಾಗೃತಗೊಳಸುತ್ತದೆ, ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾ, ಹೇಗೆ 1986ರ ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಮಹಿಳಾ ಸಬಲೀಕರಣಕ್ಕೆ ಒತ್ತು ನೀಡಿದೆ ಎಂದು ವಿಶ್ಲೇಷಿಸಿದ್ದಾರೆ. ಇದರಲ್ಲಿ ಆದಿವಾಸಿಗಳ ಪ್ರದೇಶದಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯುವುದು, ಅನೌಪಚಾರಿಕ ಶಿಕ್ಷಣವನ್ನು ನೀಡುವುದು, ಆದಿವಾಸಿ ಯುವ ಜನಾಂಗಕ್ಕೆ ವಿವಿಧ ರೀತಿಯ ತರಬೇತಿ, ಅರಿವಿಗಾಗಿ ಬುಡಕಟ್ಟು ಮಕ್ಕಳಿಗಾಗಿ ವಿಶೇಷ ಶಿಕ್ಷಣ ಮುಖ್ಯವಾಗಿದೆ.

ಇಲ್ಲಿ ಅಧ್ಯಯನಕಾರರು, ಆದಿವಾಸಿ ಮಹಿಳೆಯ ಸ್ಥಾನಮಾನದ ಬಗ್ಗೆಯೂ ಪ್ರಸ್ತಾಪಿಸುತ್ತಾ, ಮಹಿಳೆ ಒಟ್ಟು ಕುಟುಂಬದಲ್ಲಿ ಸತತ ದುಡಿಯುತ್ತಾ, ಹೊರಗಿನ ಕೆಲಸದಲ್ಲೂ ತನ್ನನ್ನು ದುಡಿಸಿಕೊಳ್ಳುವುದರಿಂದ ಆರೋಗ್ಯದ ಮೇಲೆ ಪರಿಣಾಮ ಬೀರುವುದಲ್ಲದೆ, ಸತತ ದುಡಿತದಿಂದಾಗಿ ತನ್ನನ್ನು ತಾನು ನಿರ್ಲಕ್ಷಿಸುತ್ತಿದ್ದಾಳೆಂದು ಪ್ರತಿಕ್ರಿಯಿಸಿದ್ದಾರೆ. ಹಾಗೂ ಒಟ್ಟು ಎರಡು ರೀತಿಯ ಸ್ಥಾನಮಾನಗಳನ್ನು ಬುಡಕಟ್ಟು ಮಹಿಳೆಯಲ್ಲಿ ಅಧ್ಯಯನಕಾರರು ಗುರುತಿಸಿದ್ದು ಒಂದು ಹಿಂದಿನಿಂದಲೂ ಬಂದಿರುವ (Traditional) ಹಾಗೂ ಮತ್ತೊಂದು ಪ್ರಸ್ತುತ ವಿವಿಧ ಅಭಿವೃದ್ಧಿ ಯೋಜನೆಗಳಿಂದಾಗಿ (ಶಿಕ್ಷಣ ಸ್ವಉದ್ಯೋಗ ಜಾಗೃತಿ ಕಾರ್ಯಕ್ರಮ) ಅವರು ಗಳಿಸಿರುವ ಸ್ಥಾನಮಾನ ಎಂದು ವಿಶ್ಲೇಷಿಸಿರುವುದು ಗಮನಾರ್ಹವಾಗಿದೆ.

ಆದಿವಾಸಿ ಸಮಾಜದಲ್ಲಿ ಶ್ರಮ ವಿಭಜನೆಯನ್ನು ಪ್ರಸ್ತಾಪಿಸಿದ ಅಧ್ಯಯನಕಾರರು ಮಹಿಳೆಯರಿಗೆ ತಮ್ಮ ದೈನಂದಿನ ಉದ್ಯೋಗ ಚಟುವಟಿಕೆಗಳಲ್ಲಿ ಇರುವ ನಿಷೇಧಗಳನ್ನು ಗುರುತಿಸಿದ್ದಾರೆ. ಮುಖ್ಯವಾಗಿ ಮುಟ್ಟಾದ ದಿನಗಳಲ್ಲಿ ಹೊಲದಲ್ಲಿ ಉಳುಮೆ ಮಾಡಬಾರದು, ಮನೆಯೊಳಗಿನ ಮತ್ತು ಹೊರಗಿನ ಯಾವುದೇ ಕೆಲಸಗಳನ್ನು ಮಾಡಬಾರದು ಎನ್ನುವುದಾಗಿದೆ.

ತನ್ನ ಮನೆಯಲ್ಲಿ ಪುರುಷನಿಗಿಂತ ಹೆಚ್ಚಾಗಿ ಮನೆಯ ಹಾಗೂ ಹೊರಗಿನ ಕೆಲಸದಲ್ಲಿ ತೊಡಗಿಕೊಂಡಿರುವ ಬುಡಕಟ್ಟು ಮಹಿಳೆಗೆ ತನ್ನ ಗಂಡನ ಅಥವಾ ತನ್ನ ತಂದೆಯ ಆಸ್ತಿಯಲ್ಲಿ ಹಕ್ಕಿಲ್ಲದೆ ಇರುವುದು ಎಂದು ಉಲ್ಲೇಖಿಸಿದ ಅಧ್ಯಯಕಾರರು ಇದಕ್ಕೆ ಉದಾಹರಣೆಯಾಗಿ ಪಹಾರಿಕೊರ್ವ, ಬಿಲ್ಲ್ ಆದಿವಾಸಿಗಳು. ಒರಾನ್ ಮತ್ತು ಗೊಂಡರು ಈ ರೀತಿಯ ತಾರತಮ್ಯಕ್ಕೆ ಒಳಗಾದ ಬುಡಕಟ್ಟು ಮಹಿಳೆಯರು ಎಂದಿದ್ದಾರೆ.

ಒಟ್ಟಿನಲ್ಲಿ ಅಧ್ಯಯನಕಾರರು ಮಧ್ಯಪ್ರದೇಶದ ವಿವಿಧ ಬುಡಕಟ್ಟುಗಳಾದ ಬಿಲ್, ಒರಾನ್, ಗೊಂಡ ಮಹಿಳೆಯ ಶೈಕ್ಷಣಿಕ ಪರಿಸ್ಥಿತಿಯತ್ತ ಬೆಳಕು ಚೆಲ್ಲಿದ್ದು ವಿವಿಧ ಬುಡಕಟ್ಟು ಮಹಿಳೆಯರ ಸಾಕ್ಷರತೆಯ ಪ್ರಮಾಣ ಹಾಗೂ ಒಟ್ಟು ಅಭಿವೃದ್ಧಿಯಲ್ಲಿ ಆದಿವಾಸಿ ಮಹಿಳಾ ಶಿಕ್ಷಣದ ಮಹತ್ವವನ್ನು ವಿಶ್ಲೇಷಿಸಿದ್ದಾರೆ.

ಪಿ. ಆದಿನಾರಾಯಣ ರೆಡ್ಡಿ ಅವರು (2004) **"Education of Tribal Women A Comparitive Study"** (ಎಜುಕೇಶನ್ ಆಫ್ ಟ್ರೈಬಲ್ ವಿಮೆನ್ ಎ ಕಂಪೇರಿಟಿವ್ ಸ್ಟಡಿ) ಎಂಬ ತಮ್ಮ ಅಧ್ಯಯನದಲ್ಲಿ ಆದಿವಾಸಿ ಮಹಿಳೆಯರ ಶಿಕ್ಷಣದ ಸ್ಥಿತಿಗತಿಯ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಸರಕಾರವು ಅದೆಷ್ಟೋ ವರ್ಷಗಳಿಂದ ಆದಿವಾಸಿ ಮಹಿಳೆಯರ ಶಿಕ್ಷಣಕ್ಕಾಗಿ ಅನೇಕ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದರೂ ಬುಡಕಟ್ಟು ಮಹಿಳೆಯರ ವಿಶೇಷವಾಗಿ ಆದಿವಾಸಿ ಮಹಿಳೆಯರ ಶಿಕ್ಷಣ ಮಟ್ಟ ಸುಧಾರಿಸಿಲ್ಲವೆಂದು ಪ್ರತಿಕ್ರಯಿಸಿದ್ದಾರೆ.

ಶಿಕ್ಷಣವು ಅಭಿವೃದ್ಧಿಯಲ್ಲಿ ಬಹಳ ಮಹತ್ತರ ಪಾತ್ರ ವಹಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಆಂಧ್ರಪ್ರದೇಶದ 'ಸವರ' ಬುಡಕಟ್ಟು ಗುಂಪು (savara) ಮತ್ತು ಕೇರಳದ ಚೋಲೋನಾಯಕನ್(cholonayakan) ಹಾಗೂ ಕಟ್ಟುನಾಯಕನ್(kottunayakan)

ಬುಡಕಟ್ಟುಗಳನ್ನು ಶಿಕ್ಷಿತರನ್ನಾಗಿ ಮಾಡುವಲ್ಲಿನ ಸಮಸ್ಯೆಗಳನ್ನು ಕಂಡುಹಿಡಿದು ಪರಿಹಾರಗಳನ್ನು ಸಹ ಈ ಅಧ್ಯಯನದಲ್ಲಿ ಸೂಚಿಸಲಾಗಿದೆ.

ಅಧ್ಯಯನವು ಮಹಿಳಾ ಆದಿವಾಸಿಗಳ ಸಾಮಾಜಿಕ, ಸಾಂಸ್ಕೃತಿಕ ಬದುಕಿನ ಬಗ್ಗೆ ಬೆಳಕು ಚೆಲ್ಲುವುದರೊಂದಿಗೆ, ಆಂದ್ರಪ್ರದೇಶ ಮತ್ತು ಕೇರಳ ಸರಕಾರಗಳು ಬುಡಕಟ್ಟು ಸಮಾಜಕ್ಕೆ ಕೊಡಮಾಡಿರುವ ಅಭಿವೃದ್ಧಿ ಪರ ಕಾರ್ಯಕ್ರಮಗಳ ಕುರಿತು ಚಿತ್ರಣವನ್ನು ಒದಗಿಸುತ್ತದೆ.

ಆದಿವಾಸಿ ಮಹಿಳೆಯರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಯೋಜನೆಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕಾದರೆ

- ಆದಿವಾಸಿ ಹೆಣ್ಣು ಮಕ್ಕಳಗೆಂದೇ ವಸತಿ ಶಾಲೆಗಳ ನಿರ್ಮಾಣವಾಗಬೇಕು.
- ಎಲ್ಲಾ ಬುಡಕಟ್ಟು ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಯುವುದು.
- ಮಗು, ಸ್ನೇಹಿ ಶಾಲೆಗಳ ಅಗತ್ಯವಿದ್ದು ಅಲ್ಲಿ ಬೇಕಾಗಿರುವ ಕನಿಷ್ಠ ಅವಶ್ಯಕತೆಗಳಾದ ಸಮವಸ್ತ್ರ, ಉಚಿತ ಪುಸ್ತಕಗಳು ಇರಬೇಕಲ್ಲದೆ ತರಗತಿಯ ಸ್ವಚ್ಛತೆಗೆ ಗಮನ ಕೊಡಬೇಕು.
- ಆತ್ಮವಿಶ್ವಾಸಕ್ಕೆ ಧಕ್ಕೆ ತರುವ ಶಿಕ್ಷಣ ಸಂಬಂಧವಿಲ್ಲದ ಕೆಲಸಗಳನ್ನು ವಿದ್ಯಾರ್ಥಿಗಳಂದ ಮಾಡಿಸಕೂಡದು.
- ಔಪಚಾರಿಕ ಶಿಕ್ಷಣದೊಂದಿಗೆ ಜೀವನಕ್ಕೆ ಅಗತ್ಯವಿರುವ. ಸ್ವಾವಲಂಬಿಯನ್ನಾಗಿಸುವ ಕೌಶಲ್ಯಗಳಗೆ ತರಬೇತಿ (vocational training) ನೀಡುವುದು.
- ಆದಿವಾಸಿ ಶಿಕ್ಷಣಕ್ಕೆ ಅಧ್ಯಾಪಕರುಗಳನ್ನು ಅವರ ಗುಂಪಿನಿಂದಲೇ ಆಯ್ಕೆ ಮಾಡಬೇಕು
- ಆದಿವಾಸಿ ವಿದ್ಯಾರ್ಥಿಗಳ ಹೆತ್ತವರಿಗೆ, ಶಿಕ್ಷಣದ ಬಗ್ಗೆ ಅರಿವನ್ನು ಮೂಡಿಸುವುದು.
- ವಯಸ್ಕ ಕಲಿಕಾ ಕೇಂದ್ರಗಳನ್ನು ಬುಡಕಟ್ಟು ಸಮುದಾಯಗಳಗೆ ತೆರೆಯುವುದು
- ಬಾಲ್ಯವಿವಾಹದಿಂದಾಗುವ ಸಮಸ್ಯೆಗಳನ್ನು ಕುರಿತು ಅರಿವು ಮೂಡಿಸುವುದು ಹಾಗೂ ಮಕ್ಕಳಗೆ ಮನೆಯಲ್ಲಿ ಅಧ್ಯಯನಕ್ಕೆ ಅಗತ್ಯ ಸಮಯಾವಕಾಶವನ್ನು ನೀಡಲು ಹೆಚ್ಚಿನ ಮನೆಕೆಲಸದ ಹೊರೆಯನ್ನು ನೀಡದೇ ಇರುವಂತೆ ಹೆತ್ತವರಲ್ಲಿ ಜಾಗೃತಿ ಮೂಡಿಸುವುದು.

ಅಧ್ಯಯನಕಾರರು ತಮ್ಮ ಅಧ್ಯಯನದಲ್ಲಿ ಆದಿವಾಸಿ ಮಹಿಳೆಯರ ಶಿಕ್ಷಣಕ್ಕೆ ಮಾತ್ರ ಮಹತ್ವ ಕೊಟ್ಟಿದ್ದು ಶಿಕ್ಷಣವು ಆದಿವಾಸಿ ಮಹಿಳೆಯರ ಒಟ್ಟು ಬದುಕಿನಲ್ಲಿ ಬದಲಾವಣೆ ತರುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಹೇಮಲತಾ ಎಚ್ ಎಂ ಅವರು **"ಮಹಿಳಾ ಸಶಕ್ತೀಕರಣ"** ಎಂಬ (2003) ತಮ್ಮ ಸೈದ್ಧಾಂತಿಕ ಅಧ್ಯಯನದಲ್ಲಿ ಸಶಕ್ತೀಕರಣದ ಹುಟ್ಟು ಮತ್ತು ಬೆಳವಣಿಗೆಯ ಕುರಿತು ಮಾಹಿತಿ ನೀಡಿದ್ದಾರೆ. ಅಭಿವೃದ್ಧಿ ಮತ್ತು ಮಹಿಳೆ, ಶಕ್ತಿಯ ಪರಿಕಲ್ಪನೆ, ಸಶಕ್ತೀಕರಣದ ಪರಿಕಲ್ಪನೆ, ಸಶಕ್ತೀಕರಣದ ಅರ್ಥ ಮತ್ತು ಅದರ ವ್ಯಾಖ್ಯೆಗಳು ಮತ್ತು ಮಹಿಳಾ ಸಶಕ್ತೀಕರಣದ ವಿವಿಧ ಮಜಲುಗಳನ್ನು ಕುರಿತು ಈ ಅಧ್ಯಯನದಲ್ಲಿ ಗಮನಿಸಬಹುದಾಗಿದೆ.

ಇದರ ಜೊತೆಗೆ ಪ್ರಸ್ತುತ ಅಧ್ಯಯನವು ಮಹಿಳಾ ಸಶಕ್ತೀಕರಣದ ತಂತ್ರಗಳು ಘಟಕಗಳು, ಪ್ರಕ್ರಿಯೆ, ಸಶಕ್ತೀಕರಣದ ಮಟ್ಟಗಳು ಮಹಿಳಾ ಸಶಕ್ತೀಕರಣದ ತತ್ವಗಳು ಹಾಗೂ ಸಶಕ್ತೀಕರಣದ ಸೂಚಿಗಳ ಬಗ್ಗೆಯೂ ಬೆಳಕು ಚೆಲ್ಲುತ್ತದೆ.

ಅಧ್ಯಯನಕಾರರು ಭಾರತದಲ್ಲಿ ಮಹಿಳಾ ಅಭಿವೃದ್ಧಿ ನೀತಿ ಹಾಗೂ ಕಾರ್ಯಕ್ರಮಗಳಲ್ಲಿ ಮಹಿಳಾ ಸಶಕ್ತೀಕರಣ ಪ್ರಕ್ರಿಯೆ, ಮಹಿಳಾ ಸಶಕ್ತೀಕರಣದಲ್ಲಿ ಚರ್ಚಿತ ವಿಷಯಗಳು, ಮಹಿಳಾ ಸಶಕ್ತೀಕರಣದ ಪ್ರಾಮುಖ್ಯತೆ ಹಾಗೂ ಪರಿಣಾಮ ಇತ್ಯಾದಿಗಳ ಕುರಿತು ವಿಷಯಗಳನ್ನು ಮಂಡಿಸಿರುತ್ತಾರೆ.

ಒಟ್ಟಿನಲ್ಲಿ ಈ ಅಧ್ಯಯನದಲ್ಲಿ ಮಹಿಳಾ ಸಶಕ್ತೀಕರಣದ ಪೂರ್ಣ ಪರಿಕಲ್ಪನೆ ಮತ್ತು ಸಶಕ್ತೀಕರಣವು ಬಡ, ಮಧ್ಯಮ ಮತ್ತು ಶ್ರೀಮಂತ ಮಹಿಳೆಯರೊಂದಿಗೆ ತೊಡಗಿಸಿಕೊಳ್ಳಬೇಕಾದ ವಿವಿಧ ತಂತ್ರಗಳ ಕುರಿತು ವಿಶ್ಲೇಷಣೆಯಿದೆ.

ಜಗದೀಶ ಕುಮಾರ ಚ. ನಾಯಕ (2006) ಅವರು **"ಬುಡಕಟ್ಟು ಮಹಿಳಾ ಅಭಿವೃದ್ಧಿಯಲ್ಲಿ ಸ್ವಸಹಾಯ ಸಂಘಗಳ ಪಾತ್ರದ** ಕುರಿತಾದ ತಮ್ಮ ಅಧ್ಯಯನದಲ್ಲಿ ಮಹಿಳೆಯರ ಆರ್ಥಿಕ ಸ್ಥಿತಿ –ಗತಿಯ ಕುರಿತು ವಿಶ್ಲೇಷಿಸುತ್ತ 2001 ನ್ನು ಭಾರತ ಸರ್ಕಾರ ಮಹಿಳಾ "ಸಶಕ್ತೀಕರಣ ವರ್ಷ" ಎಂದು ಘೋಷಿಸಿದರೂ ಶಿಕ್ಷಿತ ವರ್ಗದವರು ಮಾತ್ರ ಅಭಿವೃದ್ಧಿ ಹೊಂದುತ್ತಿದ್ದು ಬುಡಕಟ್ಟು ಮಹಿಳೆ ಅಲ್ಲ ಎಂದು ಪ್ರತಿಕ್ರಿಯಿಸಿದ್ದಾರೆ. ಬುಡಕಟ್ಟು ಮಹಿಳೆಯರು ಅರೆ ಉದ್ಯೋಗಿಗಳಾಗಿದ್ದು ಕೂಡಿಡುವ ಕ್ರಮ ಇಲ್ಲ. ಬದುಕು ನಿರ್ವಹಣೆಯೇ ಕಷ್ಟವಾದಾಗ

ಉಳಿತಾಯದ ಕಲ್ಪನೆ ಬರಲು ಸಾಧ್ಯವಿಲ್ಲ. ಸರ್ಕಾರದ ಸ್ವಸಹಾಯ ಗುಂಪುಗಳ ಧ್ಯೇಯೋದ್ದೇಶಗಳು ಬುಡಕಟ್ಟು ಮಹಿಳೆಗೆ ಪೂರಕವಲ್ಲ. ಈ ಉದ್ದೇಶಗಳು ಗ್ರಾಮೀಣ ಮಟ್ಟದಲ್ಲಿ ನೆಲೆ ನಿಂತಿರುವಂತಹ ಉತ್ಪಾದನಾಂಗದ ಮೇಲೆ ಒಡೆತನ ಸಾಧಿಸಿದವರಿಗೆ ಪೂರಕವಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಆಧುನಿಕ ಸಂದರ್ಭದ ಆರ್ಥಿಕ ಚಟುವಟಿಕೆಗಳನ್ನು ನಿರ್ವಹಿಸುತ್ತಿರುವ ರಾಷ್ಟ್ರೀಕೃತ ಬ್ಯಾಂಕುಗಳು ಬಡಜನರಿಗೆ ಸಾಲ ನೀಡಲು ಭೂದಾಖಲಾತಿ ಪತ್ರಗಳನ್ನು ಸಲ್ಲಿಸಲು ಹೇಳುತ್ತವೆ. ಆದರೆ ಅನೇಕ ಬುಡಕಟ್ಟು ಜನರು ಭೂರಹಿತರೇ ಆಗಿರುವುದರಿಂದ ಬ್ಯಾಂಕುಗಳಲ್ಲಿ ಸಾಲ ಪಡೆಯಲು ಅಶಕ್ತರು. ಒಟ್ಟಾರೆಯಾಗಿ ಸ್ವಸಹಾಯ ಸಂಘಗಳ ಧ್ಯೇಯ, ಉದ್ದೇಶಗಳು ಬುಡಕಟ್ಟು ಮಹಿಳೆಗೆ ಪೂರಕವಾಗಿಲ್ಲ ಹಾಗೂ ದೋಷಪೂರಿತವಾಗಿವೆ. ಆದ್ದರಿಂದ ಈ ಧ್ಯೇಯಗಳು ಪುನಃ ರಚನೆಯಾಗಬೇಕು ಎನ್ನುವ ಅಂಶ ಈ ಮೇಲಿನ ಸಾಹಿತ್ಯ ವಿಮರ್ಶೆಯಿಂದ ಕಂಡುಕೊಳ್ಳಲಾಗಿದೆ.

ಒಟ್ಟಿನಲ್ಲಿ ಈ ಮೇಲಿನ ಅಧ್ಯಯನಗಳಿಂದ ಭಾರತದಲ್ಲಿ ಆದಿವಾಸಿಗಳ ಉಗಮ ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಕುರಿತಾದ ಮಾಹಿತಿಯನ್ನು ಪಡೆದುಕೊಳ್ಳಬಹುದಾಗಿದೆ. ಇದರೊಂದಿಗೆ ಬುಡಕಟ್ಟು ಸಮುದಾಯಗಳಿಗೆ ಪ್ರಸ್ತುತ ಇರುವ ಸವಾಲುಗಳ ಕುರಿತಾದ ವಿಶ್ಲೇಷಣೆಯನ್ನು ನಮ್ಮದಾಗಿಸಿಕೊಳ್ಳುವಲ್ಲಿ ಮೇಲಿನ ಅಧ್ಯಯನಗಳು ಸಹಕರಿಸುತ್ತವೆ.

ಈ ಮೇಲಿನ ಪೂರ್ವ ಅಧ್ಯಯನಗಳ ವಿಮರ್ಶೆಗಳಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬುಡಕಟ್ಟು ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ ಮತ್ತು ಸಶಕ್ತೀಕರಣ ಪ್ರಕ್ರಿಯೆಯ ಕುರಿತು ಆಳವಾದ ಅಧ್ಯಯನಗಳಾಗಿಲ್ಲವೆಂದು ತಿಳಿಯಬಹುದು, ಅಲ್ಲದೆ ಈ ಜಿಲ್ಲೆಯ ನಾಲ್ಕು ಬುಡಕಟ್ಟು ಸಮುದಾಯಗಳ ಮಹಿಳೆಯರ ಸಮಾಜೋ ಆರ್ಥಿಕ ಸ್ಥಿತಿ ಮತ್ತು ಸಶಕ್ತೀಕರಣದ ಅಧ್ಯಯನ ಈವರೆಗೆ ನಡೆದಿಲ್ಲವೆಂದು ತಿಳಿಯಬಹುದಾಗಿದೆ. ಆದುದರಿಂದ ಪ್ರಸ್ತುತ ಈ ಮೇಲಿನ ವಿಷಯಗಳ ಕುರಿತು ಅಧ್ಯಯನ ನಡೆಸಲಾಗಿದೆ.

# ಅಧ್ಯಾಯ – ಮೂರು

# ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿ

ಈ ಅಧ್ಯಾಯದಲ್ಲಿ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯ ಅಧ್ಯಯನ ಮಾಡಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯ ಮಾನದಂಡಗಳಾಗಿ ವಿದ್ಯಾರ್ಹತೆ, ಬುಡಕಟ್ಟು ಮಹಿಳೆಯರಿಗೆ ಇತರ ಸಮುದಾಯದ ಜನರೊಂದಿಗಿನ ಸಾಮರಸ್ಯದ ಕುರಿತು, ಬಿಡುವಿನ ವೇಳೆಯ ಚಟುವಟಿಕೆಯ ಕುರಿತು, ಲಿಂಗ ಸಮಾನತೆಯ ಅಭಿಪ್ರಾಯದ ಕುರಿತು, ವಿವಿಧ ಶೈಕ್ಷಣಿಕ ಯೋಜನೆಗಳ ಮಾಹಿತಿಯ ಕುರಿತು, ಮದುವೆಗೆ ಸೂಕ್ತ ವಯಸ್ಸಿನ ಕುರಿತು ಬುಡಕಟ್ಟು ಮಹಿಳೆಯರಿಂದ ಮಾಹಿತಿ ಪಡಕೊಳ್ಳಲಾಗಿದೆ. ಬುಡಕಟ್ಟು ಮಹಿಳೆಯರಲ್ಲಿ ತಮ್ಮ ಮಕ್ಕಳ ಶಿಕ್ಷಣದ ಕುರಿತಾಗಿ ಇರುವ ಭವಿಷ್ಯದ ಆಲೋಚನೆ, ಅವರ ಉದ್ಯೋಗದ ಕುರಿತಾದ ಯೋಚನೆಗಳ ಬಗ್ಗೆ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

ಇದರೊಂದಿಗೆ ಹೆಣ್ಣು ಮಕ್ಕಳಲ್ಲಿನ ದೈಹಿಕ ಬದಲಾವಣೆಗಳ ಬಗ್ಗೆ ಬುಡಕಟ್ಟು ಮಹಿಳೆಯರ ಅರಿವಿನ ಮಟ್ಟದ ಕುರಿತು ಅಧ್ಯಯನ ಮಾಡಲಾಗಿದೆ.

ಬುಡಕಟ್ಟು ಮಹಿಳೆಯರು ಸಂಸಾರ ನಿರ್ವಹಣೆಗೆ ಸತತ ದುಡಿಯುತ್ತಿದ್ದು ದುಡಿಮೆಯ ಹಣದಲ್ಲಿ ಎಷ್ಟರ ಮಟ್ಟಿಗೆ ಆರ್ಥಿಕ ಸ್ವಾತಂತ್ರ್ಯವಿದೆ ಎನ್ನುವುದರ ಕುರಿತಾದ ಮಾಹಿತಿಯೂ ಈ ಅಧ್ಯಯನದಲ್ಲಿದೆ.

ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿ ಗತಿಯ ಬಗ್ಗೆ ವಿಶ್ಲೇಷಿಸಿದಾಗ ಬುಡಕಟ್ಟು ಮಹಿಳೆಯರಲ್ಲಿ ಶಿಕ್ಷಣದ ಮಟ್ಟ ಕಡಿಮೆ ಇರುವುದು ಕಂಡುಬರುತ್ತದೆ. ಹೆಚ್ಚಿನ ಬುಡಕಟ್ಟು ಮಹಿಳೆಯರು ಪ್ರಾಥಮಿಕ ಹಂತದ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾಗಿದ್ದು, ಅನಕ್ಷರಸ್ಥರ ಸಂಖ್ಯೆಯೂ ಅಧಿಕವಿರುವುದು ಅಧ್ಯಯನದಿಂದ ಗಮನಿಸಬಹುದಾಗಿದೆ. ಹೆಚ್ಚಿನ ಬುಡಕಟ್ಟು ಮಹಿಳೆಯರು ಔಪಚಾರಿಕ ಶಿಕ್ಷಣದಿಂದ ವಂಚಿತರಾದರೂ ಅನೌಪಚಾರಿಕ ಶಿಕ್ಷಣವಾಹಿನಿಗಳಿಂದ ಸ್ವಸಹಾಯ ಸಂಘಗಳ ಸದಸ್ಯತ್ವದ ಮೂಲಕ ತಮ್ಮ ದೈನಂದಿನ ಜೀವನಕ್ಕೆ ಅಗತ್ಯವಿರುವ

ಹಲವಾರು ವಿಷಯಗಳ ಕುರಿತಂತೆ ಜ್ಞಾನದ ಮಟ್ಟವನ್ನು ಹೆಚ್ಚಿಸಿಕೊಂಡಿದ್ದಾರೆ. ಎನ್ನುವುದು ಅಧ್ಯಯನದಿಂದ ಸಾಬೀತಾಗಿದೆ.

ಒಟ್ಟಿನಲ್ಲಿ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿ ಗತಿಗಳು ಮಂದಗತಿಯಲ್ಲಿ ಸ್ಥಿತ್ಯಂತರಗೊಳ್ಳುತ್ತಿದೆ. ಅನ್ನುವುದು ಅಧ್ಯಯದಿಂದ ತಿಳಿದುಕೊಳ್ಳಬಹುದಾಗಿದೆ.

**ಕೋಷ್ಟಕ 3.1**

**ಬುಡಕಟ್ಟು ಮಹಿಳೆಯರ ವಯಸ್ಸಿಗೆ ಸಂಬಂಧಿಸಿದ ವಿವರಗಳು**

| ಕ್ರ.ಸಂ | ವಯಸ್ಸು | ಆವೃತಿ | ಶೇ | ಎಕ್ಸ್ (ಮಧ್ಯಬಿಂದು) | ಎಫ್ ಎಕ್ಸ್ |
|---|---|---|---|---|---|
| 1 | 18-28 | 42 | 14 | 23 | 966 |
| 2 | 28-38 | 94 | 31 | 33 | 3102 |
| 3 | 38-48 | 88 | 29 | 43 | 3784 |
| 4 | 48-58 | 50 | 17 | 53 | 2650 |
| 5 | 58 ರ ಮೇಲೆ | 26 | 09 | 63 | 1638 |
| | ಒಟ್ಟು | 300 | 100 | | 12,140 |

ಕೋಷ್ಟಕ ಸಂಖ್ಯೆ 3.1 ಅಧ್ಯಯನಕ್ಕಾಗಿ ಆಯ್ಕೆ ಮಾಡಿದ ಬುಡಕಟ್ಟು ಮಹಿಳೆಯರ ವಯಸ್ಸನ್ನು ಸೂಚಿಸುತ್ತಿದೆ. ಒಟ್ಟು 300(100%) ಬುಡಕಟ್ಟು ಮಹಿಳೆಯರಲ್ಲಿ 42(14%) ಮಹಿಳೆಯರು 18 ರಿಂದ 28 ವಯಸ್ಸಿನವರಾಗಿದ್ದು 94(31%) ಮಹಿಳೆಯರು 38 ರಿಂದ 48 ವಯಸ್ಸಿನವರಾಗಿದ್ದು 88(29%) ಮಹಿಳೆಯರು 28 ರಿಂದ 38 ವಯಸ್ಸಿನವರಾಗಿದ್ದಾರೆ. 50(17%) ಮಹಿಳೆಯರು 48 ರಿಂದ 58 ವಯಸ್ಸಿನವರಾಗಿದ್ದು 26(09%) ಮಹಿಳೆಯರು 58 ವಯಸ್ಸನ್ನು ದಾಟಿದವರಾಗಿದ್ದಾರೆ.

ಬಹುಸಂಖ್ಯಾತ ಬುಡಕಟ್ಟು ಮಹಿಳೆಯರು ಮಧ್ಯವಯಸ್ಕರಾಗಿರುವುದು ಪ್ರಸ್ತುತ ಅಧ್ಯಯನದಲ್ಲಿ ಕಾಣಬಹುದು. ಮಾಹಿತಿದಾರರ ಸರಾಸರಿ ವಯಸ್ಸು 40-46 ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಹದಿನೆಂಟು ವಯಸ್ಸಿಗಿಂತ ಮೊದಲು ವ್ಯಕ್ತಿಗಳನ್ನು ಮಕ್ಕಳು ಎಂದು ಪರಿಗಣಿಸಲಾಗುವುದರಿಂದ ಹಾಗೂ ಈ ವಯಸ್ಸಿನವರಲ್ಲಿ ಪ್ರಬುದ್ಧತೆಯ ಮಟ್ಟವೂ ಕಡಿಮೆಯಿರುವುದರಿಂದ ಹದಿನೆಂಟು ವರುಷ ಮೀರಿದ ಮಹಿಳೆಯರನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಲಾಗಿದೆ.

**ಕೋಷ್ಟಕ ಸಂಖ್ಯೆ 3.2**

**ಬುಡಕಟ್ಟು ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದ ಹಂಚಿಕೆ**

| ಕ್ರ.ಸಂ | ವಿದ್ಯಾರ್ಹತೆ | ಉತ್ತರಗಳು | ಶೇಕಡವಾರು |
|---|---|---|---|
| 1 | 1 – 4 | 47 | 15.67 |
| 2 | 5–7 | 91 | 30.33 |
| 3 | 8–10 | 51 | 17.00 |
| 4 | ಪಿ.ಯು.ಸಿ | 10 | 3.33 |
| 5 | ಡಿಪ್ಲಮೊ | – | – |
| 6 | ಪದವಿ | 03 | 1.00 |
| 7 | ಸ್ನಾತಕೋತ್ತರ | -- | -- |
| 8 | ಅನಕ್ಷರಸ್ಥರು | 98 | 32.67 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.2ರ ಅಂಕಿ ಅಂಶಗಳು ಬುಡಕಟ್ಟು ಮಹಿಳೆಯರ ವಿದ್ಯಾಭ್ಯಾಸದ ಮಟ್ಟವನ್ನು ಬಿಂಬಿಸುತ್ತಿದೆ. ಒಟ್ಟು 300(100%) ಮಹಿಳೆಯರಲ್ಲಿ 47(15.67%) ಮಹಿಳೆಯರು 1 ರಿಂದ 4ನೇ ತರಗತಿಯ ವರೆಗೆ ಓದಿದ್ದು 91(30.33%) ಮಹಿಳೆಯರು ಐದ ರಿಂದ 7ರವರೆಗೆ ವಿದ್ಯಾಭ್ಯಾಸ ಹೊಂದಿದ್ದು 51(17.00%) ಮಹಿಳೆಯರು 8 ರಿಂದ 10ರವರೆಗೆ ವ್ಯಾಸಂಗ ಮಾಡಿದ್ದು 10 ಮಹಿಳೆಯರು (3.33%) ಪಿ.ಯು.ಸಿ ವಿದ್ಯಾಭ್ಯಾಸ ಮುಗಿಸಿದ್ದಾರೆ. 3(1.00%) ಮಹಿಳೆಯರು ಮಾತ್ರವೇ ಪದವಿ ಹಂತದ ವಿದ್ಯಾಭ್ಯಾಸ ಪಡೆದಿದ್ದು ಒಟ್ಟು 300 ಬುಡಕಟ್ಟು ಮಹಿಳೆಯರಲ್ಲಿ ಅತ್ಯಧಿಕ ಸಂಖ್ಯೆಯ ಅಂದರೆ 98(32.67) ಅನಕ್ಷರಸ್ಥರಿರುವುದು. ಅಧ್ಯಯನದಿಂದ ತಿಳಿದುಬಂದಿದೆ.

ಬುಡಕಟ್ಟು ಮಹಿಳೆಯರ ವಿದ್ಯಾಭ್ಯಾಸದ ಮಟ್ಟವನ್ನು ವಿಶ್ಲೇಷಿಸಿದರೆ ಹೆಚ್ಚಿನ ಅಂದರೆ 91 (30.33%) ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಹಾಗೂ ಯಾವೊಬ್ಬ ಮಹಿಳೆಯೂ ಸ್ನಾತಕೋತ್ತರ ವಿದ್ಯಾಭ್ಯಾಸ ಪಡೆದಿಲ್ಲದಿರುವುದು ಅಧ್ಯಯನದಿಂದ ತಿಳಿದುಬಂದಿದ್ದು ಬಡತನ, ಮಾರ್ಗದರ್ಶನ, ಅರಿವಿನ ಕೊರತೆ, ಹೆತ್ತವರ ಅನಕ್ಷರತೆ

ಬುಡಕಟ್ಟು ಮಹಿಳೆಯರ ವಿದ್ಯಾಭ್ಯಾಸ ಮಟ್ಟವನ್ನು ಕುಂಠಿತಗೊಳಸಿವೆ ಎನ್ನಬಹುದು. ಈ ವಿಚಾರದ ಕುರಿತು ಬುಡಕಟ್ಟು ಮಹಿಳೆಯರು ಬದುಕಲು ಕಷ್ಟವಾಗಿದ್ದ ಕಾಲದಲ್ಲಿ ವಿದ್ಯಾಭ್ಯಾಸದ ಕುರಿತು ಯೋಚಿಸಲೂ ಸಾಧ್ಯವಿರಲಿಲ್ಲ. ಅಂತಹ ಬಡತನವಿತ್ತೆಂದು ಅಭಿಪ್ರಾಯಪಡುತ್ತಾರೆ. ಔಪಚಾರಿಕ ಶಿಕ್ಷಣದ ಅವಕಾಶ ಸಿಗದ ಮಹಿಳೆಯರಿಗೆ ಸಮುದಾಯದಲ್ಲಿ ಅನೌಪಚಾರಿಕ ಶಿಕ್ಷಣದ ಅಗತ್ಯವಿದ್ದು ಈ ಕುರಿತು ಬುಡಕಟ್ಟು ಮಹಿಳೆಯರಲ್ಲಿ ಪ್ರೇರೇಪಣೆಯ ಕೊರತೆ ಕಾಣಬಹುದು.

ಬುಡಕಟ್ಟು ಶಿಕ್ಷಣದ ಕುರಿತಾದ ಅಧ್ಯಯನದಲ್ಲಿ ಯಶೋಧ ಎಸ್. ಅವರು 2001ರ ಜನಗಣತಿಯ ಪ್ರಕಾರ ಒಟ್ಟು ದೇಶದ ಬುಡಕಟ್ಟು ಅನಕ್ಷರಸ್ಥರು 47.10% ಎಂದು ಉಲ್ಲೇಖಿಸಿ ಬುಡಕಟ್ಟು ಜನರಿಗೆ ತಮ್ಮ ಅಸ್ತಿತ್ವವನ್ನು ಉಳಸಿಕೊಳ್ಳಲು ಶಿಕ್ಷಣದ ಅಗತ್ಯವಿದೆ. ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳದ್ದರೂ ಬುಡಕಟ್ಟು ಜನರ ನಿರಕ್ಷರತೆಗೆ ಹಲವಾರು ಕಾರಣಗಳವೆ ಎಂದಿದ್ದಾರೆ.

ಅನೇಕ ಬುಡಕಟ್ಟುಗಳು ಇಂದೂ ದಟ್ಟ ಕಾಡುಗಳಲ್ಲಿ ವಾಸಮಾಡುತ್ತಿದ್ದು ಇಲ್ಲಿ ಶಾಲಾ ವ್ಯವಸ್ಥೆ ಇಲ್ಲದಿರುವುದು, ಪ್ರತ್ಯೇಕವಾಗಿ ವಾಸ ಮಾಡುವುದರಿಂದ ಸರ್ಕಾರದ ಶೈಕ್ಷಣಿಕ ಕಾರ್ಯಕ್ರಮಗಳ ಕುರಿತು ಅರಿವು ಇಲ್ಲದಿರುವುದು, ಬುಡಕಟ್ಟು ಜನರ ಬಡತನ, ಮತ್ತು ಲಿಪಿ ಇಲ್ಲದ ಅವರ ಭಾಷೆ, ಬುಡಕಟ್ಟು ಜನರ ಜೀವನ ವಿಧಾನ ಮತ್ತು ಸಂಸ್ಕೃತಿಯ ಅರಿವಿಲ್ಲದೇ ಇರುವ ಶಿಕ್ಷಕರ ನೇಮಕಾತಿ, ಬುಡಕಟ್ಟು ಮಕ್ಕಳ ಹೆತ್ತವರ ಅನಕ್ಷರತೆ, ಮನೆಯಲ್ಲಿ ಪೂರಕ ವಾತಾವರಣ ಇಲ್ಲದೇ ಇರುವುದು, ಆಶ್ರಮ ಶಾಲೆಗಳ ಭ್ರಷ್ಟಾಚಾರ, ಕ್ರಿಸ್ತ ಮಿಷನರಿಗಳು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳಸುತ್ತಿದ್ದಾರೆ ಎನ್ನುವ ಭೀತಿ ಮುಖ್ಯವಾದ ಕಾರಣಗಳಾಗಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. (2006: ಪು.ಸಂ.72 ರಿಂದ 77)

ಆದ್ದರಿಂದ ಸರ್ಕಾರ ಬುಡಕಟ್ಟು ಪಟ್ಟಿಯನ್ನು ವಿಸ್ತರಿಸುವ ಬದಲು ನಿಜವಾದ ಬುಡಕಟ್ಟು ಜನರನ್ನು ಗುರುತಿಸಿ, ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪರಿಸ್ಥಿತಿ ವಿಚಾರಿಸುವ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ರೂಪಿಸಬೇಕೆಂದು ಲೇಖಕರು ಅಭಿಪ್ರಾಯ ಅರುಹಿದ್ದಾರೆ.

## ಕೋಷ್ಟಕ ಸಂಖ್ಯೆ - 3.3

## ಬುಡಕಟ್ಟು ಮಹಿಳೆಯರ ವೈವಾಹಿಕ ಸ್ಥಾನಮಾನದ ಕುರಿತಾದ ವಿವರಣೆ

| ಕ್ರ.ಸಂ | ಉತ್ತರಗಳು | ಸಂಖ್ಯೆ | ಶೇಕಡವಾರು |
|---|---|---|---|
| 1 | ವಿವಾಹಿತೆ | 265 | 88.33 |
| 2 | ಅವಿವಾಹಿತೆ | 08 | 2.67 |
| 3 | ವಿಚ್ಛೇದಿತೆ | 00 | 00 |
| 4 | ಬೇರ್ಪಟ್ಟವರು | 04 | 1.33 |
| 5 | ವಿಧವೆ | 23 | 7.67 |
| | ಒಟ್ಟು | 300 | 100.00 |

ಈ ಮೇಲಿನ ಕೋಷ್ಟಕ ಸಂಖ್ಯೆ 3.3 ಬುಡಕಟ್ಟು ಮಹಿಳೆಯರ ವೈವಾಹಿಕ ಸ್ಥಾನಮಾನದ ಕುರಿತಾದ ಅಂಕಿಅಂಶಗಳನ್ನು ತೋರಿಸುತ್ತದೆ. ಒಟ್ಟು 300(100%) ಮಹಿಳೆಯರಲ್ಲಿ 265(88.33%) ರಷ್ಟು ವಿವಾಹಿತೆ ಮಹಿಳೆಯರಾಗಿದ್ದು 8(2.67%) ಮಹಿಳೆಯರು ಅವಿವಾಹಿತೆಯರಾಗಿದ್ದು 4(1.33%) ಗಂಡನಿಂದ ಬೇರ್ಪಟ್ಟವರಾಗಿದ್ದು 23(7.67%)ರಷ್ಟು ಮಹಿಳೆಯರು ವಿಧವೆಯರಾಗಿದ್ದಾರೆ.

ವಿವಾಹಿತ ಮಹಿಳೆಯರಲ್ಲಿ ಕುಟುಂಬ ಜೀವನದ ಕುರಿತಾದ ಜ್ಞಾನ ಅಧಿಕವಾಗಿರುತ್ತದೆ. ಅಲ್ಲದೆ ತವರು ಮನೆ ಮತ್ತು ಪತಿಯ ಮನೆಯೆರಡರಲ್ಲಿ ಜವಾಬ್ದಾರಿ ನಿರ್ವಹಿಸುವ ಕೌಶಲ್ಯಗಳು, ಸಂಬಂಧಿಸಿದಂತೆ ಸ್ಥಾನಮಾನಗಳು ಹಾಗೂ ನಿರ್ಧಾರ ತೆಗೆದುಕೊಳ್ಳುವ ಹಕ್ಕುಗಳ ಕುರಿತಂತೆ ಹೆಚ್ಚಿನ ಮಾಹಿತಿ ದೊರೆಯಬಹುದೆಂದು ಗ್ರಹಿಕೆಯಿಂದ ವಿವಾಹಿತ ಮಹಿಳೆಯರನ್ನೇ ಮಾಹಿತಿದಾರರನ್ನಾಗಿ ಆಯ್ಕೆ ಮಾಡಿ ದತ್ತಾಂಶವನ್ನು ಅವಲೋಕಿಸಲಾಗಿದೆ.

ಒಟ್ಟು 300 ಬುಡಕಟ್ಟು ಮಹಿಳೆಯರಲ್ಲಿ 23 (7.67%) ವಿಧವೆಯರಿದ್ದು, ಪ್ರಸ್ತುತ ಈ ಕುಟುಂಬಗಳಲ್ಲಿ ಮಹಿಳೆಯರೇ ಮನೆಯ ಕುರಿತಾದ ಒಟ್ಟು ಜವಾಬ್ದಾರಿಗಳನ್ನು ನಿರ್ವಹಿಸುತ್ತಿರುವುದು ಅಧ್ಯಯನದಿಂದ ಸ್ಪಷ್ಟವಾಗಿದೆ. ಹಾಗೂ ಒಟ್ಟು ನಾಲ್ಕು ಮಹಿಳೆಯರು (1.33%) ಸರಳ ಕಾರಣಗಳಿಂದ ಗಂಡನಿಂದ ಬೇರ್ಪಟ್ಟವರಾಗಿರುತ್ತಾರೆ.

## ಕೋಷ್ಟಕ ಸಂಖ್ಯೆ - 3.4

## ಬುಡಕಟ್ಟು ಮಹಿಳೆಯರ ಉದ್ಯೋಗಕ್ಕೆ ಸಂಬಂಧಿಸಿದ ಹಂಚಿಕೆ

| ಕ್ರ.ಸಂ | ಉದ್ಯೋಗ | ಸಂಖ್ಯೆ | ಶೇಕಡವಾರು |
|---|---|---|---|
| 1 | ಬೀಡಿ | 174 | 58.00 |
| 2 | ಕೂಲಿ | 45 | 15.00 |
| 3 | ಸ್ವಂತ ಬೇಸಾಯ | 15 | 5.00 |
| 4 | ಖಾಸಗಿ ಉದ್ಯೋಗ | 31 | 10.34 |
| 5 | ಸರಕಾರಿ ಉದ್ಯೋಗ | 04 | 01.33 |
| 6 | ಸ್ವ ಉದ್ಯೋಗ | 07 | 2.33 |
| 7 | ಗೃಹಕೃತ್ಯ | 24 | 8.00 |
| 8 | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.4ರಲ್ಲಿ ಬುಡಕಟ್ಟು ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡಿರುವ ಉದ್ಯೋಗದ ಕುರಿತು ಮಾಹಿತಿ ಇದೆ. ಒಟ್ಟು 300 (100%) ಬುಡಕಟ್ಟು ಮಹಿಳೆಯರಲ್ಲಿ 174(58%) ಮಹಿಳೆಯರು ಬೀಡಿಯನ್ನು ಅವಲಂಬಿಸಿದ್ದು, 45(15.00%) ಮಹಿಳೆಯರು ಕೂಲಿ ಉದ್ಯೋಗದಲ್ಲಿದ್ದು, 15(5.00%) ಮಹಿಳೆಯರು ಸ್ವಂತ ಬೇಸಾಯ 31(10.34%) ಮಹಿಳೆಯರು ಖಾಸಗಿ ಉದ್ಯೋಗ (ಗೇರು ಬೀಜದ ಕಾರ್ಖಾನೆ, ಆಸ್ಪತ್ರೆಯಲ್ಲಿ ಸ್ವಚ್ಛತೆ) ಮಾಡುತ್ತಿದ್ದು 04(1.33%) ಮಹಿಳೆಯರು ಸರಕಾರಿ (ಅಂಗನವಾಡಿ ಕಾರ್ಯಕರ್ತೆ) ಪ್ರಾಯೋಜನೆಯಲ್ಲಿ, 7(2.33%) ಮಹಿಳೆಯರು ಸ್ವಂತ ಉದ್ಯೋಗ (ಮಲ್ಲಿಗೆ, ಕೃಷಿ, ಹೈನುಗಾರಿಕೆ, ಬುಟ್ಟಿ ತಯಾರಿಕೆ) ದಲ್ಲಿ ತೊಡಗಿಸಿಕೊಂಡಿದ್ದಾರೆ. ಹಾಗೂ 24 (8.00%) ಮಹಿಳೆಯರು ಗೃಹಕೃತ್ಯದಲ್ಲಿ ತೊಡಗಿಸಿಕೊಂಡಿದ್ದಾರೆ.

ದಕ್ಷಿಣ ಕನ್ನಡದಲ್ಲಿ ಬೀಡಿ ಉದ್ಯಮ ಅದೆಷ್ಟೋ ಬುಡಕಟ್ಟು ಮಹಿಳೆಯರ ಕುಟುಂಬದ ಜೀವನಾಧಾರ ಎಂಬುದು ಅಧ್ಯಯನದಿಂದ ತಿಳಿದುಬರುತ್ತದೆ. ಹೆಚ್ಚಿನ ಶಿಕ್ಷಣದ ಅಗತ್ಯವಿಲ್ಲದೇ ಇದ್ದು ಸರಳ ಕೌಶಲ್ಯದ ನೆರವು ಬೇಕಾಗಿರುವುದರಿಂದ ಗೃಹಾಧಾರಿತ ಕಸುಬಾಗಿರುವುದರಿಂದ ಅನೇಕ ಬುಡಕಟ್ಟು ಮಹಿಳೆಯರು ಬೀಡಿಯನ್ನು ಕಸುಬಾಗಿಸಿಕೊಂಡಿದ್ದಾರೆ. ಆದರೆ ಬೀಡಿ ಕಸುಬಿನಿಂದ ಗಳಿಸಿದ ಆದಾಯವು ಬಹಳ ಕಡಿಮೆಯಾಗಿದ್ದು ಜೀವನ ನಿರ್ವಹಣೆಗೆ ಸಾಲುವುದಿಲ್ಲ ಎಂಬ ಅಂಶವನ್ನು ಪ್ರಸ್ತುತ ಅಧ್ಯಯನವು ಸಾಬೀತುಪಡಿಸುತ್ತದೆ.

ಕೃಷಿ ಕೂಲಿಯನ್ನು ಅವಲಂಬಿಸಿದ ಬುಡಕಟ್ಟು ಮಹಿಳೆಯರು ತಮ್ಮ ಮನೆಯ ಆಸುಪಾಸಿನಲ್ಲಿ ತೋಟದ ಕೆಲಸಕ್ಕೆ ಹಾಗೂ ಕೃಷಿ ಸಂಬಂಧಿತ ಕೆಲಸಕ್ಕೆ ದಿನಗೂಲಿಯನ್ನು ಪಡೆಯುತ್ತಾರೆ.

ಶಿಕ್ಷಣದ ಕೊರತೆ, ಅಗತ್ಯ ಕೌಶಲ್ಯದ ಕೊರತೆ, ಸ್ವಉದ್ಯೋಗದ ಮಾಹಿತಿಯ ಕೊರತೆ, ಬಂಡವಾಳದ ಕೊರತೆ, ಸ್ವ ಅರಿವಿನ ಕೊರತೆ ಇವೆಲ್ಲವೂ ಬುಡಕಟ್ಟು ಮಹಿಳೆಯರ ಉದ್ಯೋಗ ಅವಕಾಶಗಳಿಗೆ ತಡೆಯಾಗಿವೆ. ಹಾಗೂ ಆರ್ಥಿಕ ಸಬಲೀಕರಣಕ್ಕೆ ಮಾರಕವಾಗಿರುವ ಅಂಶವನ್ನು ಕಂಡುಕೊಳ್ಳಲಾಗಿದೆ.

ಮಹಿಳಾ ಸಶಕ್ತೀಕರಣದ ಬಹುಸ್ತರದ ಮಾರ್ಗಗಳಲ್ಲಿ ಆರ್ಥಿಕ ಮಾರ್ಗವೂ ಒಂದಾಗಿದೆ. ಇಲ್ಲಿ ಮಹಿಳೆಯರ ದುಡಿಮೆಯನ್ನು ಗುರುತಿಸಿ ಪುನರ್ ಮೌಲ್ಯಗೊಳಸಬೇಕಾಗುತ್ತದೆ. ಮಹಿಳೆಯರ ಮನೆಕೆಲಸಕ್ಕೆ ವೇತನವಿಲ್ಲದಿರುವುದು ಮತ್ತು ಹೊರಗೆ ಅಸಂಘಟಿತ ಕ್ಷೇತ್ರದಲ್ಲಿ ಸರಿಯಾದ ವೇತನವಿಲ್ಲದೇ ಇರುವುದು ಅವರ ಆರ್ಥಿಕ ಪರಾಧೀನತೆಗೆ ಮೂಲಕಾರಣವಾಗಿದೆ. ಶಿಕ್ಷಣ, ಕೌಶಲ್ಯ ಮತ್ತು ತರಬೇತಿಯ ಕೊರತೆ ಹಾಗೂ ಸಂಪನ್ಮೂಲಗಳ ಮೇಲೆ ನಿಯಂತ್ರಣವಿಲ್ಲದೆ ಅವರು  ಆರ್ಥಿಕ ಅಭದ್ರತೆಗೆ ಒಳಗಾಗಿದ್ದಾರೆ. ಸಂಪನ್ಮೂಲಗಳ ಲಭ್ಯತೆ ಮತ್ತು ನಿಯಂತ್ರಣ, ಕೌಶಲ್ಯ ಅಭಿವೃದ್ಧಿ, ಹಣಕಾಸಿನ ಸಹಾಯದ ಮೂಲಕ ಅವರನ್ನು ಆರ್ಥಿಕವಾಗಿ ಸಶಕ್ತಗೊಳಸಬೇಕಾಗಿದೆ. (ಹೇಮಲತಾ ಎಚ್ ಎಂ 2003: ಪು.ಸಂ 15 ಮತ್ತು 16)

ಬುಡಕಟ್ಟುಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ-ಗತಿಗಳ ಕುರಿತಾದ ಅಧ್ಯಯನದಲ್ಲಿ ಮಹಾದೇವ ಸ್ವಾಮಿ ಅವರು ಹೀಗೆ ಹೇಳಿದ್ದಾರೆ. "ಬುಡಕಟ್ಟಿನವರು ತೀರಾ ಆರ್ಥಿಕ ಸಂಕಷ್ಟಗಳಿಗೆ ಒಳಗಾಗಿದ್ದಾರೆ. ಕುಲಕಸುಬುಗಳಾಗಿದ್ದ ಬುಟ್ಟಿ, ಮೊರ, ಚಾಪೆ, ಹೀಗೆ ಅನೇಕ ದಿನಬಳಕೆಯ ವಸ್ತು ತಯಾರಿಸಿ, ಅಲ್ಪ ಆದಾಯದಿಂದ ಹಿಂದೆ ಜೀವನ ನಡೆಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಯುಗದ ಪ್ರಾರಂಭದ ನಂತರ ಕುಲಕಸುಬಿಗೆ ಕುತ್ತು ಬಂದೊದಗಿದ್ದು ಆರ್ಥಿಕತೆಯಲ್ಲಿ ಸದೃಢವಾಗಿ ಜೀವನ ನಡೆಸಲು ಶಕ್ತರಾಗಿಲ್ಲ ಎಂದು ತಿಳಿಯಬಹುದು. ಅಲ್ಲದೆ ಹಿಂದೆ ಇವರು ವಾಸಿಸುತ್ತಿದ್ದ ಕಾಡುಗಳು ಅಭಯಾರಣ್ಯಗಳಾಗಿ ಪರಿವರ್ತನೆಯಾಗಿ ಕಾಡುತ್ಪನ್ನಗಳ ಸಂಗ್ರಹಣೆಯನ್ನು ನಿಷೇಧಿಸಿರುವುದು ಆರ್ಥಿಕ ಹಿನ್ನಡೆಗೆ ಮತ್ತೊಂದು ಕಾರಣವಾಗಿದೆ" ಎಂದು ವಿಷಾದ ವ್ಯಕ್ತಪಡಿಸುತ್ತಾರೆ (2006: ಪು.ಸಂ 68 ರಿಂದ 70)

## ಕೋಷ್ಟಕ ಸಂಖ್ಯೆ 3.5

## ಬುಡಕಟ್ಟು ಮಹಿಳೆ ಮತ್ತು ಇತರ ಸಮುದಾಯಗಳೊಂದಿಗಿನ ಸಾಮಾಜಿಕ ಸಾಮರಸ್ಯದ ಕುರಿತಾದ ವಿವರಣೆ

| ಕ್ರ.ಸಂ | ಉತ್ತರಗಳು | ಸಂಖ್ಯೆ | ಶೇಕಡವಾರು |
|---|---|---|---|
| 1 | ಸಾಮರಸ್ಯ | 280 | 93.33 |
| 2 | ಸಾಮರಸ್ಯದ ಕೊರತೆ | 20 | 6.67 |
| 3 | ಒಟ್ಟು | 300 | 100.00 |

ಈ ಮೇಲಿನ ಕೋಷ್ಟಕ ಸಂಖ್ಯೆ 3.5 ಬುಡಕಟ್ಟು ಮಹಿಳೆಗೆ ಇತರ ಸಮುದಾಯಗಳೊಂದಿಗಿನ ಸಾಮಾಜಿಕ ಸಂಬಂಧದ ಬಗ್ಗೆ ಇರುವ ಅಭಿಪ್ರಾಯವನ್ನು ಸೂಚಿಸುತ್ತದೆ. ಒಟ್ಟು 300 ಮಹಿಳೆಯರಲ್ಲಿ 280 (93.33%) ಮಹಿಳೆಯರು ತಮ್ಮ ಸುತ್ತಲಿರುವ ಇತರ ಸಮುದಾಯದ ಮಹಿಳೆಯರೊಂದಿಗೆ ಅನ್ಯೋನ್ಯ ಸಂಬಂಧವಿರುವುದಾಗಿ ಒಪ್ಪಿಕೊಂಡಿದ್ದಾರೆ. ಆದರೆ 20(6.67) ಮಹಿಳೆಯರು ಇತರ ಸಮುದಾಯದ ಮಹಿಳೆಯರೊಂದಿಗೆ ಸೌಹಾರ್ದಯುತ ಸಂಬಂಧವಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬಹುಸಂಖ್ಯಾತ ಬುಡಕಟ್ಟು ಮಹಿಳೆಯರು ಇಂದಿನ ದಿನಗಳಲ್ಲಿ ಇತರ ಸಮುದಾಯದ ಮಹಿಳೆಯರೊಂದಿಗೆ ಅನ್ಯೋನ್ಯವಾಗಿ ಬೆರೆಯುತ್ತಾರೆ. ಮತ್ತು ತಮ್ಮ ಮನೆಯಲ್ಲಿ ನಡೆಯುವ ಸಂತೋಷಕೂಟಗಳಿಗೆ ಇತರ ಸಮುದಾಯದವರನ್ನು ಆಹ್ವಾನಿಸುತ್ತಾರೆ. ಇತರ ಸಮುದಾಯದ ಮಹಿಳೆಯರು ಹಬ್ಬ – ಹರಿದಿನಗಳಲ್ಲಿ ಭಾಗವಹಿಸಿದಾಗ ನಮಗೂ ಸಂತೋಷವಾಗುತ್ತದೆ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ. ವಿಶೇಷವಾಗಿ ಕುಡುಬಿಯರ ಹೋಳಿ ಹಬ್ಬದ ಗುಮ್ಮಟೆ(ಸಿದ್ದಕಟ್ಟೆ) ನೃತ್ಯದ ಕಾರ್ಯಕ್ರಮದಲ್ಲಿ ಕುಡುಬಿಯರಲ್ಲದ ಅನೇಕ ಮಹಿಳೆಯರು ಭಾಗವಹಿಸಿರುವುದು ಗಮನಾರ್ಹವಾಗಿದೆ.

ಪೇಟೆಗೆ ಹತ್ತಿರವಿರುವ ಬುಡಕಟ್ಟು ಸಮುದಾಯದ ಮಹಿಳೆಯರು ಇತರ ಜಾತಿಯ ಮಹಿಳೆಯರೊಂದಿಗೆ ಆತ್ಮೀಯವಾಗಿ ಬೆರೆಯುತ್ತಾರೆ. ಉರ್ವ ಮಾರಿಗುಡಿ ಪ್ರದೇಶದ (ಮಂಗಳೂರು ತಾಲೂಕು) ಕೊರಗ ಮಹಿಳೆಯರನ್ನು ಇಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಉಳಿದಂತೆ ಗ್ರಾಮೀಣ ಪ್ರದೇಶದ ಕೊರಗ ಮಹಿಳೆಯರಿಗೂ ಇತರ ಜಾತಿಯ ಮಹಿಳೆಯರಿಗೂ ಮಾತುಕತೆಗಳು ನಡೆಯುವುದಾದರೂ ಕೊರಗರ ಮನೆಯೊಳಗೆ ಬಂದು ಮಾತುಕತೆ ನಡೆಸುವರೆ, ಆತ್ಮೀಯ ಸಂಪರ್ಕವಿಲ್ಲವೆಂದು ಅಧ್ಯಯನದಿಂದ ತಿಳಿದುಬಂದಿದೆ. ಒಟ್ಟಿನಲ್ಲಿ ಶಿಕ್ಷಣ, ಸ್ವಸಾಹಯ ಸಂಘಗಳ ಅನುಭವಗಳು, ಮಾಧ್ಯಮಗಳ

ಪ್ರಭಾವವು ಬುಡಕಟ್ಟು ಮಹಿಳೆಯರನ್ನು ಇತರ ಸಮುದಾಯದ ಮಹಿಳೆಯರೊಂದಿಗೆ ಸಾಮಾಜಿಕವಾಗಿ ಬೆರೆಯುವಂತೆ ಮಾಡಿದೆ ಎನ್ನಬಹುದು.

**ಕೋಷ್ಟಕ ಸಂಖ್ಯೆ 3.6**

**ಬುಡಕಟ್ಟು ಮಹಿಳೆ ಮತ್ತು ಇತರ ಮಹಿಳೆಯರೊಂದಿಗಿನ ಭಿನ್ನಾಭಿಪ್ರಾಯದ ಕುರಿತಾದ ಹಂಚಿಕೆ**

| ಕ್ರ.ಸಂ | ಅಭಿಪ್ರಾಯ | ಸಂಖ್ಯೆ | ಶೇಕಡವಾರು |
|---|---|---|---|
| 1 | ಭಿನ್ನಾಭಿಪ್ರಾಯವಿದೆ | 27 | 9.00 |
| 2 | ಭಿನ್ನಾಭಿಪ್ರಾಯವಿಲ್ಲ | 273 | 91.00 |
| 3 | ಒಟ್ಟು | 300 | 100.00 |

ಬುಡಕಟ್ಟು ಮತ್ತು ಇತರ ಸಮುದಾಯದ ಮಹಿಳೆಯರೊಂದಿಗೆ ನಡೆಯುವ ಭಿನ್ನಾಭಿಪ್ರಾಯದ ಕುರಿತಾದ ಅಂಕಿ ಅಂಶಗಳನ್ನು ಈ ಮೇಲಿನ ಕೋಷ್ಟಕ ಸಂಖ್ಯೆ 3.6 ಬಿಂಬಿಸುತ್ತದೆ. ಒಟ್ಟು 300(100%) ಮಹಿಳೆಯರಲ್ಲಿ 27(9%) ಮಹಿಳೆಯರು ತಮಗೆ ನೆರೆಹೊರೆಯ ಇತರ ಸಮುದಾಯದವರೊಂದಿಗೆ ಭಿನ್ನಾಭಿಪ್ರಾಯವೇರ್ಪಟ್ಟಿದೆ ಎಂದು ನೇರವಾಗಿ ಅಭಿಪ್ರಾಯ ಪಡುತ್ತಾರೆ. ಆದರೆ 273(91%) ಮಹಿಳೆಯರು ಇದುವರೆಗೆ ನಮ್ಮೊಳಗೆ ಯಾವುದೇ ರೀತಿಯ ಭಿನ್ನಾಭಿಪ್ರಾಯವೇರ್ಪಟ್ಟಿಲ್ಲ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ನೆರೆಹೊರೆಯವರಲ್ಲಿ ಅಕ್ಕ-ಪಕ್ಕ ಮನೆಗಳಿದ್ದಾಗ ಸರಳ ವಿಷಯಗಳಿಗೂ ಕಲಹ, ಭಿನ್ನಾಭಿಪ್ರಾಯ ಉಂಟಾಗುವುದು ಸಹಜ. ಮಕ್ಕಳೊಂದಿಗಿನ ಜಗಳಗಳು, ಮನೆಯ ಜಾಗದ ಬೇಲಿಯ ವಿಷಯದಲ್ಲಿ, ಸಾಕುಪ್ರಾಣಿಗಳ ವಿಷಯದಲ್ಲಿ, ಹಣ ಸಾಲ ಪಡೆದ ವಿಷಯದಲ್ಲಿ ಈ ಭಿನ್ನಾಭಿಪ್ರಾಯವೇರ್ಪಟ್ಟಿದ್ದು ಎನ್ನುವ ಕಾರಣಗಳು ಸ್ಪಷ್ಟವಾಗಿವೆ.

ಮೂಲತಃ ಬುಡಕಟ್ಟು ಮಹಿಳೆಯರು ಬಹಳ ಸಾಧು ಸ್ವಭಾವ ದವರಾಗಿರುವುದರಿಂದ ಗಂಭೀರವಾದ ಭಿನ್ನಾಭಿಪ್ರಾಯಗಳಲ್ಲಿ ತೊಡಗುವುದಿಲ್ಲ. ಎಂಬ ಅಂಶ ಅಧ್ಯಯನದಿಂದ ದೃಢಪಟ್ಟಿದೆ.

ಹೆಚ್ಚಿನ ನಾಲ್ಕು ಬುಡಕಟ್ಟುಗಳು ತಮ್ಮದೇ ಗುಂಪಿನ ನಡುವೆಯೇ ವಾಸ ಮಾಡುವುದರಿಂದ ಇತರ ಸಮುದಾಯದೊಂದಿಗೆ ಹೆಚ್ಚಾಗಿ ಔಪಚಾರಿಕ ಮಾತುಕತೆಗಳೇ ನಡೆಯುವುದರಿಂದ ಭಿನ್ನಾಭಿಪ್ರಾಯಗಳು ಅಥವಾ ಮನಸ್ತಾಪಗಳು ನಡೆಯುವುದು ಬಹಳ ಕಡಿಮೆ. ಬುಡಕಟ್ಟು ಮಹಿಳೆಯರದ್ದೇ ಮಾತುಗಳಲ್ಲಿ ಹೇಳುವುದಾದರೆ ನಮಗೆಷ್ಟು

ಕೆಲಸವಿದೆಯೇ ಅಷ್ಟು ಮಾತ್ರ ಸಂವಹನ ನಡೆಸುತ್ತೇವೆ ಎಂಬುದು ಹಾಗೂ ಬುಡಕಟ್ಟು ಮಹಿಳೆಯರು ಗ್ರಾಮೀಣ ಸಾಮಾಜಿಕ ಸಮುದಾಯ ಬದುಕಿನೊಂದಿಗೆ ಇರುವುದರಿಂದ ಮನಸ್ತಾಪಗಳಿಗೆ ಅವಕಾಶ ಕೊಡುವುದು ಕಡಿಮೆ ಎಂಬ ಅಂಶವನ್ನು ಕಂಡುಕೊಳ್ಳಲಾಗಿದೆ.

## ಕೋಷ್ಟಕ ಸಂಖ್ಯೆ 3.7
## ಬುಡಕಟ್ಟು ಮಹಿಳೆಯರು ಬಿಡುವಿನ ವೇಳೆಯನ್ನು ಕಳೆಯುವರೇ ತೊಡಗಿಸಿಕೊಂಡಿರುವ ಚಟುವಟಿಕೆಗಳ ಕುರಿತಾದ ವಿವರಣೆ

| ಕ್ರ.ಸಂ | ಚಟುವಟಿಕೆಗಳು | ಒಟ್ಟು ಮಹಿಳೆಯರು | ಶೇಕಡವಾರು |
|---|---|---|---|
| 1 | ಟಿ.ವಿ | 95 | 31.67 |
| 2 | ರೇಡಿಯೊ | 05 | 1.67 |
| 3 | ಹರಟೆ | 26 | 8.67 |
| 4 | ಇತರ ಮನೆ ಬೇಟಿ | 23 | 7.67 |
| 5 | ಪತ್ರಿಕೆ ಓದುವುದು | 07 | 2.53 |
| 6 | ಗುಡಿಕೈಗಾರಿಕೆ | 02 | 0.66 |
| 7 | ಮನೆಕೆಲಸ | 140 | 46.67 |
| 8 | ಇತರ | 02 | 0.44 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.7ರಲ್ಲಿನ ಅಂಕಿಅಂಶಗಳು ಬುಡಕಟ್ಟು ಮಹಿಳೆಯರ ಬಿಡುವಿನ ವೇಳೆಯ ಚಟುವಟಿಕೆಗಳನ್ನು ಸೂಚಿಸುತ್ತವೆ. ಒಟ್ಟು 300ರಲ್ಲಿ 95(31.67%) ಮಹಿಳೆಯರು ಬಿಡುವಿನ ವೇಳೆ ಟಿ.ವಿ ವೀಕ್ಷಣೆಯಲ್ಲಿ, 05(1.67%) ಮಹಿಳೆಯರು ರೇಡಿಯೊ ಆಲಿಸುವಿಕೆಯಲ್ಲಿ, 26(8.67%) ಮಹಿಳೆಯರು ಹರಟೆಯಲ್ಲಿ, 23(7.67%) ಮಹಿಳೆಯರು ಇತರ ಮನೆ ಬೇಟಿಯಲ್ಲಿ, 7(2.53%) ಮಹಿಳೆಯರು ಪತ್ರಿಕೆ ಓದುವುದರಲ್ಲಿ, 02(0.66%) ಮಹಿಳೆಯರು ಗುಡಿಕೈಗಾರಿಕೆ, (ಬುಟ್ಟಿ ಹೆಣೆಯುವುದರಲ್ಲಿ) ಹಾಗೂ 140 (46.67%) ಮಹಿಳೆಯರು ಮನೆಕೆಲಸದಲ್ಲಿ ಮತ್ತು 02 (0.44%) ಮಹಿಳೆಯರು ಇತರ (ಕೃಷಿ) ಕೆಲಸಗಳಲ್ಲಿ ತೊಡಗಿ ತಮ್ಮ ಬಿಡುವಿನ ವೇಳೆಯನ್ನು ಕಳೆಯುತ್ತಾರೆ.

ಮುಖ್ಯವಾಗಿ ಬುಡಕಟ್ಟು ಮಹಿಳೆಯರು ಅರೆ ಉದ್ಯೋಗವಾದ ಬೀಡಿ ಉದ್ಯಮವನ್ನು ಅವಲಂಬಿಸಿರುವುದರಿಂದ ಬೆಳಗಿನ ಹೊತ್ತು ಮನೆಯ ಒಳಗಿನ ಕೆಲಸಗಳನ್ನು ಮುಗಿಸಿ ನಂತರ ದೂರದರ್ಶನವನ್ನು ವೀಕ್ಷಿಸುತ್ತಾರೆ. ಬೀಡಿ ಕಟ್ಟುತ್ತಾ ದೂರದರ್ಶನದ

ಕಾರ್ಯಕ್ರಮಗಳನ್ನು ವೀಕ್ಷಿಸುವುದು ಸಾಮಾನ್ಯವಾಗಿದೆ. ದೂರದರ್ಶನದ ಕಾರ್ಯಕ್ರಮಗಳ ಕುರಿತು ಮಾತುಕತೆ ನಡೆಸಿದಾಗ ಹೆಚ್ಚಿನ ಬುಡಕಟ್ಟು ಮಹಿಳೆಯರು ಪ್ರಸಾರವಾಗುವ ಎಲ್ಲಾ ಧಾರವಾಹಿಗಳನ್ನು ಹಾಗೂ ಚಲನಚಿತ್ರಗಳನ್ನು ವೀಕ್ಷಿಸುವುದು ಕಂಡುಬಂದಿದೆ. ಮನರಂಜನೆಯ ಮುಖ್ಯಮೂಲ ಪ್ರಸ್ತುತ ದಿನಗಳಲ್ಲಿ ದೂರದರ್ಶನವೇ ಆಗಿದ್ದರೂ ಜ್ಞಾನಾರ್ಜನೆಯ ಕಾರ್ಯಕ್ರಮಗಳತ್ತ ಬುಡಕಟ್ಟು ಮಹಿಳೆಯರು ಕಡಿಮೆ ಆಸಕ್ತಿ ವಹಿಸುವ ಅಂಶವನ್ನು ಗಮನಿಸಲಾಗಿದೆ.

ಬುಡಕಟ್ಟು ಮಹಿಳೆಯರಲ್ಲಿ ಪತ್ರಿಕೆ ಓದುವ ಹವ್ಯಾಸವೂ ಕಡಿಮೆಯಾಗಿರುವುದರಿಂದ ಈ ಕುರಿತಾದ ಜಾಗೃತಿಯೂ ಮೂಡಬೇಕಿದೆ. ಮುಖ್ಯವಾಗಿ ಪಂಚಾಯತಿಗೆ ಆಯ್ಕೆಯಾದ ಮಹಿಳಾ ಬುಡಕಟ್ಟು ಸದಸ್ಯರು ಒಟ್ಟು 11 (3.66%) ಸದಸ್ಯರಿದ್ದು ಹೆಚ್ಚಿನವರು ಪತ್ರಿಕೆ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳದೇ ಇರುವುದು ಕಂಡುಬಂದಿದ್ದು, ಹೆಚ್ಚಿನ ಬುಡಕಟ್ಟು ಮಹಿಳೆಯರ ಮನೆಯಲ್ಲಿ ಶಾಲಾ ಮಕ್ಕಳ ಪುಸ್ತಕಗಳನ್ನು ಹೊರತು ಪಡಿಸಿದರೆ ಉಳಿದ ಯಾವುದೇ ರೀತಿಯ ಪುಸ್ತಕಗಳನ್ನು ಸಂಗ್ರಹಿಸಿಡದೇ ಇರುವುದು ಮಹಿಳೆಯರಿಗೆ ಓದುವ ಹವ್ಯಾಸವಿಲ್ಲದೇ ಇರುವುದನ್ನು ಸ್ಪಷ್ಟಡಿಸುತ್ತದೆ.

ಪ್ರತಿ ಗ್ರಾಮದಲ್ಲೂ ಇರುವ ಗ್ರಾಮ ಪಂಚಾಯತಿನ ವಾಚನಾಲಯಗಳನ್ನು ಉಪಯೋಗಿಸುವರೇ ವಿದ್ಯಾವಂತ ಬುಡಕಟ್ಟು ಮಹಿಳೆಯರಿಗೆ ಸೂಕ್ತ ಮಾರ್ಗದರ್ಶನದ ಕೊರತೆ ಇದೆ. ಅತಿ ಹೆಚ್ಚಿನ ಅಂದರೆ 140 (46.67%) ಮಹಿಳೆಯರು ಬಿಡುವಿನ ವೇಳೆಯಲ್ಲಿ ಮನೆಕೆಲಸದಲ್ಲಿ ತಲ್ಲೀನರಾಗುತ್ತಾರೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮನೆಕೆಲಸದೊಂದಿಗೆ ನೀರು ಸಂಗ್ರಹಿಸುವ, ಉರುವಲು ಸಂಗ್ರಹಿಸುವ, ಕೃಷಿ ಇರುವಲ್ಲಿ ಸೊಪ್ಪು, ಗೊಬ್ಬರದ ವ್ಯವಸ್ಥೆ ಮಾಡುವ ಕೆಲಸವಿರುವುದರಿಂದ ವಿರಾಮದ ವೇಳೆಯು ಸಿಗುವುದಿಲ್ಲ ಎಂದು ಬುಡಕಟ್ಟು ಮಹಿಳೆಯರು ಅಭಿಪ್ರಾಯ ಪಡುತ್ತಾರೆ.

ವೈ ರವೀಂದ್ರನಾಥರಾವ್ ಅವರು ಕುಡುಬಿ ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದ ತಮ್ಮ ಅಧ್ಯಯನದಲ್ಲಿ ವಿಶೇಷವಾಗಿ ಹಿಂದಿನ ಅಬಿಭಜಿತ ದಕ್ಷಿಣ ಕನ್ನಡದ ಕುಡುಬಿ ಸಮುದಾಯದವರು 1985-86 ರಲ್ಲಿ ವಯಸ್ಕ ಶಿಕ್ಷಣದ ಪ್ರಯೋಜನವನ್ನು ಪಡೆದಿದ್ದರು ಎಂಬುದನ್ನು ಉಲ್ಲೇಖಿಸಿದ್ದಾರೆ. ಹಾಗೂ ಒಟ್ಟು 210 (100) ಕುಡುಬಿ ಮಾಹಿತಿದಾರರಲ್ಲಿ 199(74.76%) ಮಾಹಿತಿದಾರರು ತಮ್ಮ ಮನೆಗೆ ದಿನಪತ್ರಿಕೆ ತರಿಸುವುದಿಲ್ಲ ಎಂದು ಅಭಿಪ್ರಾಯಪಟ್ಟಿರುವುದನ್ನು ಮತ್ತು ಕೇವಲ 5.24% ಮಾಹಿತಿದಾರರು ಮನೆಗೆ ದಿನಪತ್ರಿಕೆ ತರಿಸುತ್ತಿರುವುದೆಂದು ಪ್ರತಿಕ್ರಯಿಸಿರುವುನ್ನು ಉಲ್ಲೇಖಿಸಿದ್ದಾರೆ. ಅಧ್ಯಯನಕಾರರು

1991-92 ರಲ್ಲಿ ಕ್ಷೇತ್ರ ಕಾರ್ಯ ಮುಗಿಸಿದ್ದು ಸುಮಾರು 10 ವರ್ಷಗಳೂ ಕಳೆದರೂ ಕುಡುಬಿ ಸಮುದಾಯಗಳಲ್ಲಿ ಪತ್ರಿಕೆ ತರಿಸಿ ಓದುವ ಹವ್ಯಾಸ ಬೆಳೆಯದಿರುವುದು ಒಟ್ಟು ಸಮುದಾಯಕ್ಕೆ ಬೇಕಾಗಿರುವ ಮಾರ್ಗದರ್ಶನದ ಕೊರತೆಯನ್ನು ಪ್ರಸ್ತುತ ಅಧ್ಯಯನವು ತೋರಿಸುತ್ತದೆ.

## ಕೋಷ್ಟಕ ಸಂಖ್ಯೆ 3.8

## ಲಿಂಗ ಸಮಾನತೆಯ ಕುರಿತಾಗಿ ಬುಡಕಟ್ಟು ಮಹಿಳೆಯರ ಅಭಿಪ್ರಾಯದ ಕೋಷ್ಟಕ

| ಕ್ರ.ಸಂ | ಅಭಿಪ್ರಾಯ | ಒಟ್ಟು ಉತ್ತರ | ಶೇಕಡವಾರು |
|---|---|---|---|
| 1 | ಸಮಾನರು | 292 | 97.33 |
| 2 | ಸಮಾನರಲ್ಲ | 8 | 2.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.8 ರಲ್ಲಿ ಗಂಡು- ಹೆಣ್ಣು ಸಮಾನರೇ ಎನ್ನುವ ಪ್ರಶ್ನೆಗೆ ಬುಡಕಟ್ಟು ಮಹಿಳೆಯರು ನೀಡಿದ ಅಭಿಪ್ರಾಯವನ್ನು ಗಮನಿಸಬಹುದು. ಒಟ್ಟು 300 ಬುಡಕಟ್ಟು ಮಹಿಳೆಯರಲ್ಲಿ 292 (97.33%)ಮಹಿಳೆಯರು ಕುಟುಂಬದಲ್ಲಿ, ಸಮಾಜದಲ್ಲಿ ಗಂಡು – ಹೆಣ್ಣು ಸಮಾನರು ಎಂದು ಅಭಿಪ್ರಾಯಪಟ್ಟಿದ್ದಾರೆ. ಕೇವಲ 8(2.67%) ಮಹಿಳೆಯರು ಗಂಡು - ಹೆಣ್ಣು ಸಮಾನರಲ್ಲ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ. ಸಮಾನತೆ ಎನ್ನುವ ಪದವನ್ನು ಇಲ್ಲಿ ವಿಶ್ಲೇಷಿಸಿದರೆ ದೈಹಿಕ ರಚನೆ ಮತ್ತು ಸಂತಾನೋತ್ಪತ್ತಿ ಕಾರ್ಯಗಳನ್ನು ಹೊರತುಪಡಿಸಿದರೆ, ಉಳಿದೆಲ್ಲಾ ಅಸಮಾನತೆಗಳು ಸಾಮಾಜೀಕರಣ ಮತ್ತು ಸಂಸ್ಕೃತಿಯ ಫಲಿತಾಂಶ ಎನ್ನುವುದನ್ನು ಅರ್ಥ ಮಾಡಿಕೊಳ್ಳಬಹುದು.

ಆದರೆ ಈ ರೀತಿಯ ಅರಿವು ಬುಡಕಟ್ಟು ಮಹಿಳೆಯರಲ್ಲಿ ಇಲ್ಲವಾದರೂ ದೈನಂದಿನ ಅನುಭವಗಳು, ವಿಚಾರ ವಿನಿಮಯಗಳು, ಸ್ವಸಹಾಯ ಗುಂಪುಗಳಲ್ಲಿನ ಚರ್ಚೆಗಳು, ಮಾಧ್ಯಮಗಳ ಪ್ರಭಾವವು ಲಿಂಗ ಸಮಾನತೆಯ ಅರಿವು ಮೂಡಿಸಿರುವುದು ಗಮನಾರ್ಹವಾಗಿದೆ.

ಒಟ್ಟು ಕುಟುಂಬದಲ್ಲಿ ಗಂಡು-ಹೆಣ್ಣು ಮಕ್ಕಳನ್ನು ಶಿಕ್ಷಣ, ಆಹಾರ, ಬಟ್ಟೆ ಬರೆ, ಸ್ವಾತಂತ್ರ್ಯಗಳ ವಿಷಯದಲ್ಲಿ ಯಾವುದೇ ರೀತಿಯ ಭೇದ ಮಾಡಬಾರದು. ಗಂಡು ಹೆಣ್ಣು ಮಕ್ಕಳು ಎಲ್ಲಾ ವಿಧದಲ್ಲೂ ಸಮಾನರೇ. ಮಕ್ಕಳು ದೇವರ ಕೊಡುಗೆ ಅವರೊಳಗೆ ಭೇದ ಮಾಡಬಾರದು ಎಂದು ಹೆಚ್ಚಿನ ಬುಡಕಟ್ಟು ಮಹಿಳೆಯರು ಅಭಿಪ್ರಾಯಪಡುತ್ತಾರೆ.

ಮುಖ್ಯವಾಗಿ ಆದಿವಾಸಿಗಳಾದ ಕೊರಗ ಬುಡಕಟ್ಟು ಮಾತೃ ಮೂಲ ಸಮುದಾಯವಾಗಿದ್ದು, ಇಲ್ಲಿ ಪುರುಷ ಮಹಿಳೆ ಎನ್ನುವ ತಾರತಮ್ಯವಿಲ್ಲ.

ಕೊರಗರ ಸಾಂಪ್ರದಾಯಿಕ ನ್ಯಾಯ ಪದ್ಧತಿಗೆ ಸಂಬಂಧಿಸಿದ ತಮ್ಮ ಅಧ್ಯಯನದಲ್ಲಿ ಪದ್ಮ ವೇಣೂರು ಅವರು "ನಮ್ಮ ನ್ಯಾಯಾಲಯ" ಎಂಬ ತನ್ನ ಲೇಖನದಲ್ಲಿ ಹೀಗೆ ಪ್ರತಿಕ್ರಯಿಸಿದ್ದಾರೆ. "ಕೊರಗ ಸಮುದಾಯ ಸಾಮಾಜಿಕವಾಗಿ ವಿಕಾಸ ಹೊಂದುತ್ತಿರುವ ಸಮುದಾಯ. ಇಲ್ಲಿನ ಸಾಮಾಜಿಕ ಸಂಸ್ಥೆಗಳಾದ ಕಾನೂನು, ನ್ಯಾಯ, ಕುಟುಂಬ, ಮದುವೆ ಸಂಬಂಧಗಳು ಇನ್ನೂ ಪ್ರಿಮಿಟಿವ್ ಹಂತದಲ್ಲಿದೆ".

"ಮಾತೃ ಮೂಲ ಸಮುದಾಯವಾದ್ದರಿಂದ ಪುರುಷ ಮಹಿಳೆಯರಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆಯಲ್ಲಿ ಯಾವುದೇ ತಾರತಮ್ಯ ಇರಲಿಲ್ಲ. ಆದರೆ ವಿಕಾಸ ಹೊಂದುತ್ತಿರುವ ಸಮುದಾಯವೊಂದು ಹೊರಜನರ ಸಂಪರ್ಕದಿಂದಾಗಿ ಆಸಕ್ತಿ, ಅಭಿರುಚಿಗಳಲ್ಲಿ ಅನುಕರಣೆಯಿಂದಾಗಿ ಕುಡಿತದ ದಾಸರಾಗಿರುವುದು ಹಾಗೂ ಪಿತೃತ್ವದ ಅನುಕರಣೆಯ ಮೂಲಕ ಅಲ್ಲಿನ ಲಿಂಗತ್ವದ ಎಲ್ಲಾ ಋಣಾತ್ಮಕ ಪ್ರಭಾವಕ್ಕೊಳಗಾಗಿ ಪುರುಷರ ಮಹಿಳೆಯರ ನಡುವೆ ಭಿನ್ನತೆಯೇರ್ಪಟ್ಟಿರುವುದು. ಈ ಕಾರಣದಿಂದಾಗಿ ಸಮುದಾಯದ ಮಹಿಳೆಯರ ಮೇಲೆ ಕೌಟುಂಬಿಕ ದೌರ್ಜನ್ಯಗಳು ಪ್ರಾರಂಭವಾಗಿವೆ". (2006: ಪು.ಸಂ. 68 ರಿಂದ 71)

ಈ ಮೇಲಿನ ಅಭಿಪ್ರಾಯದಲ್ಲಿ ಹೊರಸಂಪರ್ಕದಿಂದಾಗಿ ಬುಡಕಟ್ಟು ಕುಟುಂಬದಲ್ಲಿ ಲಿಂಗ ಅಸಮಾನತೆಯ ಅಂಶಗಳು ತಲೆಯೆತ್ತುತ್ತಿರುವುದನ್ನು ಕಾಣಬಹುದು.

ಸ್ವಾಭಾವಿಕವಾಗಿಯೇ ಹೆಚ್ಚಿನ ಬುಡಕಟ್ಟು ಸಮುದಾಯಗಳಲ್ಲಿ ಗಂಡು ಮತ್ತು ಹೆಣ್ಣು ಸಮಾನರಾಗಿರುತ್ತಾರೆ. ಲಿಂಗ ಸಮಾನತೆ ಬುಡಕಟ್ಟು ಸಮುದಾಯಗಳಲ್ಲಿನ ಒಂದು ವಿಶೇಷ ಸಾಮಾಜಿಕ ಮೌಲ್ಯವೆಂದು ಅಧ್ಯಯನದಿಂದ ಗಮನಿಸಬಹುದಾಗಿದೆ. ಆದರೆ ಪ್ರಸ್ತುತ ಹೊರಜಗತ್ತಿನ ಸಂಪರ್ಕದಿಂದಾಗಿ ಬುಡಕಟ್ಟು ಸಮುದಾಯಗಳಲ್ಲೂ ಅಲ್ಲಲ್ಲಿ ಲಿಂಗ ಅಸಮಾನತೆಗಳು ತಲೆಯೆತ್ತುತ್ತಿರುವುದನ್ನು ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 3.9

## ಗಂಡು ಮತ್ತು ಹೆಣ್ಣು ಮಕ್ಕಳಿಗೆ ಶಿಕ್ಷಣ ಸಮಾನವಾಗಿ ದೊರೆಯಬೇಕು. ಎನ್ನುವುದರ ಕುರಿತಾದ ಮಾಹಿತಿದಾರರ ಅಭಿಪ್ರಾಯದ ಹಂಚಿಕೆ

| ಕ್ರ.ಸಂ | ಅಭಿಪ್ರಾಯ | ಸಂಖ್ಯೆ | ಶೇಕಡವಾರು |
|---|---|---|---|
| 1 | ಸಮಾನ ಶಿಕ್ಷಣ | 293 | 97.67 |
| 2 | ಸಮಾನ ಶಿಕ್ಷಣ ಅಗತ್ಯವಿಲ್ಲ | 07 | 2.33 |
| | ಒಟ್ಟು | 300 | 100.00 |

ಶಿಕ್ಷಣ ಗಂಡು ಮತ್ತು ಹೆಣ್ಣು ಮಕ್ಕಳಿಗೆ ಸಮಾನವಾಗಿ ದೊರೆಯಬೇಕೆ ಎನ್ನುವ ವಿಷಯಕ್ಕೆ ಬುಡಕಟ್ಟು ಮಹಿಳೆಯರು ನೀಡಿದ ಅಭಿಪ್ರಾಯವನ್ನು ಈ ಮೇಲಿನ ಕೋಷ್ಟಕ ಸಂಖ್ಯೆ 3.9ರಲ್ಲಿ ಗಮನಿಸಬಹುದು. ಒಟ್ಟು 300 (100%) ಮಹಿಳೆಯರಲ್ಲಿ 293(97.67%) ಮಹಿಳೆಯರು ಶಿಕ್ಷಣದಲ್ಲಿ ಲಿಂಗ ಭೇದ ಸಲ್ಲದು, ಸಮಾನ ವಿದ್ಯೆ ಕೊಡಿಸಬೇಕು ಎಂದಿದ್ದಾರೆ. ಕೇವಲ ಏಳು (2.33%) ಮಹಿಳೆಯರು ಸಮಾನ ಶಿಕ್ಷಣದ ಅಗತ್ಯವಿಲ್ಲ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಕುಟುಂಬಗಳನ್ನು ಗಮನಿಸಿದರೆ ಕೆಲವೇ ಹೆಣ್ಣು ಮಕ್ಕಳು ಅಂದರೆ ಒಟ್ಟು 300 ಕುಟುಂಬದಲ್ಲಿ 22 ಪದವಿ (7.33%) ವಿದ್ಯಾಭ್ಯಾಸ ಮುಗಿಸುತ್ತಿದ್ದಾರೆ. ಹಾಗೂ ಒಟ್ಟು 300 ಕುಟುಂಬಗಳಲ್ಲಿ ಎರಡು ಹೆಣ್ಣು ಮಕ್ಕಳು (0.66%) ಮಾತ್ರ ಉನ್ನತ ವ್ಯಾಸಂಗ(M.A) ಮುಗಿಸಿದ್ದಾರೆ. ಉಳಿದ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಹೆಣ್ಣು ಮಕ್ಕಳು ಪ್ರಾಥಮಿಕ ಮತ್ತು ಪ್ರೌಢ ವಿದ್ಯಾಭ್ಯಾಸ ಮುಗಿಸಿ ಖಾಸಗಿ ಉದ್ಯೋಗ (ಗೇರುಬೀಜದ ಕಾರ್ಖಾನೆ, ಸ್ವಚ್ಛತೆಯ ಕೆಲಸ) ವನ್ನು ಅವಲಂಬಿಸಿದ್ದು ಹೆಣ್ಣು ಮಕ್ಕಳ ಉನ್ನತ ಶಿಕ್ಷಣಕ್ಕೆ ಪ್ರೋತ್ಸಾಹದ ಕೊರತೆ ಇರುವುದು ಗಮನಿಸಬಹುದಾಗಿದೆ.

ಹೆಚ್ಚಿನ ಬುಡಕಟ್ಟು (ವಿಶೇಷವಾಗಿ ಕೊರಗ ಸಮುದಾಯ) ಮಹಿಳೆಯರು ತಮ್ಮ ಮಕ್ಕಳಿಗೆ ಶಿಕ್ಷಣದಲ್ಲಿ ನಿರಾಸಕ್ತಿ ಇದ್ದುದರಿಂದ ಹೆಚ್ಚು ಶಿಕ್ಷಣ ಕೊಡಿಸಲಾಗಲಿಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಕೊರಗ ಕುಟುಂಬದಲ್ಲಿ ಮದ್ಯಪಾನ ಸೇವನೆ, ಬಡತನ ಮತ್ತು ಇತರ ಸಮಸ್ಯೆಗಳಿಂದಾಗಿ ಶಿಕ್ಷಣ ಪೂರಕ ವಾತಾವರಣವಿಲ್ಲದೇ ಇರುವುದು ಹಾಗೂ ಹೆತ್ತವರ ಪ್ರೋತ್ಸಾಹವಿಲ್ಲದೇ ಇರುವುದು ಮಕ್ಕಳ ಶಿಕ್ಷಣಕ್ಕೆ ಅಡಚಣೆಯಾಗಿದೆ. ಹಾಗೆಯೇ ಅಲ್ಪ ಸಂಖ್ಯಾತ ಬುಡಕಟ್ಟು ಮಹಿಳೆಯರು, ಹೆಣ್ಣು ಮಕ್ಕಳು ಮದುವೆಯಾಗಿ ಇನ್ನೊಂದು ಮನೆ ಸೇರುವುದರಿಂದ

ಹೆಚ್ಚು ಶಿಕ್ಷಣದ ಅಗತ್ಯವಿಲ್ಲ ಎಂದು (ಏಳು ಮಂದಿ ಮಾಹಿತಿದಾರರು) (2.33%) ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಕುರಿತು ಬಹಳ ನಿರೀಕ್ಷೆಯನ್ನಿಟ್ಟುಕೊಂಡಿರುವ ವಿಚಾರ ಮತ್ತು ಶಿಕ್ಷಣ ಪ್ರಸ್ತುತ ದಿನಗಳಲ್ಲಿ ಬಹಳ ಅಗತ್ಯ ಎಂಬುವುದನ್ನು ಅವರು ತಿಳಿದುಕೊಂಡಿರುವುದು, ಅವರಲ್ಲಿನ ಅರಿವು ಮತ್ತು ಪ್ರಜ್ಞೆಯನ್ನು ತೋರಿಸುತ್ತದೆ. ಬಡತನ, ಶಿಕ್ಷಣದ ಅರಿವಿನ ಕೊರತೆಯಿಂದಾಗಿ ತಮಗೆ ಹೆಚ್ಚು ಶಿಕ್ಷಣ ಪಡೆಯಲು ಅಸಾಧ್ಯವಾಗಿತ್ತು. ಮತ್ತು ತಮ್ಮ ಮಕ್ಕಳಾದರೂ ಮುಂದೆ ಬಂದು ಸ್ವಾವಲಂಬಿ ಜೀವನ ನಡೆಸಬೇಕು ಎನ್ನುವ ಆಶಯವನ್ನು ವ್ಯಕ್ತಪಡಿಸಿರುವುದನ್ನು ಅಧ್ಯಯನದ ಮೂಲಕ ತಿಳಿಯಲಾಗಿದೆ.

ಕೊರಗರಿಗೆ ಸಂಬಂಧಿಸಿದ ಅಧ್ಯಯನದಲ್ಲಿ ಕೊರಗ ಸಮುದಾಯದವರೇ ಆದ ಮೋಹನ ಅಡ್ವೆ ಅವರು ಹೀಗೆ ಪ್ರತಿಕ್ರಯಿಸಿದ್ದಾರೆ. "ಶಾಲೆಗೆ ಸೇರಿದ ಮಕ್ಕಳಲ್ಲಿ 5 ರಿಂದ 60 ಮಕ್ಕಳು ಪ್ರಾಥಮಿಕ ಶಿಕ್ಷಣದ ಹಂತದಲ್ಲಿಯೇ ಶಾಲೆ ಬಿಡುವುದು, ನಮ್ಮ ಸಮುದಾಯದಲ್ಲಿರುವ ಶಿಕ್ಷಣದ ಪರಿಸ್ಥಿತಿಯ ಗಂಭೀರತೆಯನ್ನು ಸೂಚಿಸುತ್ತದೆ. ಇದಕ್ಕೆ ನಮ್ಮ ಮೇಲೆ ಹೇರಲ್ಪಟ್ಟ ಅಜಲು ಮುಖ್ಯ ಕಾರಣವಾದರೆ, ಹೊಂದಿಕೊಳ್ಳಲಾಗದ ಶಾಲಾ ವಾತಾವರಣ ಇನ್ನೊಂದು ಕಾರಣ. ನಮ್ಮ ಮಕ್ಕಳ ಶಿಕ್ಷಣದ ಸಂದರ್ಭದಲ್ಲಿ ಕೂಡಾ ನಾವು ಪ್ರಿಮಿಟಿವ್ ಟ್ರೈಬಲ್‌ಗಳು ಅನ್ನುವುದನ್ನು ಸರ್ಕಾರ ಪರಿಗಣಿಸಬೇಕಾಗಿದೆ. ಯಾಕೆಂದರೆ ಉಳಿದ ಸಮುದಾಯಗಳಿಗೂ ಕೊರಗ ಸಮುದಾಯಗಳಿಗೂ ಶಿಕ್ಷಣದಲ್ಲಿ ತಲೆಮಾರುಗಳ ಅಂತರವಿದೆ. ಪಿ.ಯು.ಸಿ ಹಾಗೂ ಡಿಗ್ರಿ ಹಂತ ದಾಟಿದವರೂ ಕೂಡಾ ಪ್ರತಿಹಂತದಲ್ಲಿಯೂ ಈ ಅಂತರದ ಕಹಿ ಅನುಭವಗಳನ್ನು ಅನುಭವಿಸಬೇಕಾಗುತ್ತದೆ. ಎನ್ನುವ ಮಾತಿನಲ್ಲಿ ತಮ್ಮ ಸಮುದಾಯದ ಶಿಕ್ಷಣದ ಸ್ಥಿತಿ ಗತಿಯ ಕಾಳಜಿ ವ್ಯಕ್ತವಾಗುತ್ತದೆ (2012: ಪು ಸಂ 16 ರಿಂದ 20)

ಈ ಮೇಲಿನ ಅಧ್ಯಯನಕಾರರ ಅಭಿಪ್ರಾಯವನ್ನು ವಿಶ್ಲೇಷಿಸುವುದಾದರೆ ಪ್ರಸ್ತುತ ಕೊರಗ ಸಮುದಾಯದಲ್ಲಿ ಮಕ್ಕಳ ಶಿಕ್ಷಣಕ್ಕೆ ಅನೇಕ ರೀತಿಯ ಸಮಸ್ಯೆಗಳಿವೆ ಎನ್ನುವುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಆದುದರಿಂದ ಈ ಮೇಲಿನ ಸಮಸ್ಯೆಗಳ ಪರಿಹಾರಕ್ಕೆ ಸರ್ಕಾರ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ ಸಹಕಾರದ ಅನಿವಾರ್ಯತೆ ಇದೆ ಎಂದು ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 3.10

## ಬುಡಕಟ್ಟು ಮಹಿಳೆಯರಿಗೆ ಶಿಕ್ಷಣದ ಉದ್ದೇಶದ ಅರಿವಿನ ಕುರಿತಾಗಿ ತೋರಿಸುವ ಅಂಕಿ ಅಂಶಗಳ ಕೋಷ್ಟಕ

| ಕ್ರ.ಸಂ | ಅಭಿಪ್ರಾಯ | ಸಂಖ್ಯೆ | ಶೇಕಡವಾರು |
|---|---|---|---|
| 1 | ವಿದ್ಯಾವಂತರಾಗುವುದು | 106 | 35.33 |
| 2 | ಉದ್ಯೋಗ | 117 | 39.00 |
| 3 | ಒಳ್ಳೆ ತಾಯಿ/ತಂದೆ/ಪತಿ/ಪತ್ನಿ | 08 | 2.67 |
| 4 | ಸ್ವಾವಲಂಬಿಯಾಗುವುದು | 50 | 16.67 |
| 5 | ಒಳ್ಳೆ ನಾಗರಿಕರಾಗುವುದು | 19 | 6.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.10 ರಲ್ಲಿ ಬುಡಕಟ್ಟು ಮಹಿಳೆಯರು ಶಿಕ್ಷಣದ ಉದ್ದೇಶಗಳಾವುವು ಎಂಬುದರ ಕುರಿತು ನೀಡಿದ ಮಾಹಿತಿಗಳಾಗಿವೆ. ಒಟ್ಟು 300(100%) ಮಹಿಳೆಯರಲ್ಲಿ 106(35.33%) ಮಹಿಳೆಯರು ಶಿಕ್ಷಣ ಪಡೆಯುವುದು ವಿದ್ಯಾವಂತರಾಗಲು ಎಂದಿದ್ದಾರೆ. 117(39.00%) ಮಹಿಳೆಯರು ಶಿಕ್ಷಣದ ಮುಖ್ಯ ಉದ್ದೇಶ ಉದ್ಯೋಗ ಪಡೆಯುವುದು ಎಂದಿದ್ದಾರೆ. 08(2.67) ರಷ್ಟು ಮಹಿಳೆಯರು ಶಿಕ್ಷಣವು ಉತ್ತಮ ಹಾಗೂ ಸಮರ್ಥ ತಾಯಿ ಮತ್ತು ಪತ್ನಿಯಾಗಲು ಅಗತ್ಯ ಎಂದು ಅಭಿಪ್ರಾಯವ್ಯಕ್ತಪಡಿಸಿದ್ದಾರೆ. 50(16.67%) ಮಹಿಳೆಯರು ಶಿಕ್ಷಣವು ಮನುಷ್ಯರನ್ನು ಸ್ವಾವಲಂಬಿಯಾಗಿಸುತ್ತದೆ, ಎಂದರೆ 19(6.33%) ಮಹಿಳೆಯರು ಇದರಿಂದ ಒಳ್ಳೆಯ ನಾಗರಿಕರಾಗಲು ಅನುಕೂಲ ಎಂದು ಅಭಿಪ್ರಾಯಪಟ್ಟಿದ್ದಾರೆ.

ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳಿಗೆ ಉದ್ಯೋಗದ ಕಾರಣಕ್ಕಾಗಿ ಶಿಕ್ಷಣ ಅಗತ್ಯ ಎಂದಿರುವ ಅಭಿಪ್ರಾಯವನ್ನು ಕೋಷ್ಟಕ ಸಂಖ್ಯೆ 3.10 ಸ್ಪಷ್ಟಪಡಿಸುತ್ತದೆ. ಔಪಚಾರಿಕ ಶಿಕ್ಷಣದ ಮೂಲ ಉದ್ದೇಶ, ಉದ್ಯೋಗ ಪಡೆಯುವುದು ಹಾಗೂ ಆ ಮೂಲಕ ಆರ್ಥಿಕ ಸ್ವಾವಲಂಬನೆ ಆಗಿರುವುದರಿಂದ ಈ ವಿಷಯದ ಕುರಿತಾಗಿ ಬುಡಕಟ್ಟು ಮಹಿಳೆಯರಲ್ಲಿ ಅರಿವು ಇರುವುದನ್ನು ಗಮನಿಸಬಹುದಾಗಿದೆ. ಹೆಚ್ಚಿನ ವಿದ್ಯಾಭ್ಯಾಸ ಇಲ್ಲದೇ ಇರುವುದರಿಂದ ಯಾವ ಉದ್ಯೋಗಕ್ಕೆ ಯಾವ ರೀತಿಯ ಶಿಕ್ಷಣ ಬೇಕು ಎನ್ನುವ ಯೋಚನೆಯ ಕೊರತೆ ಬುಡಕಟ್ಟು ಮಹಿಳೆಯರಲ್ಲಿ ಇದೆ ಎನ್ನುವ ಅಂಶ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

## ಕೋಷ್ಟಕ ಸಂಖ್ಯೆ 3.11

## ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಉದ್ಯೋಗದ ಕುರಿತಂತೆ ನೀಡಿದ ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಸಂಖ್ಯೆ | ಶೇಕಡವಾರು |
|---|---|---|---|
| 1 | ಗಂಡು ಮಕ್ಕಳು ಉದ್ಯೋಗ ಬೇಕು ಹೆಣ್ಣು ಅನ್ವಯಿಸುವುದಿಲ್ಲ | 33 | 11.00 |
| 2 | ಗಂಡು/ಹೆಣ್ಣು ಉದ್ಯೋಗಸ್ಥರಾಗಿರಬೇಕು | 97 | 32.33 |
| 3 | ಗಂಡು ಅನ್ವಯಿಸುವುದಿಲ್ಲ ಹೆಣ್ಣಿಗೆ ಉದ್ಯೋಗ ಬೇಕು | 25 | 8.33 |
| 4 | ಹೆಣ್ಣು ಅನ್ವಯಿಸುವುದಿಲ್ಲ | 4 | 1.33 |
| 5 | ಗಂಡು ಉದ್ಯೋಗ ಬೇಕು ಹೆಣ್ಣಿಗೆ ಬೇಕಾಗಿಲ್ಲ | 02 | 0.67 |
| 6 | ಹೆಣ್ಣಿಗೆ ಉದ್ಯೋಗ ಬೇಕು/ಗಂಡು ಅನ್ವಯಿಸುವುದಿಲ್ಲ | 47 | 15.67 |
| 7 | ಗಂಡು ಹೆಣ್ಣು ಅನ್ವಯಿಸುವುದಿಲ್ಲ | 92 | 30.67 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.11 ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಉದ್ಯೋಗ ಜೀವನದ ಕುರಿತು ನೀಡಿದ ಅಭಿಪ್ರಾಯವನ್ನು ಸೂಚಿಸುತ್ತದೆ. 33(11.00%) ಮಹಿಳೆಯರು ತಮ್ಮ ಗಂಡು ಮಕ್ಕಳಿಗೆ ಉದ್ಯೋಗ ಬೇಕು ಎಂದಿದ್ದು ಅವರ ಹೆಣ್ಣು ಮಕ್ಕಳಿಗೆ ಮದುವೆಯಾಗಿರುವುದರಿಂದ ಇದು ಅನ್ವಯಿಸುವುದಿಲ್ಲ. 97(32.33%) ಮಹಿಳೆಯರು ತಮ್ಮ ಗಂಡು ಹೆಣ್ಣು ಮಕ್ಕಳಿಬ್ಬರು ಉದ್ಯೋಗಸ್ಥರಾಗಬೇಕು ಎನ್ನುವ ಆಶಯ ವ್ಯಕ್ತಪಡಿಸಿದ್ದಾರೆ.

25(8.33%) ಮಹಿಳೆಯರ ಗಂಡು ಮಕ್ಕಳು ಈಗಾಗಲೇ ಉದ್ಯೋಗದಲ್ಲಿದ್ದು ಅವರ ಹೆಣ್ಣು ಮಕ್ಕಳಿಗೆ ಉದ್ಯೋಗ ಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

4(1.33%) ಮಹಿಳೆಯರ ಹೆಣ್ಣು ಮಕ್ಕಳು ಮದುವೆಯಾಗಿರುವುದರಿಂದ ಉದ್ಯೋಗದ ನಿರೀಕ್ಷೆ ಇಲ್ಲ 2(0.67) ಮಹಿಳೆಯರು ಗಂಡು ಮಗನಿಗೆ ಉದ್ಯೋಗ ಬೇಕು ಮತ್ತು ಹೆಣ್ಣು ಮಗಳಿಗೆ ಮದುವೆಯಾಗಿರುವುದರಿಂದ ಉದ್ಯೋಗದ ಅಗತ್ಯವಿಲ್ಲ ಎಂದಿದ್ದಾರೆ. 47(15.67%) ಮಹಿಳೆಯರು ಹೆಣ್ಣು ಮಕ್ಕಳಿಗೆ ಉದ್ಯೋಗ ಬೇಕು ಮತ್ತು ಗಂಡು ಮಕ್ಕಳಿಲ್ಲದೇ ಇರುವುದರಿಂದ ಈ ಕುರಿತು ಅನಿಸಿಕೆ ವ್ಯಕ್ತಪಡಿಸಿಲ್ಲ. 92(30.67) ಮಹಿಳೆಯರ ಗಂಡು ಹೆಣ್ಣು ಮಕ್ಕಳು ಉದ್ಯೋಗದಲ್ಲಿದ್ದು ವಿವಾಹವಾಗಿರುವುದರಿಂದ ಈ ಕುರಿತಾದ ಮಾಹಿತಿ ಅನ್ವಯಿಸುವುದಿಲ್ಲ.

ಒಟ್ಟಿನಲ್ಲಿ ಶಾಲೆ ಹಾಗೂ ಕಾಲೇಜಿಗೆ ಹೋಗುವ ಮಕ್ಕಳಿರುವ ಬುಡಕಟ್ಟು ಮಹಿಳೆಯರಿಗೆ ತಮ್ಮ ಗಂಡು ಹೆಣ್ಣು ಮಕ್ಕಳು ಉದ್ಯೋಗದ ದಾರಿ ಹಿಡಿಯಬೇಕೆನ್ನುವ ಅಪೇಕ್ಷೆ ಇದೆ ಎಂಬುವುದು ಮೇಲಿನ ದತ್ತಾಂಶಗಳಿಂದ ವ್ಯಕ್ತವಾಗುತ್ತದೆ.

ಒಟ್ಟು 300 (100%) ಬುಡಕಟ್ಟು ಮಹಿಳೆಯರಲ್ಲಿ 145(48.33%) ಮಹಿಳೆಯರು ತಮ್ಮ ಗಂಡು ಹೆಣ್ಣು ಮಕ್ಕಳಿಗೆ ಸರಕಾರಿ ಉದ್ಯೋಗ ಸಿಗಬೇಕು ಎನ್ನುವ ನಿರೀಕ್ಷೆ ಯಿಟ್ಟುಕೊಂಡಿದ್ದಾರೆ. 10(3.33%) ಮಹಿಳೆಯರು ತಮ್ಮ ಗಂಡು ಹೆಣ್ಣು ಮಕ್ಕಳಿಗೆ ಖಾಸಗಿ ಉದ್ಯೋಗ ಸಿಗಬೇಕು ಎನ್ನುವ ಆಶಯವಿದೆ. 4(1.33%) ಮಹಿಳೆಯರು ಗಂಡು ಹೆಣ್ಣು ಮಕ್ಕಳು ಸ್ವ ಉದ್ಯೋಗ ಮಾಡಿದರೆ ಉತ್ತಮ, 49(16.33%) ಮಹಿಳೆಯರು ತಮ್ಮ ಗಂಡು - ಹೆಣ್ಣು ಮಕ್ಕಳಿಗೆ ಇತರ ಯಾವ ಉದ್ಯೋಗವಾದರೂ ಸರಿ ಎನ್ನುವ ಅಭಿಪ್ರಾಯ ತಿಳಿಸಿದ್ದಾರೆ. ಹಾಗೂ 92 (30.67%) ಮಹಿಳೆಯರ ಗಂಡು ಹೆಣ್ಣು ಮಕ್ಕಳು ಈಗಾಗಲೇ ಉದ್ಯೋಗ ಗಳಲ್ಲಿರುವುದರಿಂದ ಬೇರೆ ಯಾವ ನಿರೀಕ್ಷೆಗಳೂ ಇಲ್ಲವಾದ್ದರಿಂದ ವಿಷಯದ ಬಗ್ಗೆ ಯಾವ ಅಭಿಪ್ರಾಯವೂ ವ್ಯಕ್ತವಾಗಿಲ್ಲ.

ತಮಗೆ ಉತ್ತಮ ಶಿಕ್ಷಣದ ಅವಕಾಶ ಸಿಗದೆ ಕೂಲಿ ಕೆಲಸವನ್ನು ಮಾಡುತ್ತಿರುವ ಅನಿವಾರ್ಯತೆ ಇರುವುದರಿಂದ ತಮ್ಮ ಮಕ್ಕಳು ಶಿಕ್ಷಣ ಪೂರೈಸಿ ಉತ್ತಮ ನೌಕರಿಯೊಂದಿಗೆ ಸ್ವಾವಲಂಬಿ ಜೀವನ ನಡೆಸಬೇಕು ಎನ್ನುವ ಆಶಯ ಬುಡಕಟ್ಟು ಮಹಿಳೆಯರ ಮಾತುಗಳಲ್ಲಿ ವ್ಯಕ್ತವಾಗಿದೆ. ತಮ್ಮ ಮಕ್ಕಳು ಭವಿಷ್ಯದಲ್ಲಿ ಇದೇ ಉದ್ಯೋಗವನ್ನು ಪಡೆಯಬೇಕು, ಯಾವ ಹುದ್ದೆಗೆ ಯಾವ ರೀತಿಯ ಶಿಕ್ಷಣ ಬೇಕು, ಪ್ರೌಢಶಿಕ್ಷಣ ಮುಗಿಸಿ ಕಾಲೇಜಿಗೆ ಸೇರುವಾಗ ಯಾವ ವಿಷಯಗಳನ್ನು ಆಯ್ಕೆ ಮಾಡಬೇಕು? ವಿಷಯಗಳಿಗೆ ಅಗತ್ಯವಿರುವ ಕನಿಷ್ಟ ಹಾಗೂ ಗರಿಷ್ಟ ಅಂಕಗಳೇನು? ಎಂಬುದರ ಕುರಿತಾದ ಸ್ಪಷ್ಟತೆ ಇಲ್ಲದಿದ್ದರೂ ಗೌರವಯುತ ನಾಗರಿಕ ಜೀವನಕ್ಕೊಂದು ಉದ್ಯೋಗ ಬೇಕು ಹಾಗೂ ಅದಕ್ಕಾಗಿ ಶಿಕ್ಷಣವೆಂಬುದು ಪೂರಕ ಸಾಧನ ಎನ್ನುವ ಅರಿವು ಮಾತ್ರ ಬುಡಕಟ್ಟು ತಾಯಂದಿರಲ್ಲಿ ಅಗಾಧವಾಗಿದೆ.

ವೈ ರವೀಂದ್ರನಾಥ ರಾವ್ ಅವರು ಕುಡುಬಿ ಬುಡಕಟ್ಟಿನ ಕುರಿತಾದ ತಮ್ಮ ಅಧ್ಯಯನದಲ್ಲಿ ಶಿಕ್ಷಣದ ಕುರಿತು ಕುಡುಬಿ ಸಮುದಾಯದ ನಿಲುವು ಬದಲಾಗುತ್ತಿದ್ದರೂ ತಮ್ಮ ಮಕ್ಕಳ ಶಿಕ್ಷಣದ ಕುರಿತು ಅವರಲ್ಲಿ ಮಹತ್ತರವಾದ ನಿರೀಕ್ಷೆಗಳಿಲ್ಲ ಎಂದು ಉಲ್ಲೇಖಿಸಿರುವುದನ್ನು ಇಲ್ಲಿ ಗಮನಿಸಬಹುದು (2003: ಪು.ಸಂ 52)

ಅಧ್ಯಯನಕಾರರು ಈ ಕುರಿತಾದ ಅಧ್ಯಯನ ನಡೆಸಿ ಸುಮಾರು ಹತ್ತು ವರ್ಷಗಳೇ ಕಳೆದರೂ, ಶಿಕ್ಷಣದ ವಿಶಾಲ ಅರ್ಥ, ಪ್ರಾಮುಖ್ಯತೆಯ ಕುರಿತಾಗಿ ಹಾಗೂ ಒಟ್ಟು ಸಮುದಾಯದ ಅಭಿವೃದ್ಧಿಗೆ ಶಿಕ್ಷಣ ಪೂರಕ ಎನ್ನುವ ಅರಿವಿನ ಕೊರತೆ ಬುಡಕಟ್ಟು ಮಹಿಳೆಯರಲ್ಲಿದೆ ಎನ್ನುವ ಅಂಶವನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ .

## ಕೋಷ್ಟಕ ಸಂಖ್ಯೆ 3.12

## ಮಕ್ಕಳ ಶೈಕ್ಷಣಿಕ ಪ್ರಗತಿಯ ಚರ್ಚೆಯ ಕುರಿತಾದ ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಹೌದು | 131 | 43.67 |
| 2 | ಇಲ್ಲ | 38 | 12.66 |
| 3 | ಒಮ್ಮೊಮ್ಮೆ | 42 | 14.00 |
| 4 | ಅನ್ವಯಿಸುವುದಿಲ್ಲ | 89 | 29.67 |
| | ಒಟ್ಟು | 300 | 100.00 |

ಬುಡಕಟ್ಟು ಮಹಿಳೆಯರು ತಮ್ಮ ಮನೆಯಲ್ಲಿ ತಮ್ಮ ಮಕ್ಕಳ ಶೈಕ್ಷಣಿಕ ಪ್ರಗತಿಯ ಕುರಿತು ಮಾತುಕತೆ ನಡೆಸುತ್ತಾರೆಯೇ ಅಥವಾ ಇಲ್ಲವೋ ಎನ್ನುವುದರ ಕುರಿತು ಕೋಷ್ಟಕ ಸಂಖ್ಯೆ 3.12ರ ಅಂಕಿ ಅಂಶಗಳು ವಿವರಗಳನ್ನು ಒದಗಿಸುತ್ತವೆ.

ಒಟ್ಟು 300(100%) ಮಹಿಳೆಯರಲ್ಲಿ 131 ಅಂದರೆ (43.67%) ರಷ್ಟು ಮಹಿಳೆಯರು ಮಕ್ಕಳ ವಿದ್ಯಾಭ್ಯಾಸದ ಕುರಿತು ಚರ್ಚಿಸುತ್ತಾರೆ. ಮತ್ತು 38(12.66%) ಮಹಿಳೆಯರು ಈ ಕುರಿತು ಮಾತುಕತೆ ನಡೆಸುವುದಿಲ್ಲ ಹಾಗೆಯೇ 42(14.00%) ಮಹಿಳೆಯರು ಒಮ್ಮೊಮ್ಮೆ ಮಕ್ಕಳ ಶಿಕ್ಷಣದ ಕುರಿತು ಚರ್ಚಿಸುತ್ತಾರೆ. ಹಾಗೂ 89 (29.67%) ಮಹಿಳೆಯರ ಮಕ್ಕಳು ಈಗಾಗಲೇ ವಿದ್ಯಾಭ್ಯಾಸ ಮುಗಿಸಿದ್ದು ಅವರಿಗೆ ವಿಷಯ ಅನ್ವಯಿಸುವುದಿಲ್ಲ.

ಬುಡಕಟ್ಟು ಮಹಿಳೆಯರಿಗೆ ಶಿಕ್ಷಣದ ಒಟ್ಟು ಪರಿಕಲ್ಪನೆಯ ಅರಿವಿನ ಕೊರತೆ ಇರುವುದಾದರೂ ತಮ್ಮ ಮಕ್ಕಳ ವಿದ್ಯಾಭ್ಯಾಸ ನಿರಂತರವಾಗಿರಬೇಕು. ಎನ್ನುವ ಸರಳ ತಿಳುವಳಿಕೆಯಿರುವುದನ್ನು ಗಮನಿಸಲಾಗಿದೆ. ಬಾಲ್ಯದಲ್ಲಿಯೇ ತಮ್ಮ ಮಕ್ಕಳ ಅಭಿರುಚಿ, ಪ್ರತಿಭೆ ಮತ್ತು ಕೌಶಲ್ಯಗಳನ್ನು ಗುರುತಿಸುವಲ್ಲಿ ಬುಡಕಟ್ಟು ಮಹಿಳೆಯರಿಗೆ ಸೂಕ್ತ ಸಲಹೆ ಹಾಗೂ ಮಾರ್ಗದರ್ಶನದ ಕೊರತೆ ಇರುವುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಬರುತ್ತದೆ.

## ಕೋಷ್ಟಕ ಸಂಖ್ಯೆ 3.13

## ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣದ ಸಲುವಾಗಿ ಅವರು ಕಲಿಯುತ್ತಿರುವ ಶಾಲೆಗೆ ಭೇಟಿ ಕೊಟ್ಟಿರುವ ಕುರಿತಾದ ಅಂಕಿಅಂಶದ ವಿವರಗಳು

| ಕ್ರ.ಸಂ | ಭೇಟಿ ಕೊಟ್ಟ ಅವಧಿ | ಸಂಖ್ಯೆ | ಶೇಕಡವಾರು |
|---|---|---|---|
| 1 | 1 – 3 | 91 | 30.33 |
| 2 | 3 – 5 | 65 | 21.67 |
| 3 | 6 ರ ಮೇಲೆ | 28 | 9.33 |
| 4 | ಭೇಟಿ ನೀಡಿಲ್ಲ | 06 | 2.00 |
| 5 | ಅನ್ವಯಿಸುವುದಿಲ್ಲ | 110 | 36.67 |
|  | ಒಟ್ಟು | 300 | 100.00 |

ಈ ಮೇಲಿನ ಕೋಷ್ಟಕ ಸಂಖ್ಯೆ 3.13 ದಲ್ಲಿ ನೀಡಿದ ಅಂಕಿಅಂಶಗಳಂತೆ ಒಟ್ಟು 300 ಮಹಿಳೆಯರಲ್ಲಿ 91(30.33%) ಬುಡಕಟ್ಟು ಮಹಿಳೆಯರು 1 ರಿಂದ 3 ಬಾರಿ ತಮ್ಮ ಮಕ್ಕಳು ಕಲಿಯುವ ಶಾಲೆಗೆ ಭೇಟಿ ನೀಡಿದ್ದು, 65(21.67%) ಮಹಿಳೆಯರು 3 ರಿಂದ 5 ಬಾರಿ, ಹಾಗೆಯೇ 28(9.33%) ಮಹಿಳೆಯರು 6ಕ್ಕಿಂತಲೂ ಅಧಿಕ ಬಾರಿ ಶಾಲೆಗೆ ಭೇಟಿ ನೀಡಿದ್ದಾರೆ. 6(2.00%) ಮಹಿಳೆಯರು ತಮ್ಮ ಮಕ್ಕಳು ಶಿಕ್ಷಣ ಪಡೆವ ಶಾಲೆಗೆ ಭೇಟಿ ನೀಡಿಲ್ಲ. ಹಾಗೆಯೇ 110(36.67%) ಮಹಿಳೆಯರ ಮಕ್ಕಳು ಈಗಾಗಲೇ ವಿದ್ಯಾಭ್ಯಾಸ ಪೂರ್ಣಗೊಳಸಿರುವುದರಿಂದ ಶಾಲೆಗೆ ಭೇಟಿ ನೀಡಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ.

ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣಕ್ಕೆ ಸಂಬಂದಿಸಿದಂತೆ ಶಾಲೆಗೆ ಭೇಟಿ ನೀಡಿರುವುದು ಪ್ರಸ್ತುತ ದತ್ತಾಂಶಗಳ ಆಧಾರದಲ್ಲಿ ಕಂಡುಕೊಳ್ಳಬಹುದು.

ಈ ಅಂಕಿಅಂಶಗಳ ಪ್ರಕಾರ 184(61.33%) ಬುಡಕಟ್ಟು ಮಹಿಳೆಯರು ಶಾಲೆಗೆ ಭೇಟಿ ನೀಡುತ್ತಾರೆ. ಶಾಲೆಯಲ್ಲಿ ನಡೆಯುವ ಹೆತ್ತವರ ಸಭೆಗೆ ಹೆತ್ತವರ

ಭಾಗವಹಿಸುವಿಕೆ ಬಹಳ ಅಗತ್ಯವಾಗಿರುವುದರಿಂದ ಮತ್ತು ಶಿಕ್ಷಕರು ಮಕ್ಕಳ ಮೂಲಕ ಹೆತ್ತವರ ಭಾಗವಹಿಸುವಿಕೆಯನ್ನು ಕಡ್ಡಾಯ ಮಾಡಿರುವುದರಿಂದ ತಪ್ಪದೇ ಬುಡಕಟ್ಟು ತಾಯಂದಿರು ಈ ಹೆತ್ತವರ ಸಭೆಗೆ ಹಾಜರಾಗುತ್ತೇವೆ ಎನ್ನುವ ಅಭಿಪ್ರಾಯ ಸೂಚಿಸಿದ್ದಾರೆ. ವರ್ಷಕ್ಕೊಮ್ಮೆ ಶಾಲಾ ದಿನಾಚರಣೆ ಆಚರಣೆಯಲ್ಲಿ ತಮ್ಮ ಮಕ್ಕಳ ಸಾಂಸ್ಕೃತಿಕ ಕಾರ್ಯಕ್ರಮ ವೀಕ್ಷಣೆಗೂ ಬುಡಕಟ್ಟು ತಾಯಂದಿರು ಪಾಲ್ಗೊಳ್ಳುತ್ತಾರೆ.

ಇದಲ್ಲದೆ ಶಿಕ್ಷಕರು ಬರ ಹೇಳದಾಗ ಅಥವಾ ಮಕ್ಕಳನ್ನು ಶಾಲೆಯಿಂದ ಕರೆತರಲು ಅಥವಾ ಸ್ವಸಹಾಯ ಸಂಘದ ಸಭೆಯಲ್ಲಿ ಭಾಗವಹಿಸಲು (ಅಂಗನವಾಡಿ ಪಕ್ಕದಲ್ಲಿರುವ ಶಾಲೆಗಳಿಗೆ) ಬುಡಕಟ್ಟು ತಾಯಂದಿರು ಶಾಲೆಗೆ ಭೇಟಿ ನೀಡುತ್ತಾರೆ.

ಆದರೆ ಯಾವುದೇ ಬುಡಕಟ್ಟಿನ ಮಹಿಳೆಯರು ತಾವೇ ಸ್ವತಹ ಆಸಕ್ತಿ ತೆಗೆದುಕೊಂಡು ಶಾಲೆಗೆ ಹೋಗಿ ತಮ್ಮ ಮಕ್ಕಳ ಶೈಕ್ಷಣಿಕ ಪ್ರಗತಿಯ ಕುರಿತಾಗಿ ಸಂಬಂಧಿಸಿದ ಶಿಕ್ಷಕರಲ್ಲಿ ವಿಚಾರ ವಿನಿಮಯ ಮಾಡಿರುವುದು ಅಧ್ಯಯನದ ಮೂಲಕ ತಿಳಿದುಬಂದಿಲ್ಲ. ಶಾಲೆಯಲ್ಲಿ ಹೆತ್ತವರ ಸಭೆಗೆ ಹಾಜರಾತಿ ಕಡ್ಡಾಯವಾದುದರಿಂದ ಭೇಟಿ ನೀಡಿದ್ದೇವೆ ಎನ್ನುವ ವಿಚಾರ ತಿಳಿದುಬಂದಿದೆ.

ತಮ್ಮ ಮಕ್ಕಳ ಶೈಕ್ಷಣಿಕ ಪ್ರಗತಿಗೆ ತಾವು ಶಾಲೆಗೆ ಭೇಟಿ ನೀಡಬೇಕು ಎನ್ನುವ ಅರಿವು ಬುಡಕಟ್ಟು ಮಹಿಳೆಯರಲ್ಲಿದೆ. ಆದರೂ ನೇರವಾಗಿ ಮಕ್ಕಳ ಶೈಕ್ಷಣಿಕ ವಿಚಾರ ವಿನಿಮಯ ಮಾಡಿಕೊಳ್ಳಲು ಸ್ವತಹ ತಾವಾಗಿಯೇ ಆಗಾಗ ಮುಖ್ಯವಾಗಿ ಪ್ರಾಥಮಿಕ ಶಾಲೆಗೆ ಹೋಗುವ ಹೆಚ್ಚಿನ ಜವಾಬ್ದಾರಿಯನ್ನು ಬುಡಕಟ್ಟು ಮಹಿಳೆಯರು ತೆಗೆದುಕೊಳ್ಳದಿರುವ ಅಂಶವು ಅಧ್ಯಯನದಿಂದ ತಿಳಿದುಬರುತ್ತದೆ.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶೈಕ್ಷಣಿಕ ಅಭಿವೃದ್ಧಿಯ ವಿಚಾರ ವಿನಿಮಯಗಳಿಗಾಗಿ ತಮ್ಮ ಮಕ್ಕಳು ಕಲಿಯುತ್ತಿರುವ ಶಾಲೆಗೆ ಭೇಟಿ ನೀಡುವ ಅನಿವಾರ್ಯತೆ ಇದೆ ಎನ್ನುವುದನ್ನು ಅಧ್ಯಯನವು ಸ್ಪಷ್ಟಪಡಿಸುತ್ತದೆ.

## ಕೋಷ್ಟಕ ಸಂಖ್ಯೆ 3.14

## ಬುಡಕಟ್ಟು ಮಹಿಳೆಯರಿಗೆ ತಮ್ಮ ಮಕ್ಕಳ ಶಾಲೆಯಲ್ಲಿ ಪರಿಚಯವಿರುವ ಶಿಕ್ಷಕರ ಕುರಿತಾದ ಅಂಕಿಅಂಶಗಳ ಹಂಚಿಕೆ

| ಕ್ರ.ಸಂ | ಶಿಕ್ಷಕರ ಸಂಖ್ಯೆ | ಒಟ್ಟು | ಶೇಕಡವಾರು |
|---|---|---|---|
| 1 | 1 –3 | 116 | 38.67% |
| 2 | 4 –6 | 54 | 18.00% |
| 3 | 6 ರ ಮೇಲೆ | 26 | 8.66% |
| 4 | ಯಾರು ಗೊತ್ತಿಲ್ಲ | 03 | 1.00% |
| 5 | ಅನ್ವಯಿಸುವುದಿಲ್ಲ | 101 | 33.67% |
| 6 | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.14 ರ ದತ್ತಾಂಶವು ಒಟ್ಟು 300(100.00) ಮಹಿಳೆಯರಲ್ಲಿ 116(38.67%) ಮಹಿಳೆಯರಿಗೆ ತಮ್ಮ ಮಕ್ಕಳು ಕಲಿಯುವ ಶಾಲೆಯ 1 ರಿಂದ 3 ರವರೆಗಿನ ಶಿಕ್ಷಕರ ಪರಿಚಯವಿದೆ. 54(18.00%) ಮಹಿಳೆಯರಿಗೆ 4 ರಿಂದ 6 ಶಿಕ್ಷಕರು, 26(8.66%) ಮಹಿಳೆಯರಿಗೆ 6ಕ್ಕಿಂತಲೂ ಹೆಚ್ಚು ಶಿಕ್ಷಕರ ಪರಿಚಯವಿದೆ. ಹಾಗೂ ಕೇವಲ 3(1%) ಮಹಿಳೆಯರಿಗೆ ಯಾವುದೇ ಶಿಕ್ಷಕರ ಪರಿಚಯವಿಲ್ಲ ಮತ್ತು 101(33.67%) ಮಹಿಳೆಯರಿಗೆ ಶಾಲೆಗೆ ಹೋಗುತ್ತಿರುವ ಮಕ್ಕಳಲ್ಲದೇ ಇರುವುದರಿಂದ ಈ ಮಾಹಿತಿ ಲಭ್ಯವಾಗಿಲ್ಲ.

ಒಟ್ಟು 196(65.33%) ಅತ್ಯಧಿಕ ಸಂಖ್ಯೆಯ ಬುಡಕಟ್ಟು ಮಹಿಳೆಯರಿಗೆ ತಮ್ಮ ಮಕ್ಕಳ ಶಿಕ್ಷಕರ ಪರಿಚಯವಿದೆ. ಕೆಲವು ಬುಡಕಟ್ಟು ಮನೆಗಳ ಆಸು-ಪಾಸಿನಲ್ಲಿ ಶಾಲೆ ಗಳರುವುದರಿಂದ ಹಾಗೂ ಕೆಲವು ಶಿಕ್ಷಕರು ಸ್ಥಳೀಯರಾಗಿರುವುದರಿಂದ ಹಾಗೂ ಶಾಲೆಗ ಹೋಗಿ ಬರುವ ಹವ್ಯಾಸವೂ ಇರುವುದರಿಂದ ಬುಡಕಟ್ಟು ಮಹಿಳೆಯರಿಗೆ ಶಿಕ್ಷಕರು ಪರಿಚಿತರಾಗಿದ್ದಾರೆ.

ಬುಡಕಟ್ಟು ವಿದ್ಯಾರ್ಥಿಗಳು ಅರ್ಧದಲ್ಲಿಯೇ ಶಾಲಾ ವಿದ್ಯಾಭ್ಯಾಸ ಮೊಟಕುಗೊಳಸಲು ಇರುವ ಅನೇಕ ಕಾರಣಗಳಲ್ಲಿ, ಬುಡಕಟ್ಟು ಸಂಸ್ಕೃತಿಯ ಪರಿಚಯವಿಲ್ಲದ ಶಾಲಾ ಶಿಕ್ಷಕರ ನೇಮಕಾತಿಯು ಒಂದಾಗಿದೆ. ಆದ್ದರಿಂದ ಬುಡಕಟ್ಟು ವಿದ್ಯಾರ್ಥಿಗಳು ಅತಿ

ಹೆಚ್ಚಿನ ಸಂಖ್ಯೆಯಲ್ಲಿರುವ ಶಾಲೆಗಳಲ್ಲಿ ಬುಡಕಟ್ಟು ಸಂಸ್ಕೃತಿಯ ಪರಿಚಯವಿರುವ ಅಧ್ಯಾಪಕರುಗಳ ನೇಮಕಾತಿಯ ಅಗತ್ಯವಿದೆ ಎನ್ನುವುದನ್ನು ಅಧ್ಯಯನ ಸ್ಪಷ್ಟಪಡಿಸುತ್ತದೆ.

**ಕೋಷ್ಟಕ ಸಂಖ್ಯೆ 3.15**

**ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶೈಕ್ಷಣಿಕ ಅಭಿವೃದ್ಧಿ ವರದಿಯನ್ನು ಗಮನಿಸುವುದರ ಕುರಿತಾದ ವಿವರಗಳು**

| ಕ್ರ.ಸಂ | ಅಭಿಪ್ರಾಯ | ಸಂಖ್ಯೆ | ಶೇಕಡವಾರು |
|---|---|---|---|
| 1 | ಗಮನಿಸುತ್ತೇವೆ | 137 | 45.67 |
| 2 | ಇಲ್ಲ | 23 | 7.67 |
| 3 | ತಿಳಿದಿಲ್ಲ | 31 | 10.33 |
| 4 | ಅನ್ವಯಿಸುವುದಿಲ್ಲ | 109 | 36.33 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.15 ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶೈಕ್ಷಣಿಕ ಪ್ರಗತಿಯ ವರದಿಯನ್ನು ಗಮನಿಸುವ ಕುರಿತಾದ ಅಂಕಿ ಅಂಶಗಳನ್ನು ಒದಗಿಸುತ್ತದೆ.

ಹೆಚ್ಚಿನ ಎಂದರೆ 137(45.67%) ಮಹಿಳೆಯರು ಮಕ್ಕಳ ಶೈಕ್ಷಣಿಕ ಪ್ರಗತಿಯ ವರದಿಯನ್ನು ಗಮನಿಸಿದರೆ 23(6.67%) ಮಹಿಳೆಯರು ಪ್ರಗತಿ ವರದಿ ಗಮನಿಸುವುದಿಲ್ಲ. 31(10.33%) ಮಹಿಳೆಯರಿಗೆ ಅಭಿವೃದ್ಧಿ ವರದಿಯನ್ನು ಗಮನಿಸಲು ತಿಳಿದಿಲ್ಲ. ಹಾಗೂ 109(36.33%) ಮಹಿಳೆಯರಿಗೆ ಶಾಲಾ ಶಿಕ್ಷಣ ಪಡೆಯುತ್ತಿರುವ ಮಕ್ಕಳಿಲ್ಲದೇ ಇರುವುದರಿಂದ ಇದರ ಕುರಿತಾದ ಮಾಹಿತಿ ಲಭ್ಯವಾಗಿಲ್ಲ.

ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರು ಪ್ರಾಥಮಿಕ ಹಂತದ ಶಿಕ್ಷಣ ಪಡೆದಿರುವುದರಿಂದ ಮಕ್ಕಳ ವಿದ್ಯಾಭ್ಯಾಸದ ಪ್ರಗತಿಯ ವರದಿಯನ್ನು ನೋಡಿ ಅರ್ಥ ಮಾಡಿಕೊಳ್ಳಲು ಶಕ್ತರಾಗಿದ್ದಾರೆ. ಸಮಾಜದ ಮುಖ್ಯವಾಹಿನಿಯಲ್ಲಿ ಮಕ್ಕಳ ಶಿಕ್ಷಣದ ಕುರಿತು ತಾಯಂದಿರೇ ಆಸಕ್ತಿ ವಹಿಸುವಂತೆ ಬುಡಕಟ್ಟು ಸಮುದಾಯದಲ್ಲೂ ಮಹಿಳೆಯರು ಮಕ್ಕಳ ಶೈಕ್ಷಣಿಕ ವಿಷಯದಲ್ಲಿ ಹೆಚ್ಚು ಕಾಳಜಿ ತೋರಿಸುತ್ತಾರೆ. ಕೇವಲ 23(7.67%)ರಷ್ಟು ಮಹಿಳೆಯರು ಮಾತ್ರ ಮನೆಯ ಪುರುಷರು ಶೈಕ್ಷಣಿಕ ವರದಿಯನ್ನು ಗಮನಿಸುವುದರಿಂದ ತಾವು ಶೈಕ್ಷಣಿಕ ವರದಿಯನ್ನು ಗಮನಿಸುವುದಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

31(10.33%) ಮಹಿಳೆಯರು ಅನಕ್ಷರಸ್ಥರಾದುದರಿಂದ ಪ್ರಗತಿ ವರದಿಯನ್ನು ಗಮನಿಸಲು ಅಶಕ್ತರಾಗಿದ್ದಾರೆ.

ಕೊರಗರು ಮತ್ತು ಅಭಿವೃದ್ಧಿ ಯೋಜನೆಗಳ ಕುರಿತಾದ ತಮ್ಮ ಅಧ್ಯಯನದಲ್ಲಿ ಸುಶೀಲ ನಾಡ ಅವರು ಹೀಗೆ ಪ್ರತಿಕ್ರಯಿಸಿದ್ದಾರೆ. "ಇಂದು ನಮ್ಮ ಸಮುದಾಯದಲ್ಲಿ ಪದವೀಧರರ ಸಂಖ್ಯೆ ಕೇವಲ ಎರಡರಿಂದ ಮೂವತ್ತು ಮಾತ್ರ. ಹೆಚ್ಚಿನವರು ಏಳನೇ ತರಗತಿಯ ನಂತರ ಶಿಕ್ಷಣ ಮುಂದುವರಿಸುವುದಿಲ್ಲ. ಮಧ್ಯದಲ್ಲಿಯೇ ಶಾಲೆ ಬಿಡುವ ಸಮಸ್ಯೆಯೊಂದಿಗೆ ನಮ್ಮದೇ ಆದ ಸಾಂಸ್ಕೃತಿಕ ಹಿನ್ನೆಲೆ, ಭಾಷೆ, ಮಾನಸಿಕ ಸ್ಥಿತಿ, ಶಿಕ್ಷಕರ ಧೋರಣೆ ಇವೆಲ್ಲಾ ನಮ್ಮ ಸಮುದಾಯದಲ್ಲಿ ಶಿಕ್ಷಣ ಪಡೆಯಲು ಇರುವ ಅಡ್ಡಿಗಳಾಗಿವೆ. ಸಮುದಾಯದ ಮೂಲ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡದೇ ಕೇವಲ ಬಟ್ಟೆ, ಪುಸ್ತಕ, ಸ್ಕಾಲರ್‌ಶಿಪ್ ಮತ್ತು ಹಾಸ್ಟೆಲ್‌ಗಳ ನಿರ್ಮಾಣದಿಂದ ಶಿಕ್ಷಣ ನೀಡಲು ಸಾಧ್ಯವೇ?" ಎನ್ನುವ ಅಭಿಪ್ರಾಯದಲ್ಲಿ ಪ್ರಸ್ತುತ ಕೊರಗ ಸಮುದಾಯದ ಶೈಕ್ಷಣಿಕ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ.

**ಕೋಷ್ಟಕ ಸಂಖ್ಯೆ 3.16**

**ಬುಡಕಟ್ಟು ಮಹಿಳೆಯರಲ್ಲಿ ಮಕ್ಕಳಿಗೆ ಸರಕಾರದಿಂದ ಸಿಗುವ ಶೈಕ್ಷಣಿಕ ಯೋಜನೆಗಳ ಕುರಿತಾದ ಮಾಹಿತಿಯ ವಿವರಗಳು**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಶೈಕ್ಷಣಿಕ ಯೋಜನೆಗಳ ಮಾಹಿತಿ ಇದೆ | 262 | 87.33 |
| 2 | ಶೈಕ್ಷಣಿಕ ಯೋಜನೆಗಳ ಮಾಹಿತಿ ಇಲ್ಲ | 38 | 12.67 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.16 ಬುಡಕಟ್ಟು ಮಹಿಳೆಯರಲ್ಲಿರುವ ಶೈಕ್ಷಣಿಕ ಯೋಜನೆಗಳ ಕುರಿತಾದ ಮಾಹಿತಿಯ ವಿವರಗಳನ್ನು ಒದಗಿಸುತ್ತದೆ. ಒಟ್ಟು 300 ಮಹಿಳೆಯರಲ್ಲಿ 262(87.33%) ಮಹಿಳೆಯರು ಶೈಕ್ಷಣಿಕ ಯೋಜನೆಯ ಬಗ್ಗೆ ಅರಿವನ್ನು ಹೊಂದಿದ್ದು 38(12.67%) ಮಹಿಳೆಯರು ಮಾತ್ರ ಈ ಬಗ್ಗೆ ಮಾಹಿತಿ ಇಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

## ಕೋಷ್ಟಕ ಸಂಖ್ಯೆ 3.17

## ಸರಕಾರದಿಂದ ಲಭ್ಯವಿರುವ ವಿವಿಧ ಶೈಕ್ಷಣಿಕ ಯೋಜನೆಗಳ ಕುರಿತಾದ ಮಾಹಿತಿಯ ವಿವರಗಳು

| ಕ್ರ.ಸಂ | ಯೋಜನೆಗಳು | ಅರಿವು ಇರುವ ಮಾಹಿತಿದಾರರ ಸಂಖ್ಯೆ | ಶೇಕಡವಾರು |
|---|---|---|---|
| 1 | ಸ್ಕಾಲರ್‌ಶಿಪ್ ಮತ್ತು ಶುಲ್ಕ ರಿಯಾಯಿತಿ | 192 | 64.30 |
| 2 | ಹಾಸ್ಟೆಲ್ ವ್ಯವಸ್ಥೆ | 40 | 13.30 |
| 3 | ಪುಸ್ತಕ, ಬಟ್ಟೆ ಮತ್ತು ಹಾಸ್ಟೆಲ್ | 25 | 8.20 |
| 4 | ಹುಡುಗಿಯರಿಗೆ ಉಚಿತ ಕಾಲೇಜು ಶಿಕ್ಷಣ | 05 | 1.53 |
| 5 | ಅನ್ವಯಿಸುವುದಿಲ್ಲ | 38 | 12.67 |
| | ಒಟ್ಟು | 300 | 100.00 |

ಈ ಮೇಲಿನ ಕೋಷ್ಟಕವು ವ್ಯಕ್ತಪಡಿಸುವಂತೆ ಹಿಂದಿನ ಕೋಷ್ಟಕ ಸಂಖ್ಯೆ (3.16) 262(87.33%) ಮಹಿಳೆಯರಲ್ಲಿ 192(64.30%) ಮಹಿಳೆಯರಿಗೆ ಸರ್ಕಾರದ ವಿದ್ಯಾರ್ಥಿವೇತನ ಮತ್ತು ಶಿಕ್ಷಣ ಶುಲ್ಕದಲ್ಲಿ ರಿಯಾಯಿತಿಯ ಕುರಿತು ಜ್ಞಾನವಿದ್ದು ಒಟ್ಟು 40(13.30%) ಮಹಿಳೆಯರಿಗೆ ಬುಡಕಟ್ಟು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದ ವ್ಯವಸ್ಥೆಯ ಅರಿವು, 25(8.20%) ಮಹಿಳೆಯರಿಗೆ ಸರಕಾರವು ಪುಸ್ತಕ ಮತ್ತು ಹಾಸ್ಟೆಲ್ ವ್ಯವಸ್ಥೆಯ ಅರಿವು ಹಾಗೂ ಐದು (1.53%)ರಷ್ಟು ಮಹಿಳೆಯರಿಗೆ, ವಿದ್ಯಾರ್ಥಿನಿಯರಿಗೆ ಉಚಿತ ಕಾಲೇಜಿನ ಶಿಕ್ಷಣದ ವ್ಯವಸ್ಥೆ ಇದೆ ಎನ್ನುವ ಮಾಹಿತಿ ಇದೆ. ಹಾಗೂ 38(12.67%) ಮಹಿಳೆಯರಿಗೆ ಈ ವಿಷಯದ ಮಾಹಿತಿ ಇಲ್ಲದೇ ಇರುವುದರಿಂದ ಅನ್ವಯಿಸುವುದಿಲ್ಲ.

ಬಹುಪಾಲು ಅಂದರೆ (262.87%) ಬುಡಕಟ್ಟು ಮಹಿಳೆಯರಿಗೆ, ವಿದ್ಯಾರ್ಥಿಗಳಿಗೆ ಸರಕಾರವು ಶಿಕ್ಷಣಕ್ಕೆ ಕೊಡಮಾಡಿದ ಯೋಜನೆಗಳ ಮಾಹಿತಿ ಇರುವುದನ್ನು ಈ ಕೋಷ್ಟಕವು ಸ್ಪಷ್ಟಪಡಿಸುತ್ತದೆ. ಮಕ್ಕಳ ಶಾಲೆಗೆ ಭೇಟಿ ನೀಡುವುದರಿಂದಲೂ, ಸ್ವಸಹಾಯ ಸಂಘದಲ್ಲಿ ಚರ್ಚೆಗಳಾಗುವುದರಿಂದಲೂ ಮತ್ತು ಹೆಚ್ಚಿನ ಎಲ್ಲಾ ಯೋಜನೆಗಳನ್ನು ಶಾಲಾ ಅಧ್ಯಾಪಕರು ಬುಡಕಟ್ಟು ವಿದ್ಯಾರ್ಥಿಗಳಿಗೆ ತಲುಪಿಸುವುದರಿಂದಲೂ ಮಹಿಳೆಯರಲ್ಲಿ ಈ ಕುರಿತಾದ ಜಾಗೃತಿ ಇರುವುದು ಕಂಡುಬಂದಿದೆ. ನಾಲ್ಕು ಬುಡಕಟ್ಟಿನ ಮಹಿಳೆಯರಲ್ಲಿ ತುಲನೆ ಮಾಡಿದಾಗ ಕೊರಗ ಬುಡಕಟ್ಟಿನ ಹೆಚ್ಚಿನ ಮಹಿಳೆಯರಲ್ಲಿ 40 ರಲ್ಲಿ 37 ಮಹಿಳೆಯರಿಗೆ ಈ ಯೋಜನೆಯ ಕುರಿತು ಜ್ಞಾನವಿರುವುದು ಕಂಡುಬಂದಿದೆ. ದಕ್ಷಿಣ ಕನ್ನಡದಲ್ಲಿ ಕೊರಗ ಅಭಿವೃದ್ಧಿ

ಸಂಘಗಳು ಬಹಳ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಾ ಯೋಜನೆಗಳನ್ನು ತಮ್ಮ ಸಮುದಾಯಕ್ಕೆ ಮುಟ್ಟಿಸುವುದರಿಂದ ಈ ಮಾಹಿತಿ ಅನೇಕ ಕೊರಗ ಮಹಿಳೆಯರಲ್ಲಿದೆ ಎಂಬುವುದನ್ನು ಪ್ರಸ್ತುತ ಅಧ್ಯಯನವು ತೋರಿಸುತ್ತದೆ.

## ಕೋಷ್ಟಕ ಸಂಖ್ಯೆ 3.18

## ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳ ಕುರಿತು ಪ್ರತಿಕ್ರಿಯಿಸಿದ ಅಂಕಿ ಅಂಶಗಳ ವಿವರಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳಿವೆ | 19 | 6.33 |
| 2 | ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳಿಲ್ಲ | 172 | 57.34 |
| 3 | ಅನ್ವಯಿಸುವುದಿಲ್ಲ | 109 | 36.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.18 ರ ಪ್ರಕಾರ 300(100) ಮಹಿಳೆಯರಲ್ಲಿ 19(6.33%) ಮಹಿಳೆಯರು ತಮ್ಮ ಮಕ್ಕಳಿಗೆ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳಿವೆ ಎಂದಿದ್ದಾರೆ. 172 (57.34%) ಮಹಿಳೆಯರು ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳು ಇಲ್ಲ ಎಂದರೆ, 109(36.33%) ಮಹಿಳೆಯರಿಗೆ ಶಾಲೆಗೆ ಹೋಗುವ ವಯಸ್ಸಿನ ಮಕ್ಕಳಿಲ್ಲದೇ ಇರುವುದರಿಂದ ಈ ವಿಷಯ ಅನ್ವಯಿಸುವುದಿಲ್ಲ.

ಪ್ರಸ್ತುತ ದಿನಗಳಲ್ಲಿ ಶಾಲಾ ಮಕ್ಕಳಿಗೆ ವಿಶೇಷವಾಗಿ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಹೆಚ್ಚಿನ ವೆಚ್ಚ ಭರಿಸಲು ಇಲ್ಲದೇ ಇರುವುದರಿಂದ ಹಾಗೂ ಅಲ್ಲಲ್ಲಿ ಸರಕಾರಿ ಶಾಲೆಗಳು ಇರುವುದರಿಂದ ಮಕ್ಕಳು ಶಾಲೆಗೆ ಹೋಗುವರೇ ಹೆಚ್ಚಿನ ಸಮಸ್ಯೆಗಳಿಲ್ಲ ಎಂದು ಹೆಚ್ಚಿನ ಮಹಿಳೆಯರು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

ಆದಾಗ್ಯೂ ಒಟ್ಟು 19(6.33%) ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಶೈಕ್ಷಣಿಕ ಸಮಸ್ಯೆಗಳನ್ನು ವ್ಯಕ್ತಪಡಿಸಿರುವುದನ್ನು ಮುಂದಿನ ಕೋಷ್ಟಕ ಸಂಖ್ಯೆ 3.19 ರಲ್ಲಿ ಗಮನಿಸಬಹುದು.

## ಕೋಷ್ಟಕ ಸಂಖ್ಯ 3.19

## ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳಗಿರುವ ವಿವಿಧ ಶೈಕ್ಷಣಿಕ ಸಮಸ್ಯೆಗಳ ಕುರಿತಾಗಿ ನೀಡಿದ ವಿವರಗಳು

| ಕ್ರ.ಸಂ | ವಿವಿಧ ಸಮಸ್ಯೆಗಳು | ಒಟ್ಟು | ಶೇಕಡವಾರು |
|---|---|---|---|
| 1 | ಅನಾರೋಗ್ಯ (ಅಂಗವಿಕಲತೆ) | 01 | 0.33 |
| 2 | ಬಡತನ | 09 | 3.00 |
| 3 | ಶಾಲೆಯ ಅಂತರ | 03 | 1.00 |
| 4 | ನಿರಾಸಕ್ತಿ | 06 | 2.00 |
| 5 | ಅಧ್ಯಾಪಕರ ಭಯ | 00 | 00 |
| 6 | ಇತರ | 00 | 00 |
| 7 | ಸಮಸ್ಯೆಗಳಿಲ್ಲ | 281 | 93.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.19ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳಿವೆ ಎಂದು 19(6.33%) ಮಹಿಳೆಯರು ಅಭಿಪ್ರಾಯಪಟ್ಟಿದ್ದು ಇದರಲ್ಲಿ ಒಂದು (0.33%) ಮಹಿಳೆ ಮಕ್ಕಳಗೆ ಅನಾರೋಗ್ಯದ (ಅಂಗವಿಕಲತೆ) ಸಮಸ್ಯೆ, ಒಂಭತ್ತು (3.00) ಮಹಿಳೆಯರು ಬಡತನದ ಸಮಸ್ಯೆ, ಮೂರು (1.00%) ಮಹಿಳೆಯರು ಶಾಲೆಗಿರುವ ಅಂತರ, ಹಾಗೂ ಆರು (2.00%) ಮಹಿಳೆಯರು ತಮ್ಮ ಮಕ್ಕಳಗೆ ಶಿಕ್ಷಣದಲ್ಲಿ ನಿರಾಸಕ್ತಿ ಎಂದು ಪ್ರತಿಕ್ರಯಿಸಿದ್ದಾರೆ. ಹಾಗೂ 281 (93.67%) ಮಹಿಳೆಯರು ತಮ್ಮ ಮಕ್ಕಳಗೆ ಶೈಕ್ಷಣಿಕ ಸಮಸ್ಯೆಗಳಿಲ್ಲ ಎಂದಿದ್ದಾರೆ. ಒಂಭತ್ತು (3.00%) ಬುಡಕಟ್ಟು ಮಹಿಳೆಯರು ಮಕ್ಕಳ ಕಲಿಕೆಗೆ ಬಡತನ ಸಮಸ್ಯೆಯಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಶಾಲಾ ಶಿಕ್ಷಣಕ್ಕೆ ವೈಯಕ್ತಿಕವಾಗಿ ಬಡತನ ಅಡ್ಡಿಯಾಗದು ಹಾಗೂ ಒಟ್ಟು ಕುಟುಂಬವನ್ನು ದೃಷ್ಟಿಯಲ್ಲಿರಿಸಿ ನೋಡಿದಾಗ ಆರ್ಥಿಕ ಸಮಸ್ಯೆಯೂ ಶಿಕ್ಷಣಕ್ಕೆ ಅಡ್ಡಿಯಾಗುತ್ತದೆ. ವಿಶೇಷವಾಗಿ ಮಕ್ಕಳಗೆ ನೀಡಬೇಕಾದ ಸಮತೋಲನ ಆಹಾರ, ಆರೋಗ್ಯ ಹದಗೆಟ್ಟಾಗ ಔಷಧಿಗೆ ಬೇಕಾಗುವ ವೆಚ್ಚ ಇವೆಲ್ಲವೂ ಪರೋಕ್ಷವಾಗಿ ಶಿಕ್ಷಣದ ಸಮಸ್ಯೆಗೆ

ಕಾರಣವಾಗಿದೆ. ಬುಡಕಟ್ಟು ಸಮುದಾಯದ ಮನೆಯೊಳಗಡೆ ಆಹಾರ ಸಾಮಾಗ್ರಿಗಳನ್ನು ಗಮನಿಸಿದರೆ, ಬೆರಳೆಣಿಕೆಯ ಮನೆಗಳಲ್ಲಿ ತರಕಾರಿಗಳ ಹಣ್ಣು – ಹಂಪಲುಗಳ, ಹಾಲಿನ ಮತ್ತು ಬೇಳೆ ಕಾಳುಗಳ ಸಂಗ್ರಹವಿದೆ. ಎಲ್ಲಿ ಅಲ್ಪ – ಸ್ವಲ್ಪ ಕೃಷಿ ಇದೆಯೋ ಅಲ್ಲಿ ತರಕಾರಿಗಳನ್ನು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಕೃಷಿ ಇಲ್ಲದ ಮನೆಗಳಲ್ಲಿ ಆ ದಿನದ ಅಡಿಗೆಗಾಗಿ ಆ ದಿನವೇ ಅಗತ್ಯ ಆಹಾರ ಸಾಮಾಗ್ರಿಗಳನ್ನು ತಂದು ಉಪಯೋಗಿಸುತ್ತಾರೆ. ಈ ನಿಟ್ಟಿನಲ್ಲಿ ಬುಡಕಟ್ಟು ಮಕ್ಕಳಿಗೆ ಅಗತ್ಯವಿರುವ ಪೋಷಕಾಂಶಗಳು ದೊರೆಯದೆ ಇರುವುದು ಸಹ ಆರೋಗ್ಯದ ದೃಷ್ಟಿಯಿಂದ ಶಿಕ್ಷಣಕ್ಕಿರುವ ಸಮಸ್ಯೆಯೇ ಆಗಿದೆ.

ಶಿಕ್ಷಣದಲ್ಲಿ ನಿರಾಸಕ್ತಿ ಅಲ್ಪಪ್ರಮಾಣದಲ್ಲಿ ಕುಡುಬಿ ಮತ್ತು ಕೊರಗ ಬುಡಕಟ್ಟು ಸಮುದಾಯದಲ್ಲಿ ಕಂಡು ಬಂದಿರುವ ಸಮಸ್ಯೆಯಾಗಿದೆ. (0.67% ಕುಡುಬಿ ಸಮುದಾಯದಲ್ಲಿ, 1.33% ಕೊರಗರಲ್ಲಿ ಸಮುದಾಯದಲ್ಲಿ)

ಬಡತನ, ಅತಿ ಸಣ್ಣ ವಯಸ್ಸಿಗೆ ದುಡಿತ, ಮಾರ್ಗದರ್ಶನದ ಕೊರತೆ, ಹೆತ್ತವರ ಅನಕ್ಷರತೆ, ಇವೆಲ್ಲ ಕುಡುಬಿ ಮಕ್ಕಳಲ್ಲಿ ಶಿಕ್ಷಣದಲ್ಲಿ ನಿರಾಸಕ್ತಿ ಮೂಡಿಸಿದೆ. ಶಾಲೆಗೆ ಹೋಗಲು ತುಂಬಾ ಒತ್ತಡ ಹಾಕಬೇಕು ಎಂಬುದು ಕುಡುಬಿ ತಾಯಂದಿರ ಅಭಿಪ್ರಾಯವಾಗಿದೆ.ಕೊರಗ ಸಮುದಾಯದ ಮನೆಗಳಲ್ಲಿ ಶಿಕ್ಷಣಕ್ಕೆ ಪೂರಕ ವಾತಾವರಣವಿಲ್ಲದೇ ಇರುವುದು, ಕುಟುಂಬದಲ್ಲಿ ಹೆತ್ತವರ ಮದ್ಯಪಾನದ ಚಟ, ಬಡತನ ಮುಂತಾದುವು ಕೊರಗ ಮಕ್ಕಳಿಗೆ ಶಿಕ್ಷಣಕ್ಕಿರುವ ಅಡ್ಡಿಗಳಾಗಿವೆ.

ಯು.ಎನ್.ಒ ದ ಸಾಮಾನ್ಯ ಸಭೆ (ಜನರಲ್ ಅಸೆಂಬ್ಲಿ) ಯಲ್ಲಿ ಮಕ್ಕಳ ಕ್ಷೇಮ ಮತ್ತು ಸರ್ವಾಂಗೀಣ ಅಭಿವೃದ್ಧಿಗಾಗಿ ಒಟ್ಟು 12 ಹಕ್ಕುಗಳನ್ನು ಉಲ್ಲೇಖಿಸಿದ್ದು ಪೌಷ್ಠಿಕ ಆಹಾರ ಸೇವನೆಯ ಹಕ್ಕು ಒಂದಾಗಿದೆ. ಪೌಷ್ಠಿಕ ಆಹಾರವು ಕಾರ್ಬೋಹೈಡ್ರೇಟ್, ಪ್ರೋಟೀನ್‌ಗಳು ವಿಟಮಿನ್ ಎ. ಬಿ. ಸಿ. ಡಿ. ಇ ಇತ್ಯಾದಿಗಳನ್ನು ಒಳಗೊಂಡಿರಬೇಕು. ಇವುಗಳನ್ನು ಅಗತ್ಯಕ್ಕೆ ಅನುಗುಣವಾಗಿ ಸೇವಿಸದಿದ್ದರೆ ಹಸಿವು, ಏಕಾಗ್ರತೆಯ ಕೊರತೆ, ಯಾವುದೇ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಆಸಕ್ತಿ ಇಲ್ಲದೇ ಇರುವ ಸಮಸ್ಯೆಗಳು ಉಂಟಾಗಿ ಶೈಕ್ಷಣಿಕವಾಗಿ ಹಿಂದುಳಿಯುವಿಕೆಗೆ ಕಾರಣವಾಗಿರುವುದರಿಂದ ಒಟ್ಟು ಬುಡಕಟ್ಟು ಕುಟುಂಬಗಳ ಆಹಾರ ಪದ್ಧತಿಯ ಕುರಿತು ಅಧ್ಯಯನದ ಅಗತ್ಯವಿದೆ.

## ಕೋಷ್ಟಕ ಸಂಖ್ಯೆ 3.20

## ಮಕ್ಕಳು ಶಾಲೆಯಲ್ಲಿ ಭಾಗವಹಿಸುವ ಕಾರ್ಯಕ್ರಮದಲ್ಲಿ ಬುಡಕಟ್ಟು ಮಹಿಳೆಯರು ಭಾಗವಹಿಸುವ ಕುರಿತಾದ ಅಂಕಿ ಅಂಶಗಳ ಹಂಚಿಕೆ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಭಾಗವಹಿಸುತ್ತೇವೆ | 175 | 58.33 |
| 2 | ಭಾಗವಹಿಸುವುದಿಲ್ಲ | 18 | 6.00 |
| 3 | ಅನ್ವಯಿಸುವುದಿಲ್ಲ | 107 | 35.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.20 ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 175(58.33%) ಬುಡಕಟ್ಟು ಮಹಿಳೆಯರು ಶಾಲೆಯಲ್ಲಿ ತಮ್ಮ ಮಕ್ಕಳ ಸಾಂಸ್ಕೃತಿಕ ಕಾರ್ಯಕ್ರಮದ ವೀಕ್ಷಣೆಯಲ್ಲಿ ಪಾಲ್ಗೊಳ್ಳುತ್ತಾರೆ. 18(6%) ಮಹಿಳೆಯರು ಮಕ್ಕಳ ಶಾಲಾ ಕಾರ್ಯಕ್ರಮದಲ್ಲಿ ಭಾಗವಹಿಸುವುದಿಲ್ಲ ಎಂಬ ಅಂಶವನ್ನು ಈ ಕೋಷ್ಟಕದಲ್ಲಿ ನೋಡಬಹುದು. ಹಾಗೂ 107 (35.67%) ಮಹಿಳೆಯರಿಗೆ ಶಾಲೆಗೆ ಹೋಗುವ ಮಕ್ಕಳಿಲ್ಲದೇ ಇರುವುದರಿಂದ ಈ ವಿಷಯ ಅನ್ವಯಿಸುವುದಿಲ್ಲ.

ಹೆಚ್ಚಿನ ಬುಡಕಟ್ಟು ಮಹಿಳೆಯರು ಶಾಲೆಯಲ್ಲಿ ತಮ್ಮ ಮಕ್ಕಳ ಸಾಂಸ್ಕೃತಿಕ ಕಾರ್ಯಕ್ರಮವನ್ನು ವೀಕ್ಷಿಸಲು ಬಹಳ ಮುತುವರ್ಜಿಯಿಂದ ಹೋಗುತ್ತಾರೆ. 18(6%) ಬುಡಕಟ್ಟು ಮಹಿಳೆಯರು ಮನೆಯ ಇತರ ಸದಸ್ಯರು ಪಾಲ್ಗೊಳ್ಳುವುದರಿಂದ ಮತ್ತು ಕೆಲಸದ ಒತ್ತಡಗಳಿಂದ ಭಾಗವಹಿಸಲು ಅಸಾಧ್ಯವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಅಧ್ಯಯನದ ಎಲ್ಲಾ ಮಾಹಿತಿದಾರರು ಅಂದರೆ ಎಲ್ಲಾ ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳ ಪ್ರತಿಭೆಯನ್ನು ಪ್ರೋತ್ಸಾಹಿಸಬೇಕು ಮತ್ತು ಅವರು ಏನಾದರೂ ಒಂದು ಸಣ್ಣ ಸಾಧನೆಯನ್ನು ಮಾಡಿದರೂ ಅವರನ್ನು ಅಭಿನಂದಿಸುವುದು ಹೆತ್ತವರಾದ ನಮ್ಮ ಕರ್ತವ್ಯ ಎನ್ನುತ್ತಾರೆ.

## ಕೋಷ್ಟಕ ಸಂಖ್ಯೆ 3.21

## ಮಕ್ಕಳನ್ನು ಸರಿಯಾಗಿ ಬೆಳೆಸುವ ಹೆತ್ತವರ ಜವಾಬ್ದಾರಿಯ ಕುರಿತಾದ ವಿವರಣೆ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ತಂದೆ | 12 | 04.00 |
| 2 | ತಾಯಿ | 37 | 12.33 |
| 3 | ಇಬ್ಬರದ್ದು | 238 | 79.34 |
| 4 | ಹಿರಿಯರು | - | - |
| 5 | ಶಿಕ್ಷಕರು | - | - |
| 6 | ಎಲ್ಲರೂ | 13 | 4.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.21 ರಲ್ಲಿ ಒಟ್ಟು 300(100.00) ಬುಡಕಟ್ಟು ಮಹಿಳೆಯರಲ್ಲಿ 12(4.00) ಮಹಿಳೆಯರು ಮುಖ್ಯವಾಗಿ ಮಕ್ಕಳನ್ನು ಬೆಳೆಸುವ ಹೊಣೆ ತಂದೆಯದ್ದು ಮಾತ್ರ ಅನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದು, 37(12.33) ಮಹಿಳೆಯರು ಮುಖ್ಯ ಜವಾಬ್ದಾರಿ ತಾಯಿಯದ್ದು ಮಾತ್ರ ಎಂದಿದ್ದಾರೆ. ಹೆಚ್ಚಿನ ಸಂಖ್ಯೆಯ ಅಂದರೆ 238(79.34%) ಮಹಿಳೆಯರು ಮಕ್ಕಳನ್ನು ಬೆಳೆಸುವ ಮುಖ್ಯ ಹೊಣೆ – ತಂದೆ ಮತ್ತು ತಾಯಿಯದ್ದು ಎಂದಿದ್ದಾರೆ. ಹಾಗೆಯೇ 13(4.33%) ಮಹಿಳೆಯರು, ಹೆತ್ತವರು, ಹಿರಿಯರದ್ದು ಶಿಕ್ಷಕರೆಲ್ಲರಿಗೂ ಮಕ್ಕಳನ್ನು ಬೆಳೆಸುವ ಹೊಣೆಯಿದೆ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹೆಚ್ಚಿನ ಸಂಖ್ಯೆಯ ಅಂದರೆ 238(79.34%) ಬುಡಕಟ್ಟು ಮಹಿಳೆಯರು ತಮ್ಮ ಮಕ್ಕಳನ್ನು ಬೆಳೆಸುವ ಹೊಣೆ ಮುಖ್ಯವಾಗಿ ತಂದೆ ತಾಯಿಯರದ್ದು ಎನ್ನುವ ಅಭಿಪ್ರಾಯ ಮಂಡಿಸಿರುವುದರಿಂದ ಇದು ಬುಡಕಟ್ಟು ಮಹಿಳೆಯರ ಕುಟುಂಬದಲ್ಲಿ ಬದಲಾಗುತ್ತಿರುವ ಜವಾಬ್ದಾರಿಯ ಕುರಿತಾದ ಯೋಚನೆಯನ್ನು ಪ್ರತಿಬಿಂಬಿಸುತ್ತದೆ. ಬುಡಕಟ್ಟು ಕುಟುಂಬ ಜೀವನವು ಬಹಳ ಸರಳವಾಗಿದ್ದು ಆತ್ಮೀಯತೆ, ಭಾವನಾತ್ಮಕತೆ ಹಾಗೂ ಸಹಜತೆಗಳಿಂದ ಕೂಡಿದ್ದು ಪಿತೃ ಪ್ರಧಾನ ಮತ್ತು ಮುಖ್ಯವಾಗಿ ಹೆಚ್ಚಿನ ಬುಡಕಟ್ಟುಗಳಲ್ಲಿ ಮಾತೃ ಪ್ರಧಾನ ವ್ಯವಸ್ಥೆ ರೂಢಿಯಲ್ಲಿದೆ. ಮಾತೃ ಪ್ರಧಾನ ವ್ಯವಸ್ಥೆಯಲ್ಲಿ ಮಾತೆಯೇ ಮನೆಯ ಅಧಿಪತಿ. ಸತತ ದುಡಿಯುತ್ತ, ಕುಟುಂಬ ಮತ್ತು ಮಕ್ಕಳನ್ನು ಬೆಳೆಸುವಲ್ಲಿ ಬಹಳ ಮುಖ್ಯ ಪಾತ್ರ ವಹಿಸಿದರೂ ಆಧುನೀಕರಣದ ಪ್ರಭಾವದಿಂದಾಗಿ ಯೋಚನೆಗಳಲ್ಲಿ ಬದಲಾವಣೆಯಾಗಿದ್ದು ಮಕ್ಕಳ ಸಮಗ್ರ

ಅಭಿವೃದ್ಧಿಗೆ ತಂದೆಯ ಪಾತ್ರ ತಾಯಿಯಷ್ಟೇ ಮುಖ್ಯ ಎನ್ನುವ ಅಭಿಮತ ಬುಡಕಟ್ಟು ಮಹಿಳೆಯರಲ್ಲಿ ಸ್ಪಷ್ಟವಾಗಿದೆ.

## ಕೋಷ್ಟಕ ಸಂಖ್ಯೆ 3.22

## ಹೆಣ್ಣು ಮಕ್ಕಳ ವಿವಾಹಕ್ಕೆ ಸೂಕ್ತ ವಯಸ್ಸಿನ ಕುರಿತು ಬುಡಕಟ್ಟು ಮಹಿಳೆಯರ ಅಭಿಪ್ರಾಯ

| ಕ್ರ.ಸಂ | ವಯಸ್ಸು | ಆವೃತ್ತಿ (ಒಟ್ಟು) | ಶೇ | ಮಧ್ಯಬಿಂದು (ಎಕ್ಸ್) | ಎಫ್.ಎಕ್ಸ್ |
|---|---|---|---|---|---|
| 1 | 12-14 | - | - | - | - |
| 2 | 15-17 | - | - | - | - |
| 3 | 18-20 | 13 | 4.33 | 19 | 247 |
| 4 | 20 ರಮೇಲೆ | 287 | 95.67 | 219 | 6027 |
|  | ಒಟ್ಟು | 300 | 100.00 |  | 6274 |

$$\frac{Efx}{n} = \frac{6274}{300} = 20.91$$

ಮೇಲಿನ ಕೋಷ್ಟಕ ಸಂಖ್ಯೆ 3.22 ರಲ್ಲಿ ವಿವಾಹಕ್ಕೆ ಸೂಕ್ತ ವಯಸ್ಸನ್ನು ನಾಲ್ಕು ಭಾಗಗಳನ್ನಾಗಿ ಮಾಡಲಾಗಿದ್ದು 12 ರಿಂದ 14, 15-17, 18-20 ಮತ್ತು 20 ರ ಮೇಲೆ ಎಂಬುದಾಗಿದೆ. 300 ರಲ್ಲಿ (100.00) ಯಾವೊಬ್ಬ ಬುಡಕಟ್ಟು ಮಹಿಳೆಯ ಹೆಣ್ಣು ಮಕ್ಕಳಿಗೆ ಮದುವೆಯಾಗಲು 12-14, ಅಥವಾ 15 ರಿಂದ 17 ವಯಸ್ಸಾಗಬೇಕೆಂದು ಅಭಿವ್ಯಕ್ತಪಡಿಸಿಲ್ಲ. ಆದರೆ 13(4.33%) ಮಹಿಳೆಯರು ಹೆಣ್ಣು ಮಕ್ಕಳಿಗೆ 18 ರಿಂದ 20. ಮದುವೆ ಯೋಗ್ಯ ವಯಸ್ಸು ಎಂದರೆ, ಸುಮಾರು 287(69.67%) ಮಹಿಳೆಯರು 20 ರ ಮೇಲೆ ಹೆಣ್ಣು ಮಕ್ಕಳಿಗೆ ವಿವಾಹ ನಿಶ್ಚಯಿಸುವುದು ಉತ್ತಮ ಎಂದು ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಅತ್ಯಂತ ಹೆಚ್ಚಿನ ಎಂದರೆ 287(95.67%) ಮಹಿಳೆಯರು ಬಾಲ್ಯ ವಿವಾಹ ಹಾಗೂ ಅದರ ಪರಿಣಾಮದ ಕುರಿತು ಅರಿವು ಹೊಂದಿರುವುದನ್ನು ಅಧ್ಯಯನ ಸಾಬೀತುಪಡಿಸುತ್ತದೆ.

ಬುಡಕಟ್ಟು ಮಹಿಳೆಯರ ಅಭಿಪ್ರಾಯದಂತೆ ಹೆಣ್ಣು ಮಕ್ಕಳಿಗೆ ಸರಾಸರಿ ಮದುವೆ ವಯಸ್ಸು 20.91 ಆಗಿರುತ್ತದೆ. ಈ ಕೋಷ್ಟಕದಲ್ಲಿ ನಮೂದಿಸಲ್ಪಟ್ಟ ಅಂಕಿ ಅಂಶಗಳು ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚುತ್ತಿರುವ ವಿವಾಹ ಯೋಗ್ಯ ವಯಸ್ಸನ್ನು ಹಾಗೂ ಈ ಬಗ್ಗೆ ಬದಲಾಗುತ್ತಿರುವ ಅಭಿಪ್ರಾಯವನ್ನು ಸೂಚಿಸುತ್ತದೆ.

## ಕೋಷ್ಟಕ ಸಂಖ್ಯೆ 3.23

## ಋತುಮತಿಯಾದಾಗ ಹೆಣ್ಣು ಅಸ್ಪೃಶ್ಯಳೇ ಎನ್ನುವ ವಿಚಾರದಲ್ಲಿ ಬುಡಕಟ್ಟು ಮಹಿಳೆಯರು ನೀಡಿದ ಅಭಿಪ್ರಾಯದ ಕುರಿತಾದ ವಿವರಣೆ.

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಹೌದು | 236 | 78.67 |
| 2 | ಅಲ್ಲ | 64 | 21.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.23ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 236(78.67%) ಮಹಿಳೆಯರು ಹೆಣ್ಣು ಋತುಮತಿಯಾದಾಗ, ಅಸ್ಪೃಶ್ಯಳು ಎಂದು ಅನಿಸಿಕೆ ವ್ಯಕ್ತಪಡಿಸಿದ್ದು 64(21.33%) ಮಹಿಳೆಯರು ಹೆಣ್ಣು ಋತುಮತಿಯಾದಾಗ ಅಸ್ಪೃಶ್ಯಳಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಅಸ್ಪೃಶ್ಯತೆ ಎನ್ನುವ ಪದವನ್ನು ಬುಡಕಟ್ಟು ಮಹಿಳೆಯರು ದೈವ ದೇವರುಗಳಿಗೆ ಜೋಡಿಸಿ ಇಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬುಡಕಟ್ಟು ಮಹಿಳೆಯರಲ್ಲಿ ಪ್ರಥಮ ಬಾರಿಗೆ ಹೆಣ್ಣು ಋತುಮತಿಯಾದಾಗ **'ನೀರ ಮದುವೆ,'** **'ಮದಿಮಾಳ ಮದಿಮೆ'**, **'ಕರಪತ್ತಾವುನಿ'** ಎನ್ನುವ ಆಚರಣೆಯನ್ನು ಈಗಲೂ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಕಡೆ ನೆರವೇರಿಸುವುದು ಗಮನಾರ್ಹವಾಗಿದೆ.

ಹುಡುಗಿ ಮೈನೆರೆದಾಗ ಆಕೆಯ ವಾಸಕ್ಕೆ ಪ್ರತ್ಯೇಕವಾದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಋತುಮಾತಿಯಾದ 12ನೇ ದಿನಕ್ಕೆ ಈ ಆಚರಣೆ ನಡೆಯುತ್ತದೆ. ಅರಿಶಿನ ಎಣ್ಣೆ, ಸೀಗೆ ಮುಂತಾದವುಗಳನ್ನು ಹುಡುಗಿಯ ಮೈಗೆ ಮುಟ್ಟಿಸಿ ಸ್ನಾನದ ನಂತರ ಹುಡುಗಿಯನ್ನು ಮದುಮಗಳಂತೆ ಅಲಂಕರಿಸುತ್ತಾರೆ. ಕಳಸದ ತೀರ್ಥವನ್ನು ಹುಡುಗಿಯ ತಲೆಯ ಮೇಲೆ ಹಾಗೂ ಇಡೀ ಮನೆಯೊಳಗೆ ಪ್ರೋಕ್ಷಿಸುತ್ತಾರೆ. 13ನೇ ದಿನ ಹುಡುಗಿಯು ಮನೆ ಪ್ರವೇಶಿಸಿ ಒನಕೆ, ಒಲೆ, ಮಡಕೆಗಳನ್ನು ಹಾಗೂ ಫಲ ಕೊಡುವ ಮರಗಳನ್ನು ಮುಟ್ಟಿ ನಮಸ್ಕರಿಸಬೇಕು. ಈ ಎಲ್ಲಾ ಆಚರಣೆಗಳ ಹಿಂದಿನ ಉದ್ದೇಶವೆಂದರೆ ಹುಡುಗಿ ದೊಡ್ಡವಳಾಗಿದ್ದಾಳೆ. ವಿವಾಹಕ್ಕೆ ಸಿದ್ಧಳಾಗಿದ್ದು, ಅಡುಗೆ ಮನೆಯ ಜವಾಬ್ದಾರಿ ಹೊರುತ್ತಾಳೆ ಹಾಗೂ ಗಿಡಮರಗಳು ಹೂವು ಹಣ್ಣುಗಳ ಫಲ ಕೊಡುವಂತೆ ಹುಡುಗಿಯೂ ಸಂತಾನ ನೀಡುವಲ್ಲಿ ಸಫಲಳಾಗಲಿ ಎಂಬುದು ಆಗಿದೆ. ಇದೇ ಸಂದರ್ಭದಲ್ಲಿ ಹಿರಿಯರ ಕಾಲು ಮುಟ್ಟಿ

ನಮಸ್ಕರಿಸುವಾಗ ಹಿರಿಯರು ಈ ಮೇಲಿನ ಮಾತುಗಳೊಂದಿಗೆ ಆಕೆಯನ್ನು ಆಶೀರ್ವದಿಸುತ್ತಾರೆ.

ಪಟ್ಟಣಕ್ಕೆ ಹತ್ತಿರವಿರುವ ಬುಡಕಟ್ಟು ಸಮುದಾಯದಲ್ಲಿ ಹಾಗೂ ಪಟ್ಟಣದಲ್ಲಿರುವ ಬುಡಕಟ್ಟು ಸಮುದಾಯದಲ್ಲಿ ಈ ಆಚರಣೆ, ಕಡಿಮೆಯಾಗುತ್ತಿದ್ದರೂ ಗ್ರಾಮೀಣ ಬುಡಕಟ್ಟು ಪ್ರದೇಶದಲ್ಲಿ ಅಲ್ಲಲ್ಲಿ ಈ ಆಚರಣೆ ರೂಢಿಯಲ್ಲಿದೆ.

ಹೆಣ್ಣು ಮುಟ್ಟಾದಾಗ ಅಸ್ಪೃಶ್ಯಳಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿರುವ ಬುಡಕಟ್ಟು ಮಹಿಳೆಯರಲ್ಲಿ ಅತ್ಯಧಿಕ ಹೆಚ್ಚಿನ ಸಂಖ್ಯೆಯ ಮಹಿಳೆಯರು ಕೊರಗ ಬುಡಕಟ್ಟು ಸಮುದಾಯಕ್ಕೆ ಸೇರಿದವರು (ಕೊರಗ ಮಹಿಳೆಯರು 22.55%, ಕುಡುಬಿ 23%, ಮರಾಠಿ ನಾಯ್ಕ 14%, ಮತ್ತು ಮಲೆಕುಡಿಯರು 8.33%)

ಕೊರಗ ಸಂಘಗಳು ಬಹಳ ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿರುವುದು ಮತ್ತು ಸಂಘಗಳ ಸಭೆಗಳಲ್ಲಿ ಮಹಿಳೆಯರ ಆರೋಗ್ಯ ಸ್ಥಿತಿಯ ಬಗ್ಗೆ, ಋತುಮತಿಯಾಗುವುದು, ಋತುಬಂಧ, ಮಕ್ಕಳ ಶಿಕ್ಷಣ, ಸಂಘಟನೆಯ ಪ್ರಯೋಜನಗಳು ಇತ್ಯಾದಿಗಳ ಕುರಿತು ಆಗಾಗ ಚರ್ಚೆಗಳು ನಡೆಯುವುದರಿಂದ ಕೊರಗ ಮಹಿಳೆಯರಲ್ಲಿ ಈ ಕುರಿತಾದ ಮಾಹಿತಿ ಅಧಿಕವಾಗಿದೆ.

ಗಂಗಾಧರ ದೈವಜ್ಞ ಅವರು 'ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ' ಎಂಬ ತಮ್ಮ ಅಧ್ಯಯನದಲ್ಲಿ ಗೌಳಿಗರು, ಕಾಡುಕುರುಬರು, ಜೇನು ಕುರುಬರ ಸಮುದಾಯಗಳಲ್ಲಿ ಹೆಣ್ಣು ಋತುಮತಿಯಾದಾಗ ಅವರವರ ಆರ್ಥಿಕ ಅನುಕೂಲತೆಗೆ ತಕ್ಕಂತೆ ಆಚರಿಸಿ ಕೊಳ್ಳುವುದನ್ನು ಪ್ರಸ್ತುತ ಪಡಿಸಿದ್ದಾರೆ. ಅಲ್ಲದೆ ಋತುಮತಿಯಾದ ಹೆಣ್ಣು ಅಶುದ್ಧಳು ಎಂದು ಭಾವಿಸಲಾಗುತ್ತದೆ. ಹಾಗೂ ಅವಳಿಗಾಗಿ ಪ್ರತ್ಯೇಕ ಸೊಪ್ಪಿನ ಗುಡಿಸಲನ್ನು ನಿರ್ಮಿಸಲಾಗುತ್ತದೆ. ಹನ್ನೊಂದು ದಿನಗಳವರೆಗೆ ಪ್ರತ್ಯೇಕವಾಗಿ ವಾಸಮಾಡಬೇಕಾಗಿದ್ದು ಅವಳನ್ನು ಹಸಿ ಮೈಯವಳು ಎಂದು ಕಾಳಜಿ ವಹಿಸುತ್ತಾರೆ. ಅಲ್ಲದೆ ಈ ಸಂದರ್ಭದಲ್ಲಿ ಪೌಷ್ಠಿಕ ಆಹಾರವನ್ನು ನೀಡುತ್ತಾರೆಂಬ ಉಲ್ಲೇಖ ಅಧ್ಯಯನದಲ್ಲಿದೆ. ಋತುಮತಿಯಾದ ಹೆಣ್ಣಿಗೆ ಆಚರಿಸುವ ಆಚರಣೆಗಳಲ್ಲಿ ಫಲವಂತಿಕೆಯ ಆಶಯವಿದೆ. ಎನ್ನುವುದನ್ನು ಅಧ್ಯಯನಕಾರರು ಸ್ಪಷ್ಟಪಡಿಸಿದ್ದಾರೆ. (2000: ಪು. ಸಂ 44 ರಿಂದ 53)

## ಕೋಷ್ಟಕ ಸಂಖ್ಯೆ 3.24

## ಬುಡಕಟ್ಟು ಮಹಿಳೆಯರು ಋತುಮತಿಯಾಗಿರುವ ಸಂದರ್ಭಕ್ಕೆ ಅಸ್ಪೃಶ್ಯಳು ಅನ್ನುವುದಕ್ಕೆ ಕೊಟ್ಟ ಕಾರಣಗಳು

| ಕ್ರ.ಸಂ | ಕಾರಣಗಳು | ಒಟ್ಟು | ಶೇಕಡವಾರು |
|---|---|---|---|
| 1 | ಸಂಪ್ರದಾಯ | 29 | 9.67 |
| 2 | ದೈವ/ದೇವರು | 207 | 69.00 |
| 3 | ಇತರ ಕಾರಣಗಳು | 64 | 21.33 |
| 4 | ಅನ್ವಯಿಸುವುದಿಲ್ಲ | – | – |
| 5 | ಒಟ್ಟು | 300 | 100 |

ಕೋಷ್ಟಕ ಸಂಖ್ಯೆ 3.24 ರಲ್ಲಿ ಒಟ್ಟು 236 (78.67%) ಮಹಿಳೆಯರಲ್ಲಿ 29(12.28%) ಮಹಿಳೆಯರು ಹಿಂದಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯ ಆದುದರಿಂದ ನಾವು ಮುಂದುವರಿಸುತ್ತಿದ್ದೇವೆ. ಹಾಗೆಯೇ 207(87.72%) ಮಹಿಳೆಯರು ಮನೆಯೊಳಗೆ ದೈವ/ದೇವರುಗಳಿರುವುದರಿಂದ ಮುಟ್ಟಾದಾಗ ಹೆಣ್ಣು ಅಸ್ಪೃಶ್ಯಳು ಎಂದಿದ್ದಾರೆ.

ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚಿನವರು ಕೂಡು ಕುಟುಂಬದಲ್ಲಿರದೆ ಸಣ್ಣ ಕುಟುಂಬ (Nuclear)ದಲ್ಲಿ ವಾಸಮಾಡುತ್ತಿರುವುದರಿಂದ ಮುಟ್ಟಾದಾಗ ಮನೆಯಲ್ಲಿ ಹೆಚ್ಚಿನ ಸಂಪ್ರದಾಯಗಳನ್ನು ಪಾಲಿಸುವುದಿಲ್ಲ. ಮುಟ್ಟಾದಾಗ ಎಂದಿನಂತೆ ತಲೆಸ್ನಾನ ಮಾಡಿ ತಮ್ಮ ದೈನಂದಿನ ಕೆಲಸಗಳನ್ನು ಮಾಡುತ್ತಾರೆ. ಅವರ ಮಾತುಗಳ ಪ್ರಕಾರ ಕುಟುಂಬದ ಮೂಲ ಮನೆಗಳಲ್ಲಿ ಮಾತ್ರ ದೈವದ/ದೇವರುಗಳ ಕೋಣೆಗೆ ಋತುಮತಿಯಾದವರು ಒಳಹೋಗುವುದಿಲ್ಲ. ಕುಟುಂಬದ ಮೂಲ ಮನೆಯಲ್ಲಿ ವರ್ಷಕ್ಕೊಮ್ಮೆ **'ಪರ್ವ'** ಮಾಡುವುದರಿಂದ ಬುಡಕಟ್ಟು ಸಮುದಾಯದ ದೈವಗಳಾದ ಕಲ್ಲುರ್ಟಿ, ಪಂಜುರ್ಲಿ, ವಿಷ್ಣುಮೂರ್ತಿ, ಮಂತ್ರದೇವತೆ, ರಕ್ತೇಶ್ವರಿ ಹಾಗೂ ವಿಶೇಷವಾಗಿ ಕೊರಗರಲ್ಲಿ ಬೈಕಾಡ್ತಿ, ಕೊರಗಜ್ಜ ದೈವಗಳು ಮುಂತಾದವುಗಳನ್ನು ಆರಾಧಿಸುವುದರಿಂದ ಈ ಮನೆಗಳಲ್ಲಿ ಋತುಮತಿಯಾದ ಮಹಿಳೆಯರು ತುಂಬಾ ಕಟ್ಟುನಿಟ್ಟಾಗಿ ಕೆಲವು ನಿಯಮಗಳನ್ನು ಪಾಲಿಸುತ್ತಾರೆ. (**ಪರ್ವ** ಎಂದರೆ ಕೂಡು ಕುಟುಂಬ ಪದ್ಧತಿಯಲ್ಲಿ ಕುಟುಂಬದ ಸದಸ್ಯರೆಲ್ಲರೂ ಸೇರಿ ವರ್ಷಕ್ಕೊಮ್ಮೆ ತಮ್ಮ ಕುಟುಂಬದ

ಮುಖ್ಯ ಮನೆಯಲ್ಲಿ ಅಥವಾ ಆರಾಧನಾ ಕ್ಷೇತ್ರದಲ್ಲಿ ಒಟ್ಟು ಸೇರಿ ತಾವು ಆರಾಧಿಸಿಕೊಂಡು ಬರುತ್ತಿರುವ ದೈವ/ದೇವರುಗಳಿಗೆ ತಮ್ಮ ಕಾಣಿಕೆಯನ್ನು/ಪ್ರಾರ್ಥನೆಯನ್ನು ನಿವೇದಿಸಿ ಅವರ ಕೃಪಾಕಟಾಕ್ಷತೆಯನ್ನು ಗಳಿಸುವ ಪ್ರಕ್ರಿಯೆ.) ಋತುಮತಿಯಾದ ಮಹಿಳೆ ಮೂಲ ಕುಟುಂಬದ ಮನೆಯಲ್ಲಿ ಐದು ರಿಂದ ಏಳು ದಿನಗಳ ಕಾಲ ತಮಗೆ ಇರುವ ಪ್ರತ್ಯೇಕ ಕೋಣೆಯಲ್ಲಿ ವಾಸ ಮಾಡುತ್ತಾಳೆ. ಆ ಕೋಣೆಯಲ್ಲಿ ಊಟ, ನಿದ್ರೆಗೆ ಕನಿಷ್ಟ ಸೌಕರ್ಯಗಳಿದ್ದು ಮನೆಯ ಇತರ ಸದಸ್ಯರನ್ನು ಆಶ್ರಯಿಸುವುದು ಈಗಲೂ ಕಂಡುಬರುತ್ತದೆ. ಕುಟುಂಬದ ಮೂಲ ಮನೆಯಲ್ಲಿರುವ ಕಾಲೇಜಿಗೆ ಹೋಗುವ ಬುಡಕಟ್ಟು ಹೆಣ್ಣು ಮಕ್ಕಳು ಈಗಲೂ ಈ ಸಂಪ್ರದಾಯವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯರು ಪ್ರಕೃತಿ ಆರಾಧನೆಯೊಂದಿಗೆ ದೈವಗಳಲ್ಲಿ ಬಹಳ ಗೌರವ ಭಕ್ತಿಯಿರುವುದನ್ನು ಗಮನಿಸಬಹುದು. ಹಾಗೆಯೆ ಋತುಮತಿಗೆ ಸಂಬಂಧಿಸಿ ಮಹಿಳೆಯರ ಮೇಲಿನ ಅತಿ ನಿರ್ಬಂಧಗಳು ಬುಡಕಟ್ಟು ಸಮುದಾಯಗಳಲ್ಲಿನ ಪುರುಷ ಪ್ರಧಾನ ಅಂಶಗಳನ್ನು ತೋರಿಸುತ್ತದೆ.

ಬಿ.ಎ ವಿವೇಕ ರೈ ಮತ್ತು ಡಿ. ಯದುಪತಿಗೌಡ ಅವರು ಮಲೆಕುಡಿಯರ ಕುರಿತಾದ ತಮ್ಮ ಅಧ್ಯಯನದಲ್ಲಿ, ಮಲೆಕುಡಿಯರಲ್ಲಿ ಹೆಣ್ಣು ಋತುಮತಿಯಾದಾಗ ಅವಳು ಮದುಮಗಳಾಗಿದ್ದಾಳೆ ಎನ್ನುತ್ತಾರೆ. ಹೆಣ್ಣನ್ನು ಕೂಡಲೇ ಅವಳ ಮನೆಯಿಂದ ಹೊರಗಡೆ ಕಳುಹಿಸಿ ನೆರೆಹೊರೆಯ ಐದು ಅಥವಾ ಏಳು ಜನ ಸ್ವಜಾತಿ ಮಹಿಳೆಯರು ಋತುಮತಿಯಾದ ಹೆಣ್ಣಿನ ತಲೆಗೆ ನೀರು ಹೊಯ್ಯುತ್ತಾರೆ. ಆಮೇಲೆ ಅವಳು ಸ್ನಾನ ಮಾಡಿ ಬೇರೆ ಗುಡಿಸಲಲ್ಲಿ ಹನ್ನೆರಡು ದಿನಗಳವರೆಗೆ ಇರುತ್ತಾಳೆ. ಹನ್ನೆರಡನೇ ದಿನ ಮದುಮಗಳ ಮದುವೆ ಮಾಡುತ್ತಾರೆ. ಆಮೇಲೆ ಐದು ಅಥವಾ ಏಳು ಜನ ಮಹಿಳೆಯರು ಒಟ್ಟಾಗಿ ಮದುಮಗಳ ಪಾದ, ಮೊಣಕಾಲು, ಭುಜಕ್ಕೆ ಅರಿಶಿನ ಎಣ್ಣೆ, ಮತ್ತು ಸೀಗೆಯನ್ನು ಗರಿಕೆಹುಲ್ಲಿನಿಂದ ಮುಟ್ಟಿಸುತ್ತಾರೆ. ಈ ಸಂಸ್ಕಾರವನ್ನು **"ಪಿಲಿ ಕಳೆಯುವುದು"** ಎನ್ನುತ್ತಾರೆ. ಆಮೇಲೆ ಸ್ನಾನ ಮಾಡಿಸಿ ಹೊಸ ಬಟ್ಟೆಯೊಂದಿಗೆ ಬಾವಿ ಅಥವಾ ನದಿಯ ಬದಿಯಲ್ಲಿ ಗಂಗೆ ಪೂಜೆಯನ್ನು ಮದುಮಗಳಿಂದ ಮಾಡಿಸಿ, ಆಕೆಯನ್ನು ಮಣೆಯಲ್ಲಿ ಕುಳ್ಳಿರಿಸಿ, ಸ್ವಜಾತಿ ಬಂಧುಗಳೆಲ್ಲ ಉಡುಗೊರೆ ನೀಡುತ್ತಾರೆ. ಆಮೇಲೆ ಸೋದರ ಮಾವ ಆಕೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗುವ ಪದ್ಧತಿ ಇದ್ದು ಎರಡು ದಿನ ಕಳೆದು ಹುಡುಗಿಯ ತಂದೆ ಆಕೆಯ ಸೋದರ ಮಾವನೊಂದಿಗೆ ಹೋಗಿ ಕರೆದುಕೊಂಡು ಬರುತ್ತಾರೆ. ಮದುಮಗಳ ಮದುವೆಯನ್ನು ಮಲೆಕುಡಿಯರು ಈಗಲೂ ತಪ್ಪದೆ ನಡೆಸುತ್ತಾರೆಂದು ಅಧ್ಯಯನದಲ್ಲಿ ಉಲ್ಲೇಖವಿದೆ. (1996: ಪು.ಸಂ 12)

## ಕೋಷ್ಟಕ ಸಂಖ್ಯೆ 3.25

## ಬುಡಕಟ್ಟು ಮಹಿಳೆಯರಲ್ಲಿ ಋತುಮತಿಯಾಗುವ ಪ್ರಕ್ರಿಯೆಯ ಜ್ಞಾನದ ಕುರಿತಾದ ವಿವರಣೆ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಋತುಮತಿಯಾಗುವ ಕುರಿತು ಜ್ಞಾನವಿದೆ | 153 | 51.00 |
| 2 | ಋತುಮತಿಯಾಗುವ ಕುರಿತು ಜ್ಞಾನವಿಲ್ಲ | 96 | 32.00 |
| 3 | ಕೊಂಚಮಟ್ಟಿಗೆ | 51 | 17.00 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.25 ಬುಡಕಟ್ಟು ಮಹಿಳೆಯರಲ್ಲಿ ಋತುಮತಿಯಾಗುವುದರ ಪ್ರಕ್ರಿಯೆಯ ಜ್ಞಾನವನ್ನು ಬಿಂಬಿಸುತ್ತದೆ. ಒಟ್ಟು 300(100%) ಮಹಿಳೆಯರಲ್ಲಿ 153(51.00%) ಮಹಿಳೆಯರಿಗೆ ಋತುಮತಿಯಾಗುವುದರ ಕುರಿತಾದ ಜ್ಞಾನವಿದ್ದು 96(32.00%) ಮಹಿಳೆಯರು ಈ ಕುರಿತು ತಮಗೆ ಜ್ಞಾನವಿಲ್ಲ ಎಂದು ಅಭಿಪ್ರಾಯಪಟ್ಟರೆ 51(17.00%) ಮಹಿಳೆಯರು ಋತುಮತಿಯಾಗುವುದರ ಕುರಿತು ತಮಗೆ ಅಲ್ಪ ಮಾಹಿತಿ ಇದೆ ಎಂದಿದ್ದಾರೆ. ಸ್ವಸಹಾಯ ಸಂಘಗಳಲ್ಲಿ ತಮ್ಮನ್ನು ಕೆಲವು ವರ್ಷಗಳಿಂದ ತೊಡಗಿಸಿಕೊಂಡ ಮಹಿಳೆಯರಿಗೆ ಋತುಮತಿಯಾಗುವುದರ ಕುರಿತು ಮಾಹಿತಿ ಇದೆ. ಹಾಗೂ ಈ ವಿಚಾರದ ಕುರಿತು ಮಾತಾಡುವಾಗ ಸಹಜ ರೀತಿಯಲ್ಲಿ ಯಾವುದೇ ರೀತಿಯ ಅಳುಕಿಲ್ಲದೆ ಪ್ರತಿಕ್ರಯಿಸಿದ್ದಾರೆ. ಆದರೆ ಸ್ವಸಹಾಯ ಸಂಘಗಳ ಅನುಭವವಿಲ್ಲದ ಮತ್ತು ವಯಸ್ಸಾದ ಅನಕ್ಷರಸ್ಥ ಮಹಿಳೆಯರು ಈ ವಿಚಾರದ ಕುರಿತು ಪ್ರತಿಕ್ರಯಿಸುವಾಗ ಬಹಳ ಸಂಕೋಚ, ನಾಚಿಕೆ ವ್ಯಕ್ತ ಪಡಿಸಿದ್ದು ಅಧ್ಯಯನದ ಮೂಲಕ ಗಮನಿಸಲಾಗಿದೆ.

ನಾಲ್ಕು ಸಮುದಾಯದ ಬುಡಕಟ್ಟು ಮಹಿಳೆಯರಲ್ಲಿ ಅಭಿಪ್ರಾಯಗಳನ್ನು ತುಲನಾತ್ಮಕವಾಗಿ ಅವಲೋಕಿಸಿದರೆ ಕೊರಗ ಸಮುದಾಯದ ಅತ್ಯಂತ ಹೆಚ್ಚಿನ ಮಹಿಳೆಯರಲ್ಲಿ ಅಂದರೆ (72.5%) ಮಹಿಳೆಯರಿಗೆ, ಹಾಗೆಯೇ ಕುಡುಬಿಯರಲ್ಲಿ 63% ಮರಾಠಿನಾಯ್ಕರಲ್ಲಿ 71% ಮಲೆಕುಡಿಯ ಸಮುದಾಯದ 68.33% ರಷ್ಟು ಮಹಿಳೆಯರಿಗೆ ಈ ಮಾಹಿತಿಯು ಲಭ್ಯವಿದೆ.

ಈ ಹಿಂದೆಯೇ ಉಲ್ಲೇಖಿಸಿದಂತೆ ಕೊರಗ ಮಹಿಳೆಯರು ಸಂಘಟನೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದು ತಿಂಗಳಿಗೆರಡು ಬಾರಿಯಾದರೂ ವಿವಿಧ

ವಿಷಯಗಳ ಕುರಿತಂತೆ ಸಂಪನ್ಮೂಲ ವ್ಯಕ್ತಿಗಳಿಂದ ಮಾಹಿತಿ ಸಂಗ್ರಹಿಸಿ ಜ್ಞಾನವನ್ನು ವಿಸ್ತರಿಸಿಕೊಳ್ಳುತ್ತಾರೆ. ಎಂಬುದು ಕ್ಷೇತ್ರ ಸಂದರ್ಶನದ ಮೂಲಕ ತಿಳಿಯಲಾಗಿದೆ.

**ಕೋಷ್ಟಕ ಸಂಖ್ಯೆ 3.26(ಎ)**

**ಬುಡಕಟ್ಟು ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಮುಟ್ಟಾಗುವುದರ ಕುರಿತು ಪೂರ್ವ ಮಾಹಿತಿ ನೀಡಿರುವುದರ ಕುರಿತಾದ ವಿವರ**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಮಾಹಿತಿ ನೀಡಲಾಗಿದೆ | 123 | 41.00 |
| 2 | ಮಾಹಿತಿ ನೀಡಲಾಗಿಲ್ಲ | 69 | 23.00 |
| 3 | ಅನ್ವಯಿಸುವುದಿಲ್ಲ | 108 | 36.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.26 ರಲ್ಲಿ ಬುಡಕಟ್ಟು ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವ ಕುರಿತಂತೆ ಪೂರ್ವ ಮಾಹಿತಿ ನೀಡಿರುವ ಅಂಕಿಅಂಶಗಳನ್ನು ಕಾಣಬಹುದು. 300(100%)ರಲ್ಲಿ 123 (41.00%) ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವ ಮುನ್ನ ಈ ಬಗ್ಗೆ, ಮಾಹಿತಿ ನೀಡಿದ್ದು 69(23.00%) ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವ ಕುರಿತು ಮಾಹಿತಿ ನೀಡಿಲ್ಲ. ಸುಮಾರು 108 (36.00%) ಮಹಿಳೆಯರ ಮಕ್ಕಳು ಎಳೆ ವಯಸ್ಸಿನವರಾಗಿದ್ದುದರಿಂದ ಮತ್ತು ಹೆಣ್ಣು ಮಕ್ಕಳಿಲ್ಲದೇ ಇರುವುದರಿಂದ ಈ ವಿಚಾರ ಅನ್ವಯಿಸುವುದಿಲ್ಲ. ಋತುಮತಿಯಾಗಿರುವ ಕುರಿತಾದ ಮಾಹಿತಿ ತಿಳಿದಿದ್ದರೂ ಕೆಲವು ಬುಡಕಟ್ಟು ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಈ ಕುರಿತಾದ ಶಿಕ್ಷಣವನ್ನು ನೀಡಿಲ್ಲ.

ಪ್ರಸ್ತುತ ಅಧ್ಯಯನದ ಆಧಾರದಲ್ಲಿ ಋತುಮತಿಯಾಗುವ ಕುರಿತಂತೆ ಹೆಣ್ಣು ಮಕ್ಕಳಿಗೆ ಸ್ಪಷ್ಟವಾದ ಜ್ಞಾನದ ಅಗತ್ಯವಿರುವ ಅಂಶವನ್ನು ಕಂಡುಕೊಳ್ಳಲಾಗಿದೆ. ಈ ವಿಚಾರದ ಕುರಿತು ಪತ್ರಿಕೆಗಳು ಹಾಗೂ ಮಾಧ್ಯಮಗಳು ಮಾಹಿತಿ ನೀಡಿದರೂ ಸ್ವತಹ ತಾಯಿಯೇ ತನ್ನ ಹೆಣ್ಣು ಮಕ್ಕಳ ಬೆಳವಣಿಗೆಯನ್ನು ಗಮನಿಸಲು ಸಾಧ್ಯವಾಗುವುದರಿಂದ ತಾಯಿಯಿಂದ

ಮಗಳಿಗೆ ಈ ಜ್ಞಾನ ವರ್ಗಾವಣೆಯಾಗುವುದು ತುಂಬಾ ಅಗತ್ಯ ಎಂಬ ಅಂಶವು ಪ್ರಸ್ತುತ ಅಧ್ಯಯನದಿಂದ ಕಾಣಬಹುದು.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ನಾಲ್ಕು ಬುಡಕಟ್ಟುಗಳ ತುಲನಾತ್ಮಕ ವಿವರಣೆಯನ್ನು ಕೋಷ್ಟಕ ಸಂಖ್ಯೆ 3.26(ಬಿ) ಯಲ್ಲಿ ವಿಶ್ಲೇಷಿಸಿದ ದತ್ತಾಂಶಗಳಿಂದ ಅರ್ಥೈಸಬಹುದು.

**ಕೋಷ್ಟಕ ಸಂಖ್ಯೆ 3.26(ಬಿ)**

**ಮಾಹಿತಿದಾರರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವುದರ ಕುರಿತು ಪೂರ್ವ ಮಾಹಿತಿ ನೀಡಿರುವ ತುಲನಾತ್ಮಕ ವಿವರಣೆ**

| ಕ್ರ ಸಂ | ಅಭಿಪ್ರಾಯ | ಕುಡುಬಿ | ಒಟ್ಟು ಶೇ | ಮರಾಠಿ ನಾಯ್ಕ | ಒಟ್ಟು ಶೇ | ಮಲೆ ಕುಡಿಯ | ಒಟ್ಟು ಶೇ | ಕೊರಗ | ಒಟ್ಟು ಶೇ |
|---|---|---|---|---|---|---|---|---|---|
| 1 | ಹೌದು | 43 | 43% | 40 | 40% | 20 | 33% | 20 | 50% |
| 2 | ಇಲ್ಲ | 28 | 28% | 15 | 15% | 12 | 20% | 14 | 35% |
| 3 | ಅನ್ವಯಿ ಸುವುದಿಲ್ಲ | 29 | 29% | 45 | 45% | 28 | 47% | 06 | 15% |
| 4 | ಒಟ್ಟು | 100 | 100% | 100 | 100% | 60 | 100% | 40 | 100% |

$X^2 = 18.788$ $P = 0.0045$

ಕೋಷ್ಟಕ ಸಂಖ್ಯೆ 3.26(ಬಿ)ಯಲ್ಲಿ ನಾಲ್ಕು ಬುಡಕಟ್ಟುಗಳಿಗೆ ಸಂಬಂಧಿಸಿದಂತೆ ಕೈ ಸ್ಕ್ವೇರ್ (Chi Square) ಟೆಸ್ಟ್‌ನ ಪ್ರಕಾರ ನಾಲ್ಕು ಬುಡಕಟ್ಟು ಮಹಿಳೆಯರು ನೀಡಿದ ಅಭಿಪ್ರಾಯದಲ್ಲಿ ಮಹತ್ತರವಾದ ಭಿನ್ನತೆಗಳಿವೆ. ನಾಲ್ಕು ಬುಡಕಟ್ಟುಗಳಾದ ಕುಡುಬಿ, ಮರಾಠಿನಾಯ್ಕ, ಮಲೆಕುಡಿಯ ಮತ್ತು ಕೊರಗ ಬುಡಕಟ್ಟುಗಳ ತಾಯಂದಿರಲ್ಲಿ ಋತುಮತಿಯಾಗುವ ಜೈವಿಕ ಪ್ರಕ್ರಿಯೆ ಕುರಿತು ತಮ್ಮ ಹೆಣ್ಣು ಮಕ್ಕಳಿಗೆ ಪೂರ್ವ ಮಾಹಿತಿ ನೀಡಿರುವುದರ ವಿವರಣೆಯ ಪ್ರಕಾರ ಕುಡುಬಿ ಮಹಿಳೆ 43% ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಪೂರ್ವ ಮಾಹಿತಿ ನೀಡಿದ್ದು, ಮರಾಠಿ ನಾಯ್ಕ ಸಮುದಾಯದ ಮಹಿಳೆಯರಲ್ಲಿ 40% ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವ ಪ್ರಕ್ರಿಯೆಯ ಪೂರ್ವ ಮಾಹಿತಿ ನೀಡಿದ್ದು, ಮಲೆಕುಡಿಯರ ಮಹಿಳೆಯರಲ್ಲಿ 33% ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ

ಪೂರ್ವ ಮಾಹಿತಿ ನೀಡಿದ್ದು, ಕೊರಗ ಸಮುದಾಯದ ಮಹಿಳೆಯರಲ್ಲಿ 50% ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಈ ವಿಚಾರದ ಕುರಿತಂತೆ ಪೂರ್ವಭಾವಿ ಮಾಹಿತಿ ಒದಗಿಸಿದ್ದಾರೆ.

ಕುಡುಬಿ ಮಹಿಳೆಯರಲ್ಲಿ 28%, ಮರಾಠಿನಾಯ್ಕ ಸಮುದಾಯದ 15%, ಮಲೆಕುಡಿಯರ ಸಮುದಾಯದ 20%, ಕೊರಗ ಸಮುದಾಯದ 35%, ಮಹಿಳೆಯರು ಈ ಮೇಲಿನ ಮಾಹಿತಿ ತಮ್ಮ ಹೆಣ್ಣು ಮಕ್ಕಳಿಗೆ ನೀಡಿಲ್ಲ ಎಂದು ಪ್ರತಿಕ್ರಿಯಿಸಿದ್ದಾರೆ. ಕುಡುಬಿ ಮಹಿಳೆಯರಲ್ಲಿ 29% ಮಹಿಳೆಯರಿಗೆ, 45% ಮರಾಠಿನಾಯ್ಕ ಮಹಿಳೆಯರಿಗೆ, 47% ಮಲೆಕುಡಿಯ ಮಹಿಳೆಯರಿಗೆ 15% ಕೊರಗ ಮಹಿಳೆಯರಿಗೆ ಹೆಣ್ಣು ಮಕ್ಕಳಿಲ್ಲದ ಕಾರಣ ಮತ್ತು ಎಳೆವಯಸ್ಸಿನ ಹೆಣ್ಣು ಮಕ್ಕಳು ಇರುವುದರಿಂದ ವಿಷಯ ಅನ್ವಯಿಸುವುದಿಲ್ಲ.

ಕೋಷ್ಟಕದ ವಿವರಣೆಯ ಆಧಾರದಿಂದ ($X^2 = 18.788$ $P = 0.0045$) ನಾಲ್ಕು ಬುಡಕಟ್ಟು ಸಮುದಾಯದ ಮಹಿಳೆಯರಲ್ಲಿ ತಮ್ಮ ಹೆಣ್ಣು ಮಕ್ಕಳಿಗೆ ಋತುಮತಿಯಾಗುವುದರ ಪ್ರಕ್ರಿಯೆಯ ಕುರಿತಾದ ಪೂರ್ವ ಮಾಹಿತಿ ನೀಡಿದವರಲ್ಲಿ ಕೊರಗ ಮಹಿಳೆಯರು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಹಾಗೂ ಮಾಹಿತಿ ನೀಡದೇ ಇರುವವರಲ್ಲಿಯೂ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕೊರಗ ಮಹಿಳೆಯರೇ ಎನ್ನುವುದು ಸ್ಪಷ್ಟವಾಗುತ್ತದೆ.

ಸುಮಾರು 20 ವರ್ಷಗಳಿಂದ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಕೊರಗ ಸಮುದಾಯದೊಂದಿಗೆ ಸಮಗ್ರ ಗ್ರಾಮೀಣ ಆಶ್ರಮ ಎಂಬ ಸರ್ಕಾರೇತರ ಸಂಸ್ಥೆಯೊಂದು ಕಾರ್ಯನಿರ್ವಹಿಸುತ್ತಿದೆ. ಪ್ರಸ್ತುತ ಸಾಮಾಜಿಕ ಮತ್ತು ಆರ್ಥಿಕ ಜೀವನದ ವಿಶ್ಲೇಷಣೆಯ ಕುರಿತಾದ ತರಬೇತಿಗಳು, ನಾಯಕತ್ವದ ತರಬೇತಿ, ಶಿಕ್ಷಣದ ಮಹತ್ವದ ಚರ್ಚೆಗಳು, ಸ್ವಚ್ಛತೆ ಮತ್ತು ಆರೋಗ್ಯದ ಕುರಿತಾದ ಮಾತುಕತೆಗಳು, ಮಕ್ಕಳ ದೈಹಿಕ ಬೆಳವಣಿಗೆಗಳು, ಸರಕಾರಿ ಯೋಜನೆಗಳು, ಅಸ್ಪೃಶ್ಯತೆ ಮತ್ತು ಅಜಲು ಪದ್ಧತಿ ಇತ್ಯಾದಿ ವಿಷಯಗಳ ಕುರಿತಾದ ಮಾಹಿತಿ ಕಾರ್ಯಾಗಾರಗಳು ಸರ್ಕಾರೇತರ ಸಂಸ್ಥೆಯ ಮೂಲಕ ಆಗಾಗ ಆಯೋಜಿಸಲ್ಪಡುವುದರಿಂದ ಹೆಚ್ಚಿನ ಸಂಖ್ಯೆಯ ಕೊರಗ ಬುಡಕಟ್ಟು ಮಹಿಳೆಯರು ಅಲ್ಲಲ್ಲಿ ಸಂಘಟಿತರಾಗಿ ಇವುಗಳ ಸದುಪಯೋಗ ಪಡೆದುಕೊಂಡಿದ್ದಾರೆ. ಮತ್ತು ಸಾಮಾಜಿಕವಾಗಿ ಜಾಗೃತರಾಗುತ್ತಿದ್ದಾರೆ ಎಂದು ಅರ್ಥೈಸಿಕೊಳ್ಳಬಹುದಾಗಿದೆ.

ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳದ ಅನೇಕ ಕೊರಗ ಮಹಿಳೆಯರು ಸಮುದಾಯದಲ್ಲಿರುವುದರಿಂದ ಅವರಲ್ಲಿ ಸಾಮಾಜಿಕ ಅರಿವಿನ ಕೊರತೆ ಇರುವುದನ್ನು

ತಿಳಿದುಕೊಳ್ಳಬಹುದಾಗಿದೆ. ಈ ದೃಷ್ಟಿಯಿಂದ ತುಲನಾತ್ಮಕ ಮಾಹಿತಿ ನೀಡುವುದಾದರೆ ಕುಡುಬಿ, ಮರಾಠಿ ನಾಯ್ಕ, ಮತ್ತು ಮಲೆಕುಡಿಯ ಮಹಿಳೆಯರಿಗೆ ಸಾಮಾಜಿಕ ಅರಿವನ್ನು ಮೂಡಿಸುವಲ್ಲಿ ಪರಿಣಾಮಕಾರಿಯಾದ ಸರ್ಕಾರೇತರ ಸಂಘ ಸಂಸ್ಥೆಗಳ ಕೊರತೆಯಿದೆ ಎಂದು ಅಭಿಪ್ರಾಯ ಪಡಬಹುದಾಗಿದೆ.

ಯಾವ ಕಾರಣಗಳಿಂದಾಗಿ ಬುಡಕಟ್ಟು ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಈ ವಿಚಾರದ ಕುರಿತು ಶಿಕ್ಷಣ ಹಾಗೂ ಮಾಹಿತಿ ನೀಡಿರಲಿಲ್ಲ ಎನ್ನುವುದನ್ನು ಮುಂದಿನ ಕೋಷ್ಟಕ ಸಂಖ್ಯೆ 3.27 ರಲ್ಲಿ ವಿಶ್ಲೇಷಿಸಿದ ದತ್ತಾಂಶಗಳಿಂದ ಅರ್ಥೈಸಬಹುದು.

## ಕೋಷ್ಟಕ ಸಂಖ್ಯೆ 3.27

## ಬುಡಕಟ್ಟು ಮಹಿಳೆಯರು ತಮ್ಮ ಹೆಣ್ಣು ಮಕ್ಕಳಿಗೆ ಋತುಮಾತಿಯಾಗುವುದರ ಪೂರ್ವ ಮಾಹಿತಿ ನೀಡಲಾಗದೇ ಇದ್ದುದಕ್ಕೆ ಕಾರಣಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸಂಕೋಚ | 06 | 2.00 |
| 2 | ಮಾಹಿತಿ ತಿಳಿದಿಲ್ಲ | 48 | 16.00 |
| 3 | ನೀಡಬೇಕೆನ್ನುವುದು ತಿಳಿದಿರಲಿಲ್ಲ | 15 | 5.00 |
| 4 | ಅನ್ವಯಿಸುವುದಿಲ್ಲ | 231 | 77.00 |
| | ಒಟ್ಟು | 300 | 100.00 |

ಹಿಂದಿನ ಕೋಷ್ಟಕ ಸಂಖ್ಯೆ 3.26 ರಲ್ಲಿ ಸ್ಪಷ್ಟೀಕರಿಸಿದಂತೆ ಋತುಮತಿ ಜೈವಿಕ ಪ್ರಕ್ರಿಯೆಯ ಕುರಿತು ಮಾಹಿತಿ ನೀಡಿಲ್ಲದೇ ಇರುವ ಒಟ್ಟು 69(23.00%) ಬುಡಕಟ್ಟು ಮಹಿಳೆಯರಲ್ಲಿ 06(2.00%) ಮಹಿಳೆಯರು ಋತುಮತಿಯಾಗುವುದರ ಕುರಿತು ತಮ್ಮ ಹೆಣ್ಣು ಮಕ್ಕಳಿಗೆ ಮಾಹಿತಿ ನೀಡಲು ನಮಗೆ ಸಂಕೋಚವಾಯಿತು ಎಂದಿದ್ದಾರೆ. 48(16.00%) ಮಹಿಳೆಯರು ತಮಗೆ ಸರಿಯಾದ ಮಾಹಿತಿ ತಿಳಿದಿಲ್ಲದೇ ಇರುವುದರಿಂದ ಮಾಹಿತಿ ನೀಡಲು ಕಷ್ಟವಾಗಿರುವ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಹಾಗೆಯೇ 15(5.00%) ಮಹಿಳೆಯರು ಈ ವಿಚಾರದ ಬಗ್ಗೆ ಮಾಹಿತಿ ನೀಡಬೇಕೆನ್ನುವುದು ಅಗತ್ಯ ಎಂಬ ಅರಿವು ನಮಗೆ ಇಲ್ಲ ಎಂದು

ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ. ಅತ್ಯಧಿಕ ಸಂಖ್ಯೆಯ ಬುಡಕಟ್ಟು ಮಹಿಳೆಯರಿಗೆ ಮಾಹಿತಿ ತಿಳದಿಲ್ಲದೇ ಇರುವುದರಿಂದ ತಮ್ಮ ಹೆಣ್ಣು ಮಕ್ಕಳಗೆ ಈ ಕುರಿತಾದ ವಿಚಾರವನ್ನು ತಿಳಸಿಲ್ಲ. ಎನ್ನುವುದು ಕೋಷ್ಟಕದಲ್ಲಿ ವಿವರಿಸಿದ ದತ್ತಾಂಶಗಳಿಂದ ತಿಳದುಬಂದಿದೆ.

ಹೆಣ್ಣು ಮಕ್ಕಳ ಜೀವನದಲ್ಲಿ ದೈಹಿಕ ಬೆಳವಣಿಗೆ, ಹರೆಯ ಅನ್ನುವುದು ಒಂದು ಮುಖ್ಯ ಘಟ್ಟವಾಗಿದೆ. ಪ್ರಸ್ತುತ ದಿನಗಳಲ್ಲಿ ಈ ಋತುಮತಿಯಾಗುವ ಪ್ರಕ್ರಿಯೆಯು ಸಣ್ಣ ವಯಸ್ಸಿನಲ್ಲಿ ಅಂದರೆ 11 ಅಥವಾ 12 ರಲ್ಲಿ ಪ್ರಾರಂಭವಾಗುವ ಅಂಶವು ವಿವಿಧ ವೈದ್ಯಕೀಯ ವರದಿಗಳಿಂದ ತಿಳಯಬಹುದು. ಇದಕ್ಕೆ ಈಗಿನ ಆಹಾರ ಪದ್ಧತಿ, ವಾತಾವರಣ, ಮಾಧ್ಯಮಗಳು ಕಾರಣವಾಗಿದ್ದು ದೇಹ ಮಾತ್ರ ಬೆಳೆದು ಮನಸ್ಸು ಮುಗ್ಧವೇ ಆಗಿರುವುದರಿಂದ ಈ ಹಂತದಲ್ಲಿ ತಾಯಂದಿರ ಸೂಕ್ತ ಮಾರ್ಗದರ್ಶನದ ಅವಶ್ಯಕತೆಯಿದೆ ಎಂಬ ಅಂಶವು ಪ್ರಸ್ತುತ ಅಧ್ಯಯನದಿಂದ ತಿಳಯಬಹುದಾಗಿದೆ.

ಬದಲಾವಣೆಯ ಪ್ರಕ್ರಿಯೆ ಸಹಜವಾದುದರಿಂದ ಹೆಣ್ಣು ಮಕ್ಕಳು ಈ ಪ್ರೌಢಾವಸ್ಥೆಯ ಹಂತವನ್ನು ಎದುರಿಸಲು ಮಾನಸಿಕವಾಗಿ ತಯಾರಾಗುವಲ್ಲಿ ಬುಡಕಟ್ಟು ತಾಯಂದಿರಿಗೆ ಕುಟುಂಬ ಜೀವನದ ಶಿಕ್ಷಣದ ಕೊರತೆ ಇರುವ ಅಂಶವು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಬಹುದು, ಹಾಗೂ ಈ ಮುಟ್ಟಿನ ದಿನಗಳಲ್ಲಿ ಹೆಣ್ಣು ಮಕ್ಕಳು ಸ್ವಚ್ಛತೆಯನ್ನು ಕಾಪಾಡಿಕೊಳ್ಳುವುದರಿಂದ ತಮ್ಮ ವೈಯಕ್ತಿಕ ಆರೋಗ್ಯವನ್ನು ರಕ್ಷಿಸಬಹುದು. ಎಂಬ ಜ್ಞಾನ ಹೆಚ್ಚಿನ ಮಹಿಳೆಯರಲ್ಲಿ ಇರುವುದು ಕ್ಷೇತ್ರ ಅಧ್ಯಯನದಿಂದ ಕಂಡು ಕೊಳ್ಳಬಹುದು.

ಎಲ್ಲಾ ಬುಡಕಟ್ಟು ಮಹಿಳೆಯರು 300(100%) ಋತುಮತಿಯಾದ ದಿನಗಳಲ್ಲಿ ಸ್ವಚ್ಛತೆಯನ್ನು ಪಾಲಿಸುವುದು ಬಹಳ ಅಗತ್ಯ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಹಾಗೂ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರು ಮೂಲಕುಟುಂಬದ ಬುಡಕಟ್ಟು ಮಹಿಳೆಯರನ್ನು ಹೊರತುಪಡಿಸಿ ಮುಟ್ಟಾದ ದಿನಗಳಲ್ಲಿ ಎಂದಿನಂತೆ ಸ್ನಾನ ಮಾಡಿ ತಮ್ಮ ದೈನಂದಿನ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತೇವೆ ಎಂದು ಅಭಿಪ್ರಾಯಪಟ್ಟಿದ್ದಾರೆ.

## ಕೋಷ್ಟಕ ಸಂಖ್ಯೆ 3.28

## ಬುಡಕಟ್ಟು ಮಹಿಳೆಯರು ಮುಟ್ಟಿನ ದಿನಗಳ ದೈಹಿಕ ಸಮಸ್ಯೆಗೆ ಚಿಕಿತ್ಸೆ ಪಡಕೊಳ್ಳುವಲ್ಲಿ ನೀಡಿದ ಅಭಿಪ್ರಾಯ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಅನುಭವಿ ಮಹಿಳೆಯರಿಂದ | 07 | 2.33 |
| 2 | ವೈದ್ಯರಿಂದ | 57 | 19.00 |
| 3 | ಮನೆಮದ್ದು | 117 | 39.00 |
| 4 | ಏನು ಮಾಡುವುದಿಲ್ಲ | 12 | 4.00 |
| 5 | ಸಮಸ್ಯೆಗಳಲ್ಲ | 107 | 35.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.28ರಲ್ಲಿ ಬುಡಕಟ್ಟು ಮಹಿಳೆಯರು ಮುಟ್ಟಾದ ಸಂದರ್ಭಗಳಲ್ಲಿ ಉಂಟಾಗುವ ದೈಹಿಕ ಸಮಸ್ಯೆಗೆ ಯಾವ ರೀತಿಯ ಚಿಕಿತ್ಸೆಗಳನ್ನು ಪಡಕೊಳ್ಳುತ್ತಾರೆ. ಎನ್ನುವುದರ ಬಗ್ಗೆ ಅಂಕಿಅಂಶಗಳನ್ನು ನೀಡುತ್ತದೆ. ಒಟ್ಟು 300 ಬುಡಕಟ್ಟು ಮಹಿಳೆಯರಲ್ಲಿ 07(2.33%) ಮಹಿಳೆಯರು, ಅನುಭವಿ ಮಹಿಳೆಯರ ಮಾರ್ಗದರ್ಶನ ಪಡೆದರೆ, 57(19.00%) ಮಹಿಳೆಯರು ಮುಟ್ಟಿನ ಸಮಯದ ದೈಹಿಕ ಸಮಸ್ಯೆಗೆ ವೈದ್ಯರಿಂದ ಚಿಕಿತ್ಸೆ ಪಡೆದುಕೊಂಡರೆ, 117(39.00%) ಮಹಿಳೆಯರು ಮನೆಮದ್ದನ್ನು ಅವಲಂಬಿಸಿದರೆ, 12(4.00%) ಮಹಿಳೆಯರು ದೈಹಿಕ ಸಮಸ್ಯೆಗೆ ಏನೂ ಮಾಡುವುದಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ. 107(35.67%) ಮಹಿಳೆಯರಿಗೆ ಮುಟ್ಟಾದ ಸಂದರ್ಭದಲ್ಲಿ ಯಾವುದೇ ದೈಹಿಕ ಸಮಸ್ಯೆಗಳಿಲ್ಲದೇ ಇರುವುದರಿಂದ ಯಾವುದೇ ರೀತಿಯ ಚಿಕಿತ್ಸೆ ಪಡಕೊಳ್ಳುವುದಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟು ಮಹಿಳೆಯರು ಮೈಮುರಿದು ಸತತ ದುಡಿಯುವುದರಿಂದಲೂ, ಆಧುನಿಕ ಆಹಾರ ಪದ್ಧತಿ ಇನ್ನೂ ಪೂರ್ಣವಾಗಿ ಬುಡಕಟ್ಟು ಸಮುದಾಯವನ್ನು ಆವರಿಸಿಲ್ಲದೇ ಇರುವುದರಿಂದ ಸಹಜವಾಗಿಯೇ ಬುಡಕಟ್ಟು ಮಹಿಳೆಯರು ಆರೋಗ್ಯವಂತರಾಗಿದ್ದರೂ ಸರಿಯಾದ ಆರೈಕೆ ಇಲ್ಲದೇ ಇರುವುದರಿಂದ, ಬಡತನ, ಸಮತೋಲನ ಮತ್ತು ಪೌಷ್ಠಿಕ ಆಹಾರದ ಕೊರತೆ ಹಾಗೂ ಅರಿವಿನ ಕೊರತೆ ಇವೆಲ್ಲ ಮಹಿಳೆಯರಲ್ಲಿ ಶಾರೀರಿಕ ಅಶಕ್ತತೆ, ರಕ್ತಹೀನತೆ, ಇತ್ಯಾದಿ ಆರೋಗ್ಯ ಸಮಸ್ಯೆಗಳನ್ನು ಉಂಟುಮಾಡಿದ್ದು, ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ವಯಸ್ಸಿಗಿಂತ ಅಧಿಕ ವಯಸ್ಸಿನವರಾಗಿ ಕಾಣುತ್ತಾರೆ. (ಮುಖ್ಯವಾಗಿ ಕೊರಗ ಹಾಗೂ ಕುಡುಬಿ ಮಹಿಳೆಯರು) ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು (39.00%) ಮುಟ್ಟಿನ ಸಂದರ್ಭದಲ್ಲಾಗುವ ಹೊಟ್ಟೆನೋವು, ಬೆನ್ನುನೋವು,

ವಾಂತಿಯಾಗುವುದು, ಕೈಕಾಲು ಸೆಳೆತ ಇತ್ಯಾದಿಗಳಿಗೆ ಮನೆಯಲ್ಲಿ ತಯಾರಿಸಿದ ಕಷಾಯ ಉಪಯೋಗಿಸುತ್ತಾರೆ.

ಮೆಂತ್ಯೆ ಮತ್ತು ಜೀರಿಗೆಯನ್ನು ಪುಡಿಮಾಡಿದ ಕಷಾಯವನ್ನು ಕೆಲವು ಬುಡಕಟ್ಟು ಮಹಿಳೆಯರು ಉಪಯೋಗಿಸಿದರೆ ಇನ್ನು ಕೆಲವು ಮಹಿಳೆಯರು ಮೆಂತ್ಯೆಯನ್ನು ನೆನೆ ಹಾಕಿ ಬೆಲ್ಲ ಹಾಕಿ ಕುದಿಸಿದ ಕಷಾಯವನ್ನು ಮುಟ್ಟಿನ ದೈಹಿಕ ಸಮಸ್ಯೆಗಳಿಗಾಗಿ ಸೇವಿಸುತ್ತಾರೆ. ಮತ್ತೆ ಕೆಲವು ಮಹಿಳೆಯರು ಒಳ್ಳೆ ಚಿಗುರು, ನೊಣಸೊಪ್ಪು, ಜೀರಿಗೆ ಮತ್ತು ಬೆಲ್ಲ ಹಾಕಿ ಕುದಿಸಿದ ಕಷಾಯವನ್ನು ಮುಟ್ಟಿನ ಸಂದರ್ಭದಲ್ಲಿ ಆಗುವ ದೇಹದ ಸಮಸ್ಯೆಗಳಿಗೆ ಉಪಯೋಗಿಸುತ್ತಾರೆ. ಹೆಚ್ಚಿನ ವಯಸ್ಸಾದ ಬುಡಕಟ್ಟು ಮಹಿಳೆಯರಿಗೆ ಕಾಡಿನಲ್ಲಿ ಸಿಗುವ ಔಷಧೀಯ ಸಸ್ಯಗಳು ಹಾಗೂ ಅದರ ಉಪಯೋಗದ ಕುರಿತಾದ ಮಾಹಿತಿ ಇರುವ ಅಂಶವನ್ನು ಗಮನಿಸಲಾಗಿದೆ.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯರಿಗೆ ಸರಳ ದೈಹಿಕ ಸಮಸ್ಯೆಗಳ ಶಮನಕ್ಕೆ ಬೇಕಾಗುವ ಔಷಧೀಯ ಸಸ್ಯಗಳ ಕುರಿತಾದ ಮಾಹಿತಿ ಇದೆ ಎನ್ನುವುದು ಅಧ್ಯಯನದಿಂದ ದೃಢಪಟ್ಟಿದೆ.

**ಕೋಷ್ಟಕ ಸಂಖ್ಯೆ 3.29**

**ಮುಟ್ಟಿನ ಹಾಗೂ ಹಿಂದಿನ ದಿನಗಳಲ್ಲಿ ಮಾನಸಿಕ ಸಮಸ್ಯೆಗಳು ಉಂಟಾಗುವ ಕುರಿತಾದ ಬುಡಕಟ್ಟು ಮಹಿಳೆಯರ ಅಭಿಪ್ರಾಯ**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಹೌದು | 128 | 42.67 |
| 2 | ಇಲ್ಲ | 43 | 14.33 |
| 3 | ಗೊತ್ತಿಲ್ಲ | 129 | 43.00 |
| 4 | ಒಟ್ಟು | 300 | 100.0 |

ಕೋಷ್ಟಕ ಸಂಖ್ಯೆ 3.29 ರಲ್ಲಿ ಒಟ್ಟು 300 (100%) ಮಹಿಳೆಯರಲ್ಲಿ 128(42.67%) ಮಹಿಳೆಯರು ಮುಟ್ಟಿನ ಹಾಗೂ ಅದರ ಹಿಂದಿನ ದಿನಗಳಲ್ಲಿ ಮಾನಸಿಕ ಸಮಸ್ಯೆಗಳು ಉಂಟಾಗುತ್ತವೆ ಎಂದು ಪ್ರತಿಕ್ರಯಿಸಿದ್ದಾರೆ. 43(14.33%) ಮಹಿಳೆಯರು, ಮುಟ್ಟಿನ ಸಂದರ್ಭಗಳಲ್ಲಿ ಮಾನಸಿಕ ಸಮಸ್ಯೆಗಳು ಉಂಟಾಗುವುದಿಲ್ಲ. ಹಾಗೂ 129(43.00%) ಮಹಿಳೆಯರು ಈ ವಿಷಯದ ಕುರಿತು ತಮಗೆ ಮಾಹಿತಿ ಇಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

ಮಹಿಳೆಯರಿಗೆ ಮುಟ್ಟಿನ ಹಾಗೂ ಅದರ ಹಿಂದಿನ ದಿನಗಳಲ್ಲಿ ದೈಹಿಕ ನೋವಿನೊಂದಿಗೆ ಮಾನಸಿಕ ಸಮಸ್ಯೆಗಳು (ಹಾರ್ಮೋನುಗಳ ಏರು-ಪೇರಾಗುವುದರಿಂದ) ಸಹಜವಾಗಿರುವ ವಿಚಾರ ವೈದ್ಯಕೀಯ ವರದಿಗಳಿಂದ ತಿಳಿಯಲಾಗಿದೆ. ವಿನಾಕಾರಣ ಸಿಟ್ಟುಗೊಳ್ಳುವುದು, ಲವಲವಿಕೆಯಿಲ್ಲದೇ ಇರುವುದು, ಆತಂಕ, ಉದ್ವೇಗಗಳಂತಹ ಮಾನಸಿಕ ಅಸ್ವಸ್ಥತೆಗಳಿರುವುದನ್ನು ಅಧ್ಯಯನದಲ್ಲಿ ಅವಲೋಕಿಸಲಾಗಿದೆ.

ಸಂಘಟನೆಗಳಲ್ಲಿ ತೊಡಗಿಸಿಕೊಂಡು ಸಂಪೂರ್ಣವಾಗಿ ಎಲ್ಲಾ ಮಾಹಿತಿ ಕಾರ್ಯಾಗಾರದಲ್ಲಿ ಪಾಲ್ಗೊಂಡ ಮಹಿಳೆಯರಿಗೆ ಈ ಕುರಿತಾದ ಜ್ಞಾನವಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಸ್ವಸಹಾಯ ಸಂಘಗಳಲ್ಲಿ ಸದಸ್ಯರಾಗಿಲ್ಲದ ಮತ್ತು ಸ್ವಸಹಾಯ ಸಂಘಗಳಲ್ಲಿದ್ದು ಪ್ರತೀ ಮಾಹಿತಿ ಕಾರ್ಯಾಗಾರದಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳದೇ ಇರುವ ಅಂದರೆ 57.33% ರಷ್ಟು ಮಹಿಳೆಯರಿಗೆ ಒಟ್ಟು ಹೆಣ್ಣಿನ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯ ಕುರಿತಾದ ಮಾಹಿತಿಯ ಕೊರತೆ ಇರುವುದು ಅಧ್ಯಯನದಿಂದ ತಿಳಿಯಲಾಗಿದೆ.

ನಿರಂತರವಾಗಿ ಅನೇಕ ದಿನಪತ್ರಿಕೆಗಳು, ವಾರಪತ್ರಿಕೆಗಳು, ಮಾಸಿಕಗಳು ಋತುಮತಿಯಾಗುವುದು, ಮುಟ್ಟಿನ ಸಮಸ್ಯೆಗಳು ಮತ್ತು ಋತುಬಂಧ ಸಮಸ್ಯೆಗಳ ಕುರಿತು ಲೇಖನಗಳನ್ನು ಪ್ರಕಟಿಸುತ್ತದೆ. ಆದರೂ ಬುಡಕಟ್ಟು ಮಹಿಳೆಯರಲ್ಲಿ ಪತ್ರಿಕೆ ಓದುವ ಹವ್ಯಾಸ ಕಡಿಮೆ ಇರುವುದರಿಂದ ಇವುಗಳ ಪ್ರಯೋಜನ ಪಡೆದಿಲ್ಲದಿರುವುದನ್ನು ಈ ದತ್ತಾಂಶಗಳಿಂದ ಗಮನಿಸಬಹುದು.

ಸಬಲೀಕರಣದ ಒಂದು ಮುಖ್ಯ ಆಯಾಮವಾದ ಸಾಮಾಜಿಕ ಸಬಲೀಕರಣದಲ್ಲಿ ವೈಯಕ್ತಿಕವಾಗಿ ಜ್ಞಾನವನ್ನು ಸಂಗ್ರಹಿಸಿ ಬದುಕಿನಲ್ಲಿ ಅಳವಡಿಸಿಕೊಳ್ಳುವುದಾಗಿದೆ. ಈ ದೃಷ್ಟಿಯಲ್ಲಿ ಬುಡಕಟ್ಟು ಮಹಿಳೆಯರು ಸಾಮಾಜಿಕವಾಗಿ ಸಶಕ್ತಗೊಳ್ಳಲು ಪತ್ರಿಕೆ ಓದುವ ಹವ್ಯಾಸವನ್ನು ಬೆಳೆಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

## ಕೋಷ್ಟಕ ಸಂಖ್ಯೆ 3.30

## ಬುಡಕಟ್ಟು ಮಹಿಳೆಯರು ಹೆರಿಗೆಗಾಗಿ ಆಶ್ರಯಿಸಿದ ಸ್ಥಳಗಳನ್ನು ಕುರಿತಾದ ಮಾಹಿತಿ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಮನೆ | 67 | 22.33 |
| 2 | ಖಾಸಗಿ ಆಸ್ಪತ್ರೆ | 54 | 18.00 |
| 3 | ಸರಕಾರಿ ಆಸ್ಪತ್ರೆ | 172 | 57.34 |
| 4 | ಮನೆ ಮತ್ತು ಸರಕಾರಿ ಆಸ್ಪತ್ರೆ | 07 | 2.33 |
| | ಒಟ್ಟು | 300 | 100.00 |

ಈ ಮೇಲಿನ ಕೋಷ್ಟಕ ಸಂಖ್ಯೆ 3.30 ರಲ್ಲಿ ನಮೂದಿಸಿದ ದತ್ತಾಂಶಗಳ ಆಧಾರದಲ್ಲಿ 67(22.33%) ಮಹಿಳೆಯರು ಹೆರಿಗೆಗಾಗಿ ಮನೆಯನ್ನು ಅವಲಂಬಿಸಿರುವುದನ್ನು ಕಾಣಬಹುದು. ಹಾಗೆಯೇ 54(18.00%) ಮಹಿಳೆಯರು ಖಾಸಗಿ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡಿದ್ದು, ಅತ್ಯಧಿಕ ಸಂಖ್ಯೆಯ ಅಂದರೆ 172(57.34%) ಮಹಿಳೆಯರು ಸರಕಾರಿ ಆಸ್ಪತ್ರೆಯನ್ನು ಮತ್ತು 07(2.33%) ಮಹಿಳೆಯರು ಮನೆ ಹಾಗೂ ಸರಕಾರಿ ಆಸ್ಪತ್ರೆಗಳಲ್ಲಿ ಹೆರಿಗೆಯಾಗಿರುವುದು ಎಂದು ಪ್ರತಿಕ್ರಿಯೆ ನೀಡಿರುತ್ತಾರೆ.

ಹಿರಿಯ ವಯಸ್ಸಿನ ಬುಡಕಟ್ಟು ಮಹಿಳೆಯರು ಹಿಂದೆ ಮನೆಯಲ್ಲಿ ಹೆರಿಗೆಯಾದುದನ್ನು ಹೀಗೆ ಜ್ಞಾಪಿಸಿಕೊಳ್ಳುತ್ತಾರೆ. "ಯಾವುದೇ ತೊಂದರೆಯಿಲ್ಲದೇ ನಾವು ನಮ್ಮ ಮಕ್ಕಳಿಗೆ ಜನ್ಮ ಕೊಟ್ಟಿದ್ದೇವೆ. ಹೆರಿಗೆ ನೋವು ಬಂದಾಕ್ಷಣ ಸೂಲಗಿತ್ತಿಯರಿಗೆ ಹೇಳಿಕಳುಹಿಸುತ್ತಿದ್ದೆವು. ಬರುವಾಗಲೇ ಮಗುವಿನ ಹೊಕ್ಕಳ ಬಳ್ಳಿಗೆ ಸುತ್ತಲು ನೂಲು ಹಿಡಿದುಕೊಂಡು ಬರುತ್ತಿದ್ದರು. ಸುಲಭದಲ್ಲಿ ಹೆರಿಗೆಯಾಗುತ್ತಿತ್ತು. ಮಗುವಿನ ಹೊಕ್ಕಳಿಗೆ ಕಟ್ಟಲಿಕ್ಕೆ ನೂಲು ತಂದು ಕಟ್ಟಿದರೆ ಮೂರರಿಂದ ಐದು ದಿನದಲ್ಲಿ ಹೊಕ್ಕಳ ಬಳ್ಳಿ ಕಡಿದು ಬೀಳುತ್ತಿತ್ತು. ತಾಯಿ-ಮಗು ಆರೋಗ್ಯವಾಗಿರುತ್ತಿದ್ದರು". ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮನೆಯಲ್ಲಿ ಆರ್ಥಿಕವಾಗಿ ಅನುಕೂಲತೆಯಿರುವವರು ಹೆರಿಗೆಗಾಗಿ ಖಾಸಗಿ ಆಸ್ಪತ್ರೆಗೆ ಭೇಟಿ ನೀಡುವುದು ಸಾಮಾನ್ಯವಾಗಿದೆ. ಅಧಿಕ ಸಂಖ್ಯೆಯ ಬುಡಕಟ್ಟು ಮಹಿಳೆಯರು 172(57.34%) ಹೆರಿಗೆಗೆ ಸರಕಾರಿ ಆಸ್ಪತ್ರೆಯನ್ನು ಅವಲಂಬಿಸಿದ್ದಾರೆ. ಅತ್ಯಧಿಕ ಕಡಿಮೆ ಖರ್ಚಿನಲ್ಲಿ ಅಗತ್ಯವಿರುವ ಚಿಕಿತ್ಸೆಯೊಂದಿಗೆ ಹೆರಿಗೆ ನಂತರದ ಪರಿಕರಗಳೊಂದಿಗೆ ಹೆಚ್ಚಿನ ಎಲ್ಲಾ

ಸರಕಾರಿ ಆಸ್ಪತ್ರೆಗಳು ಮಹಿಳೆಯರಿಗೆ ಉತ್ತಮ ರೀತಿಯ ಸೇವೆ ಮಾಡುವುದರಿಂದ ಬುಡಕಟ್ಟು ಮಹಿಳೆಯರು ಈ ಸೌಲಭ್ಯವನ್ನು ಸಮರ್ಪಕವಾಗಿ ಬಳಸಿಕೊಳ್ಳುತ್ತಿದ್ದಾರೆ.

**ಕೋಷ್ಟಕ ಸಂಖ್ಯೆ 3.31**

**ಬುಡಕಟ್ಟು ಮಹಿಳೆಯರು ಹೆರಿಗೆಯಾಗಿ ಮನೆಮದ್ದು ಹಾಗೂ ಆಹಾರದ ಔಷಧಿಯನ್ನು ಸೇವಿಸುವ ಒಟ್ಟು ದಿನಗಳ ಬಗ್ಗೆ ಅಭಿಪ್ರಾಯಗಳು**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | 7 ರಿಂದ 10 ದಿನ | 00 | 00 |
| 2 | 11 ರಿಂದ 25 | 43 | 14.33 |
| 3 | 1 ತಿಂಗಳು | 137 | 45.67 |
| 4 | 45ದಿನ | 89 | 29.67 |
| 5 | 45 ದಿನದ ಮೇಲೆ | 31 | 10.33 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 3.31 ಪ್ರಕಾರ 300 (100%) ಎಲ್ಲಾ ಬುಡಕಟ್ಟು ಮಹಿಳೆಯರು ಹೆರಿಗೆಯ ನಂತರ ಮನೆಯಲ್ಲಿ ತಯಾರಿಸಿದ ಮದ್ದು ಹಾಗೂ ವೈದ್ಯರು ಸೂಚಿಸಿದ ಔಷಧವನ್ನು ಸೇವಿಸುತ್ತೇವೆ ಎಂದು ಪ್ರತಿಕ್ರಯಿಸಿದ್ದಾರೆ. 43 (14.33%) ಮಹಿಳೆಯರು 11 ರಿಂದ 25 ದಿನ ಮನೆಮದ್ದು ಸೇವಿಸುತ್ತಾರೆ. ಹಾಗೂ 137 (45.67%) ಮಹಿಳೆಯರು ಒಂದು ತಿಂಗಳು ಈ ಔಷಧೀಯ ಆಹಾರ ಸೇವಿಸಿದರೆ 89 (29.67%) ಮಹಿಳೆಯರು 45 ದಿನ, 31 (10.33%) ಮಹಿಳೆಯರು 45 ದಿನಕ್ಕಿಂತಲೂ ಹೆಚ್ಚಾಗಿ ಈ ಔಷಧೀಯ ಆಹಾರ ಸೇವಿಸುತ್ತೇವೆಂದು ಅಭಿಪ್ರಾಯಪಟ್ಟಿದ್ದಾರೆ.

ಹೆಚ್ಚಿನ ಬುಡಕಟ್ಟು ಮಹಿಳೆಯರಲ್ಲಿ ಬಾಣಂತಿಗೆ ಓಮ, ಕಾಳಜೀರಿಗೆ ಹಾಗೂ ಒಳ್ಳೆಮೆಣಸು ಹಸಿಯಾಗಿ ಪುಡಿಮಾಡಿ, ಕಾಯಿಸಿ ಸಾಮಾನ್ಯವಾಗಿ ಐದು ರಿಂದ ಏಳು ದಿನಗಳ ಕಾಲ ಸೇವಿಸಲು ಕೊಡುತ್ತಾರೆ. ಹಾಗೂ ಕೊತ್ತಂಬರಿ, ಜೀರಿಗೆ, ಮೆಂತೆಯಂತಹ ಮಸಾಲೆ ಪದಾರ್ಥಗಳನ್ನು ಹುರಿದು ಒಣತೆಂಗಿನಕಾಯಿ, ಓಲೆಬೆಲ್ಲ ಸೇರಿಸಿ ಅನಂತರದ ದಿನಗಳಲ್ಲಿ ಸೇವಿಸಲು ಕೊಡುತ್ತಾರೆ. ಇಲ್ಲಿ ಐದು ಒಣತೆಂಗಿನಕಾಯಿಗೆ ಒಂದು ಕಟ್ಟು ಅಂದರೆ 12 ಓಲೆಬೆಲ್ಲದ ಅಗತ್ಯವಿದೆ ಎಂದು ಬುಡಕಟ್ಟು ಮಹಿಳೆಯರು ಪ್ರತಿಕ್ರಯಿಸುತ್ತಾರೆ. ಇನ್ನು ಕೆಲವು ಕಡೆ ಬಾಣಂತಿಯರಿಗೆ ಓಮದೊಂದಿಗೆ ಜಾರಿಗೆ ಕಾಯಿಯ ಓಟೆಯನ್ನು ಹಾಗೂ

ಸೀಗೆಕಾಯಿಯ ಸೊಪ್ಪನ್ನು ಬೇಯಿಸಿ ಸಾರು ಮಾಡಿ ಕೊಡುವುದು ಇದೆ ಎಂದೂ ತಿಳಿಸಿದ್ದಾರೆ. ಈ ಔಷಧೀಯ ಆಹಾರದಿಂದ ಬಾಣಂತಿಗಾಗುವ ಹೊಟ್ಟೆನೋವು ಹಾಗೂ ದೇಹದ ನಂಜು ಕಡಿಮೆಯಾಗುತ್ತದೆ ಎನ್ನುವ ನಂಬಿಕೆ ಬುಡಕಟ್ಟು ಸಮುದಾಯದಲ್ಲಿದೆ.

ಹಿಂದಿನ ಕಾಲದಲ್ಲಿ ಕಡುಬಡತನವಿದ್ದಾಗ ಬಾಣಂತಿಯರಿಗೆ ಕರಿಮೆಣಸು ಹುಡಿಮಾಡಿ ಅನ್ನದಲ್ಲಿ ಕಲಿಸಿ ಕೊಡುತ್ತಿದ್ದುದೂ ಇದ್ದು, ಇದರಿಂದ ಪ್ರಸವದ ನಂತರ ದೊಡ್ಡದಾಗುವ ಬಾಣಂತಿಯ ಹೊಟ್ಟೆಯ ಗಾತ್ರ ಸಣ್ಣದಾಗುತ್ತದೆ ಎನ್ನುವ ನಂಬಿಕೆಯಿತ್ತು. ಒಟ್ಟಿನಲ್ಲಿ ಕಾಳು ಜೀರಿಗೆ, ಒಳ್ಳೆಮೆಣಸು, ಬೆಳ್ಳುಳ್ಳಿ, ಓಮದಂತಹ ಪದಾರ್ಥಗಳ ಸೇವನೆಯಿಂದಾಗಿ ಬಾಣಂತಿಯರಲ್ಲಿ ರಕ್ತ ಉತ್ಪತ್ತಿಯಾಗಿ ಅಧಿಕ ಎದೆಹಾಲು ಸಿಗುತ್ತದೆ ಎನ್ನುವ ನಂಬಿಕೆ ಬುಡಕಟ್ಟು ಸಮುದಾಯದಲ್ಲಿದೆ.

ಎಸ್.ಮೋಹನ್ ಅವರ ಮಾರಾಠಿ ನಾಯ್ಕರ ಸಾಂಸ್ಕೃತಿಕ ಅಧ್ಯಯನದಲ್ಲಿ ಮನೆಯಲ್ಲಿ ತಯಾರಿಸಿದ ಪಥ್ಯದ ಬದಲಾಗಿ ಇಂದು ಮರಾಠಿ ನಾಯ್ಕ ಮಹಿಳೆಯರು ಮಾರುಕಟ್ಟೆಯಲ್ಲಿ ಸಿಗುವ ಅರಿಷ್ಠ, ದಶಮೂಲಾರಿಷ್ಟವನ್ನು ಬಾಣಂತಿಗೆ ಕೊಡುತ್ತಾರೆಂದು ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಬಾಣಂತಿಗೆ ಗೇರು ಹಣ್ಣಿನಿಂದ ತಯಾರಿಸಿದ ಮದ್ಯದಪಾನೀಯವನ್ನು ಕೂಡ ಮಿತವಾಗಿ ನೀಡುತ್ತಾರೆ. ಮಿತವಾಗಿ ಸೇವಿಸಿದರೆ ಆರೋಗ್ಯಕ್ಕೆ ಹಾನಿಯಿಲ್ಲ ಎಂದು ಮರಾಠಿ ನಾಯ್ಕ ಮಹಿಳೆಯರು ಪ್ರತಿಕ್ರಿಯಿಸಿದ್ದು, ಮೊದಲ ಒಂದು ತಿಂಗಳು ಬಾಣಂತಿಯ ಹೊಟ್ಟೆಗೆ ಉದ್ದವಾದ ಬಟ್ಟೆ ಅಥವಾ ಸೀರೆಯನ್ನು ಗಟ್ಟಿಯಾಗಿ ಸುತ್ತುವುದರಿಂದ ಉಬ್ಬಿದ್ದ ಹೊಟ್ಟೆಯ ಗಾತ್ರ ಪುನಃ ಮೂಲ ಗಾತ್ರಕ್ಕೆ ಬರುತ್ತದೆ ಎಂದೂ ಪ್ರತಿಕ್ರಯಿಸಿದ್ದಾರೆಂದು ಅಧ್ಯಯನಕಾರರು ಸ್ಪಷ್ಟಪಡಿಸಿದ್ದಾರೆ (2008: ಪು.ಸಂ 16)

ಬುಡಕಟ್ಟು ಮಹಿಳೆಯರು ತಮ್ಮ ಕುಟುಂಬದ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಹೆರಿಗೆಯ ನಂತರ ಔಷಧೀಯ ಆಹಾರವನ್ನು ಸೇವಿಸುವುದು ಅಧ್ಯಯನದಿಂದ ದೃಢಪಟ್ಟಿದೆ. ಆರ್ಥಿಕವಾಗಿ ಅನುಕೂಲವಿರುವ ಬುಡಕಟ್ಟು ಮಹಿಳೆಯರು ಪ್ರಸ್ತುತ ಮಾರುಕಟ್ಟೆಯಲ್ಲಿ ಲಭ್ಯವಿರುವ ಔಷಧೀಯ ಆಹಾರವನ್ನು ಸೇವಿಸುವುದನ್ನು ಅಧ್ಯಯನವು ಸ್ಪಷ್ಟಪಡಿಸುತ್ತದೆ.

ಒಟ್ಟಿನಲ್ಲಿ ಹೆರಿಗೆಯ ನಂತರ ಔಷಧೀಯ ಆಹಾರವನ್ನು ಸೇವಿಸುವುದರಿಂದ ಬಾಣಂತಿಯಲ್ಲಿ ಹಾಲು ಅಧಿಕ ಉತ್ಪತ್ತಿಯಾಗುವುದು, ದೇಹದ ನಂಜು ಕಡಿಮೆಯಾಗುವುದು,

ಮತ್ತು ಅಧಿಕ ರಕ್ತ ಉತ್ಪತ್ತಿಯಾಗುವುದು ಇತ್ಯಾದಿ ಪ್ರಯೋಜನಗಳಿವೆ ಎಂಬುವುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ.

## ಕೋಷ್ಟಕ ಸಂಖ್ಯೆ 3.32

## ಬುಡಕಟ್ಟು ಮಹಿಳೆಯರು ಹೆರಿಗೆಯ ನಂತರ ತೆಗೆದುಕೊಳ್ಳುವ ವಿರಾಮದ ದಿನಗಳ ಕುರಿತು ಅಭಿಪ್ರಾಯ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | 3 ತಿಂಗಳ ಮೇಲೆ | 105 | 35.00 |
| 2 | 2 ತಿಂಗಳ ಮೇಲೆ | 150 | 50.00 |
| 3 | 1 ತಿಂಗಳೊಳಗೆ | 37 | 12.33 |
| 4 | ಅನ್ವಯಿಸುವುದಿಲ್ಲ | 08 | 2.67 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.32 ರ ಪ್ರಕಾರ 300 ಮಹಿಳೆಯರಲ್ಲಿ 106(35.34%) ಮಹಿಳೆಯರು ಹೆರಿಗೆಯಾಗಿ ಮೂರು ತಿಂಗಳ ನಂತರ ತಮ್ಮ ದೈನಂದಿನ ಕೆಲಸದಲ್ಲಿ ತೊಡಗಿಸಿಕೊಂಡರೆ, 150(50.00%) ಮಹಿಳೆಯರು ಎರಡು ತಿಂಗಳ ಮೇಲೆ ತಮ್ಮ ದೈನಂದಿನ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾರೆ. 37(12.33%)ರಷ್ಟು ಮಹಿಳೆಯರು ಒಂದು ತಿಂಗಳೊಳಗೆ ತಮ್ಮ ಕೆಲಸದಲ್ಲಿ ತೊಡಗಿಸಿಕೊಂಡರೆ, ಎಂಟು (2.67%) ಮಹಿಳೆಯರು ಅವಿವಾಹಿತರಾದುದರಿಂದ ಈ ಕುರಿತ ಪ್ರಶ್ನೆ ಅವರಿಗೆ ಅನ್ವಯಿಸುವುದಿಲ್ಲ.

ಪ್ರಥಮ ಬಾರಿಯ ಹೆರಿಗೆಯ ನಂತರದ ದಿನಗಳನ್ನು ಮಹಿಳೆಯರು ತವರು ಮನೆಯಲ್ಲಿ ಕಳೆಯುವುದರಿಂದ ತಾಯಿ, ಹಾಗೂ ಇತರ ಕುಟುಂಬದ ಸದಸ್ಯರು ಆರೈಕೆ ಮಾಡಲು ಶಕ್ತರಾಗಿರುವಲ್ಲಿ ಹೆಚ್ಚಿನ ಮಹಿಳೆಯರು ಎರಡು ತಿಂಗಳ ಮೇಲೆ ತಮ್ಮ ದೈನಂದಿನ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತಾರೆ. ಹೆಚ್ಚಿನ ಬುಡಕಟ್ಟು ಮಹಿಳೆಯರು ಬೀಡಿ ಕಟ್ಟುವುದರಿಂದ ಎರಡರಿಂದ ಮೂರು ತಿಂಗಳೊಳಗಾಗಿ ನಿಧಾನವಾಗಿ ಮನೆಯಲ್ಲಿ ತಮ್ಮ ಉದ್ಯೋಗವನ್ನು ಮುಂದುವರಿಸುತ್ತಾರೆ. ಕೆಲಸ ಮತ್ತು ಆದಾಯದ ಅಗತ್ಯವಿದ್ದು, ಆರೈಕೆಗೆ ಕುಟುಂಬದ ಸದಸ್ಯರ ಕೊರತೆ ಇದ್ದಲ್ಲಿ ಒಂದು ತಿಂಗಳೊಳಗೆ ಬುಡಕಟ್ಟು ಮಹಿಳೆಯರು ತಮ್ಮ ಕೆಲಸದಲ್ಲಿ ಎಂದಿನಂತೆ ತೊಡಗಿಸಿಕೊಳ್ಳುತ್ತಾರೆ. ಹೆಚ್ಚಿನ ಬುಡಕಟ್ಟು ಮನೆಗಳಲ್ಲಿ ಬಾಣಂತಿಗೆ ಬೇಕಾಗುವ ವಿಶೇಷ

ಆಹಾರ, ಸ್ವಚ್ಛಗಾಳಿ, ಶುದ್ಧ ನೀರಿನ (ವಿಶೇಷವಾಗಿ ಕುಡುಬಿ, ಕೊರಗ ಬುಡಕಟ್ಟುಗಳಲ್ಲಿ) ಅಗತ್ಯದ ಕೊರತೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಲಾಗಿದೆ.

## ಕೋಷ್ಟಕ ಸಂಖ್ಯೆ 3.33

## ಕುಟುಂಬ ಕಲ್ಯಾಣ ಯೋಜನೆಯ ಕುರಿತು ನಿರ್ಧಾರ ತೆಗೆದುಕೊಳ್ಳುವಲ್ಲಿ ಬುಡಕಟ್ಟು ಮಹಿಳೆಯರ ಅಭಿಪ್ರಾಯ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವತಹ | 42 | 14.00 |
| 2 | ಗಂಡ | 39 | 13.00 |
| 3 | ಇಬ್ಬರು ಜೊತೆಯಾಗಿ | 173 | 57.64 |
| 4 | ಅನ್ವಯಿಸುವುದಿಲ್ಲ | 46 | 15.36 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.33 ರಲ್ಲಿ ಒಟ್ಟು 300 (100.00%) ಮಹಿಳೆಯರಲ್ಲಿ 42(14.00%) ಮಹಿಳೆಯರು ಕುಟುಂಬ ಕಲ್ಯಾಣದ ಕುರಿತು, ಸ್ವತಃ ನಿರ್ಧಾರ ತೆಗೆದುಕೊಂಡಿರುವುದಾಗಿ ತಿಳಿಸಿದ್ದಾರೆ. 39(13.00%) ಮಹಿಳೆಯರು ತಮ್ಮ ಪತಿಯಂದಿರ ಅಭಿಪ್ರಾಯದಂತೆ ಕುಟುಂಬ ಕಲ್ಯಾಣ ಯೋಜನೆಗೆ ಒಳಪಟ್ಟಿರುವುದಾಗಿಯೂ, 173(57.64%) ಮಹಿಳೆಯರು ದಂಪತಿಗಳಿಬ್ಬರೂ ಸೇರಿ ನಿರ್ಧರಿಸಿದ್ದಾಗಿಯೂ, 46(15.36%) ಮಹಿಳೆಯರು ಮುಂದೆ ಗರ್ಭ ಧರಿಸದೇ ಇರುವುದರಿಂದಲೂ ಹಾಗೂ ಪತಿಯು ಮರಣ ಹೊಂದಿರುವುದರಿಂದಲೂ ಮತ್ತು ಅವಿವಾಹಿತರಾಗಿರುವುದರಿಂದಲೂ ಈ ವಿಷಯ ಅನ್ವಯಿಸುವುದಿಲ್ಲ.

ಅತ್ಯಧಿಕ ಸಂಖ್ಯೆಯ ಬುಡಕಟ್ಟು ಮಹಿಳೆಯರು ಅಂದರೆ 57.64% ತಮ್ಮ ಪತಿಯರೊಂದಿಗಿನ ಪರಸ್ಪರ ಮಾತುಕತೆಯ ಮೂಲಕ ಕುಟುಂಬ ಯೋಜನೆಯ ನಿರ್ಧಾರ ಕೈಗೆತ್ತಿಕೊಂಡಿದ್ದಾರೆ.

ಆಧುನೀಕತೆಯ ಪ್ರಭಾವದಿಂದಾಗಿ ಬುಡಕಟ್ಟು ಕುಟುಂಬಗಳಲ್ಲಿ ಸಮಾನತೆ, ಎನ್ನುವ ಅಂಶವು ಹುದುಗಿರುವುದನ್ನು ಇಲ್ಲಿ ಗಮನಿಸಬಹುದು. ಕುಟುಂಬದ ನಿರ್ವಹಣೆಗೆ

ಕಷ್ಟವಾಗುವುದರಿಂದ ದಂಪತಿಗಳಿಬ್ಬರೂ ಸೇರಿ ನಿರ್ಧಾರಕ್ಕೆ ಬಂದುದಾಗಿ ಪ್ರತಿಕ್ರಯಿಸಿರುವ ವಿಚಾರ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಿದೆ.

## ಕೋಷ್ಟಕ ಸಂಖ್ಯೆ 3.34(ಎ)

## ಬುಡಕಟ್ಟು ಮಹಿಳೆಯರಲ್ಲಿ ಋತುಬಂಧದ ಪ್ರಕ್ರಿಯೆಯ ಅರಿವಿನ ಕುರಿತು ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಅರಿವಿದೆ | 124 | 41.33 |
| 2 | ಅರಿವಿಲ್ಲ | 176 | 58.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.34ರಲ್ಲಿ ಒಟ್ಟು 300 (100.00%) ಬುಡಕಟ್ಟು ಮಹಿಳೆಯರಲ್ಲಿ 124(41.33%) ಮಹಿಳೆಯರಿಗೆ ಋತುಬಂಧದ ಪ್ರಕ್ರಿಯೆಯ ಅರಿವಿದೆ. 176(58.67%) ಮಹಿಳೆಯರಿಗೆ ಈ ಕುರಿತು ಯಾವುದೇ ಅರಿವಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ. ಋತುಬಂಧದ ಹಂತದಲ್ಲಿ ಅಥವಾ ಮಧ್ಯವಯಸ್ಸಿನಲ್ಲಿ ಅತಿಸ್ರಾವ ಅಥವಾ ಅಲ್ಪ ಸ್ರಾವವಾಗುತ್ತದೆ ಎಂದು ಬುಡಕಟ್ಟು ಮಹಿಳೆಯರು ಅಭಿಪ್ರಾಯಪಟ್ಟಿದ್ದಾರೆ. ಈ ಹಂತದ ಅತಿಸ್ರಾವ ಅಥವಾ ಅಲ್ಪ ಸ್ರಾವದೊಂದಿಗೆ ವಿಕೃತ ಸ್ರಾವ(ಬಿಳಿ ಸ್ರಾವ)ದ ಸಮಸ್ಯೆ ಇದ್ದು ಈ ಕುರಿತಾದ ಮಾಹಿತಿ ಬುಡಕಟ್ಟು ಮಹಿಳೆಯರಲ್ಲಿ ಇರಲಿಲ್ಲ. ಒಟ್ಟು 176(58.67%) ಅಂದರೆ ಅತ್ಯಧಿಕ ಬುಡಕಟ್ಟು ಮಹಿಳೆಯರಲ್ಲಿ ಋತುಬಂಧದ ಕುರಿತಾಗಿ ಮಾಹಿತಿ ನೀಡುವ ಅಗತ್ಯವಿರುವ ಅಂಶವು ಈ ಅಧ್ಯಯನದಿಂದ ಕಂಡುಬಂದಿದೆ.

ದೈಹಿಕ ಸಮಸ್ಯೆಗಳಾದ ಕೆಳ ಹೊಟ್ಟೆ ನೋವು, ಕೆಳ ಬೆನ್ನು ನೋವುಗಳೊಂದಿಗೆ ಮಾನಸಿಕ ಸಮಸ್ಯೆಗಳಾದ ಖಿನ್ನತೆ, ಆತಂಕ, ಚಿಂತೆ ಇತ್ಯಾದಿಗಳು ಪ್ರಾರಂಭವಾಗುವುದರಿಂದ ಬುಡಕಟ್ಟು ಮಹಿಳೆಯರು ಇದನ್ನು ಎದುರಿಸಲು ಮಾನಸಿಕವಾಗಿ ಸಿದ್ಧರಾಗಬೇಕಾಗಿದೆ. ಹಾಗೂ ಕುಟುಂಬದವರಿಗೂ ಈ ಮಾಹಿತಿ ಅಗತ್ಯವಿದ್ದು ಋತುಬಂಧದ ಕಾಲದಲ್ಲಿ ತಮ್ಮ ಮನೆಯ ಮಹಿಳೆಯರನ್ನು ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ.

ಋತುಬಂಧದ ಕಾಲದಲ್ಲಿ ಉಂಟಾಗುವ ಮಾನಸಿಕ ಗೊಂದಲಗಳ ಕಾರಣವನ್ನು ಹೆಚ್ಚಿನ ಬುಡಕಟ್ಟು ಮಹಿಳೆಯರು ಗುರುತಿಸಲು ಅಸಾಧ್ಯವಾಗಿದೆ. ಹಾರ್ಮೋನುಗಳ ಸ್ರವಿಸುವಿಕೆ ಕಡಿಮೆಯಾಗುವ ಪರಿಣಾಮದಿಂದ ಉಂಟಾಗುವ ಈ ಮೇಲಿನ ಎಲ್ಲಾ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳ ಅರಿವಿನ ಕೊರತೆ ಬುಡಕಟ್ಟು ಮಹಿಳೆಯರಲ್ಲಿರುವುದನ್ನು ಅವಲೋಕಿಸಲಾಗಿದೆ. ಮುಂದಿನ ಕೋಷ್ಟಕ ಸಂಖ್ಯೆ 3.34ಬಿ ಯಲ್ಲಿ ಋತುಬಂಧದ ಪ್ರಕ್ರಿಯೆ ಅರಿವಿನ ಕುರಿತಾದ ತುಲನಾತ್ಮಕ ವಿವರಣೆಯನ್ನು ಗಮನಿಸಬಹುದು.

## ಕೋಷ್ಟಕ ಸಂಖ್ಯೆ 3.34(ಬಿ)

## ಮಾಹಿತಿದಾರರಲ್ಲಿ ಋತುಬಂಧದ ಪ್ರಕ್ರಿಯೆಯ ಅರಿವಿನ ಕುರಿತಾದ ತುಲನಾತ್ಮಕ ವಿವರಣೆ

| ಕ್ರ. ಸಂ | ಅಭಿಪ್ರಾಯ | ಕುಡುಬಿ | ಒಟ್ಟು ಶೇ | ಮ.ನಾಯ್ಕ | ಒಟ್ಟು ಶೇ | ಮ.ಕು | ಒಟ್ಟು ಶೇ | ಕೊರಗ | ಒಟ್ಟು ಶೇ |
|---|---|---|---|---|---|---|---|---|---|
| 1 | ಹೌದು | 36 | 36% | 42 | 42% | 21 | 35% | 25 | 63% |
| 2 | ಇಲ್ಲ | 64 | 64% | 58 | 58% | 39 | 65% | 15 | 37% |
| | ಒಟ್ಟು | 100 | 100% | 100 | 100% | 60 | 100% | 40 | 100% |

$x^2 = 9.574$, $p=0.023$

ಕೋಷ್ಟಕ ಸಂಖ್ಯೆ 3.34(ಬಿ) ಯಲ್ಲಿ ಮಾಹಿತಿದಾರರಲ್ಲಿ ಋತುಬಂಧದ ಕುರಿತಾದ ಅರಿವಿನ ತುಲನಾತ್ಮಕ ವಿವರಣೆಯಿಂದ ಕೈ ಸ್ಕ್ವೇರ್ (Chi Square) ಟೆಸ್ಟ್‌ನ ಪ್ರಕಾರ ನಾಲ್ಕು ಬುಡಕಟ್ಟು ಮಹಿಳೆಯರ ಅಭಿಪ್ರಾಯದಲ್ಲಿ ಭಿನ್ನತೆಯಿರುವುದು ಕಂಡುಬರುತ್ತದೆ. ಒಟ್ಟು 100(100%) ಕುಡುಬಿ ಮಹಿಳೆಯರಲ್ಲಿ 36(36%) ಮಹಿಳೆಯರಿಗೆ ಋತುಬಂಧದ ಪ್ರಕ್ರಿಯೆಯ ಅರಿವಿದೆ. ಹಾಗೂ 64(64%) ಮಹಿಳೆಯರಿಗೆ ಈ ಕುರಿತಾದ ಅರಿವಿಲ್ಲ. ಮರಾಠಿ ನಾಯ್ಕ ಮಹಿಳೆಯರಲ್ಲಿ 42(42%) ಮಹಿಳೆಯರಿಗೆ ಈ ಕುರಿತಾದ ಅರಿವಿದ್ದು 21(21%) ಮಹಿಳೆಯರಿಗೆ ಅರಿವಿಲ್ಲ. ಮಲೆಕುಡಿಯರ 60(100) ಮಹಿಳೆಯರಲ್ಲಿ 21(35%) ಮಹಿಳೆಯರಿಗೆ ಈ ಕುರಿತು ಅರಿವು ಇದ್ದು 39(65%) ಮಹಿಳೆಯರಿಗೆ ಈ ಕುರಿತಾದ ಅರಿವಿಲ್ಲ. ಕೊರಗರ 40(100%) ಮಹಿಳೆಯರಲ್ಲಿ 25(63%) ಮಹಿಳೆಯರಿಗೆ ಋತುಬಂಧದ ಪ್ರಕ್ರಿಯೆಯ ಅರಿವಿದೆ. ಮತ್ತು 15(37%) ಮಹಿಳೆಯರಿಗೆ ಈ ಕುರಿತಾದ ಅರಿವಿನ ಕೊರತೆ ಇದೆ.

ಕೋಷ್ಟಕದ ಆಧಾರದಲ್ಲಿ ತುಲನಾತ್ಮಕ ವಿವರಣೆ ನೀಡುವುದಾದರೆ ($x^2$ = 9.574, p=0.023) ಅತಿ ಹೆಚ್ಚಿನ ಕೊರಗ ಬುಡಕಟ್ಟು ಮಹಿಳೆಯರಲ್ಲಿ ಋತುಬಂಧದ ಪ್ರಕ್ರಿಯೆಯ ಅರಿವು ಇರುವುದು ಸ್ಪಷ್ಟವಾಗುತ್ತದೆ ಹಾಗೂ ಅತಿ ಹೆಚ್ಚಿನ ಮಲೆಕುಡಿಯ ಮಹಿಳೆಯರಲ್ಲಿ ಈ ಕುರಿತಾದ ಅರಿವಿನ ಕೊರತೆಯಿರುವುದು ಕಂಡುಬರುತ್ತದೆ.

ಕೊರಗ ಮಹಿಳೆಯರು ಸಂಘಟನೆಯಲ್ಲಿ ಸಕ್ರಿಯವಾಗಿ ಮಾಹಿತಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆಂದು ಮತ್ತೊಮ್ಮೆ ಇಲ್ಲಿ ಗಮನಿಸಬಹುದಾಗಿದೆ. ಮತ್ತು ಮಲೆಕುಡಿಯ ಮಹಿಳೆಯರೊಂದಿಗೆ ಕೆಲಸ ಮಾಡುವ ಸಂಘಟನೆಗಳು ಅತಿ ವಿರಳವಾಗಿದೆ ಎಂದೂ ಅಧ್ಯಯನದ ಮೂಲಕ ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 3.35

## ಋತುಬಂಧದ ಕುರಿತಾದ ಮಾಹಿತಿ ಅಭ್ಯವಿರುವ ಅಭಿಪ್ರಾಯದ ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಮಾಹಿತಿ ದೊರಕಿದೆ | 137 | 45.67 |
| 2 | ಮಾಹಿತಿ ದೊರಕಿಲ್ಲ | 163 | 54.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.35 ರಲ್ಲಿ ಒಟ್ಟು 300(100%) ಬುಡಕಟ್ಟು ಮಹಿಳೆಯರಲ್ಲಿ 137(45.67%) ಮಹಿಳೆಯರಿಗೆ ಮುಟ್ಟು ನಿಲ್ಲುವಿಕೆಯ ಕುರಿತಾದ ಮಾಹಿತಿ ದೊರಕಿದೆ. 163(54.33%) ಮಹಿಳೆಯರು ಈ ಕುರಿತಾದ ಮಾಹಿತಿ ದೊರಕಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ.

ಬುಡಕಟ್ಟು ಮಹಿಳೆಯರು ಸ್ತ್ರೀಶಕ್ತಿ ಸಂಘಗಳು, ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯ ಸಂಘಗಳು, ಅಲ್ಲದೆ ಸಮುದಾಯ ಆಧಾರಿತ ಸಂಘಗಳಲ್ಲಿ ಸದಸ್ಯರುಗಳಾಗಿರುವುದರಿಂದ ಸಂಘಗಳ ಸಭೆಗಳಲ್ಲಿ ಈ ವಿಷಯಗಳು ಚರ್ಚೆಯಾಗುತ್ತಿವೆ.

ಈ ನಿಟ್ಟಿನಲ್ಲಿ ಸುಮಾರು 137(45.67%) ಮಹಿಳೆಯರು ವಿವಿಧ ಸಂಪನ್ಮೂಲ ವ್ಯಕ್ತಿಗಳಿಂದ ಋತುಬಂಧದ ಕುರಿತಾದ ಮಾಹಿತಿ ಪಡೆಕೊಂಡಿದ್ದಾರೆ. ಆದರೆ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರಿಗೆ 163(54.33%) ಈ ಕುರಿತಾದ ಮಾಹಿತಿಯ ಕೊರತೆ ಇರುವುದನ್ನು

ಗಮನಿಸಲಾಗಿದೆ. ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಈ ಕುರಿತಾದ ಮಾಹಿತಿ ಪಡೆದಿಲ್ಲದೇ ಇರುವುದಿಂದ ಈ ವಿಷಯದ ಕುರಿತಾದ ಮಾಹಿತಿ ಅಗತ್ಯವಿದೆ. ಎನ್ನುವುದನ್ನು ಅರ್ಥಮಾಡಿಕೊಳ್ಳಬಹುದು.

**ಕೋಷ್ಟಕ ಸಂಖ್ಯೆ 3.36**

**ಬುಡಕಟ್ಟು ಮಹಿಳೆಯರು ಋತುಬಂಧದ ಮತ್ತು ಮುಟ್ಟಿನ ಸಂದರ್ಭದಲ್ಲಿ ತಮಗಾಗುವ ದೈಹಿಕ ಸಮಸ್ಯೆಗಳನ್ನು ಯಾರೊಂದಿಗೆ ಹಂಚಿಕೊಳ್ಳುತ್ತಾರೆಂಬ ಕುರಿತು ವಿವರ**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಗಂಡ | 55 | 18.33 |
| 2 | ಮನೆಯವರಲ್ಲಿ | 33 | 11.00 |
| 3 | ವೈದ್ಯರಲ್ಲಿ | 19 | 6.33 |
| 4 | ಇತರ ಮಹಿಳೆಯರಲ್ಲಿ | 46 | 15.34 |
| 5 | ಸಮಸ್ಯೆಗಳಿಲ್ಲ | 147 | 49.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.36 ಋತುಬಂಧ ಮತ್ತು ಮುಟ್ಟಿನ ಸಂದರ್ಭದಲ್ಲಾಗುವ ದೈಹಿಕ ಸಮಸ್ಯೆಗಳನ್ನು ಹಂಚಿಕೊಳ್ಳುವ ವಿಷಯದ ಕುರಿತು ಸ್ಪಷ್ಟಪಡಿಸುತ್ತದೆ.

ಒಟ್ಟು 300 (100.00%) ಮಹಿಳೆಯರಲ್ಲಿ 55(18.33%) ಮಹಿಳೆಯರು ತಮ್ಮ ಮುಟ್ಟು ಮತ್ತು ಋತುಬಂಧದ ಸಮಸ್ಯೆಗಳನ್ನು ಪತಿಯರಲ್ಲಿ ಹಂಚಿಕೊಳ್ಳುತ್ತೇವೆಂದು ಮತ್ತು 33(11.00%) ಮಹಿಳೆಯರು ಮನೆಯ ಇತರ ಸದಸ್ಯರಲ್ಲಿ ಹಂಚಿಕೊಳ್ಳುತ್ತೇವೆಂದು, 19(6.33%) ಮಹಿಳೆಯರು ದೈಹಿಕ ಸಮಸ್ಯೆಗಳನ್ನು ವೈದ್ಯರಲ್ಲಿ ಹಂಚಿಕೊಳ್ಳತ್ತೇವೆಂದು ಹಾಗೂ 46(15.34%) ಮಹಿಳೆಯರು ತಮಗೆ ಆತ್ಮೀಯರಾದ ಇತರ ಮಹಿಳೆಯರಲ್ಲಿ ವೈಯಕ್ತಿಕ ಆರೋಗ್ಯ ಸಮಸ್ಯೆಯನ್ನು ಹಂಚಿಕೊಳ್ಳುತ್ತೇವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಅಧ್ಯಯನದಲ್ಲಿ ಕಂಡುಕೊಂಡಂತೆ ಅತಿ ಹೆಚ್ಚಿನ ಸಂಖ್ಯೆಯ 147(49.00%) ಮಹಿಳೆಯರು ತಮಗೆ ಮುಟ್ಟು ಮತ್ತು ಋತುಬಂಧದ ಸಂದರ್ಭಗಳಲ್ಲಿ ಯಾವುದೇ ರೀತಿಯ ಸಮಸ್ಯೆಗಳು ಇರುವುದಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ.

## ಕೋಷ್ಟಕ ಸಂಖ್ಯೆ 3.37

## ಮನೆಯಲ್ಲಿ ಅತ್ತೆ – ಸೊಸೆಯಂದಿರ ನಡುವೆ ಉಂಟಾಗುವ ಭಿನ್ನಾಭಿಪ್ರಾಯಗಳ ಕುರಿತು ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಹೌದು | 47 | 15.67 |
| 2 | ಇಲ್ಲ | 127 | 42.33 |
| 3 | ಅನ್ವಯಿಸುವುದಿಲ್ಲ | 126 | 42.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 3.37 ರ ಪ್ರಕಾರ ಒಟ್ಟು 300 ಮಹಿಳೆಯರಲ್ಲಿ 47(15.67%) ಮಹಿಳೆಯರು ಅತ್ತೆ ಸೊಸೆಯ ನಡುವೆ ಭಿನ್ನಾಭಿಪ್ರಾಯ ಉಂಟಾಗುತ್ತವೆ. ಎಂದು ಅನಿಸಿಕೆ ವ್ಯಕ್ತಪಡಿಸಿದ್ದು 127(42.33%) ಬುಡಕಟ್ಟು ಮಹಿಳೆಯರು ಭಿನ್ನಾಭಿಪ್ರಾಯ ಉಂಟಾಗಿಲ್ಲ. ಎಂದರೆ 126(42.00%) ಮಹಿಳೆಯರು ತಿಳಸಿದಂತೆ ಅತ್ತೆ ಬೇರೆ ಕಡೆ ವಾಸ್ತವ್ಯವಿರುವುದರಿಂದಲೂ ಮತ್ತು ಮರಣ ಹೊಂದಿರುವುದರಿಂದಲೂ ಈ ಕುರಿತಾದ ಪ್ರಶ್ನೆ ಅನ್ವಯಿಸುವುದಿಲ್ಲ.

ಅಧ್ಯಯನದಿಂದ ಕಂಡುಕೊಂಡಂತೆ ಸಾಮಾನ್ಯವಾಗಿ ಬುಡಕಟ್ಟು ಮನೆಗಳಲ್ಲಿ ಅತ್ತೆ-ಸೊಸೆ ಬಹಳ ಅನ್ಯೋನ್ಯವಾಗಿರುವುದನ್ನು ಗಮನಿಸಲಾಗಿದೆ. ಅತ್ತೆಯರು ಇರುವ ಮನೆಗಳಲ್ಲಿ ಮಾಹಿತಿ ಸಂಗ್ರಹಿಸುವಲ್ಲಿ ತಮ್ಮ ಸೊಸೆಯಂದಿರನ್ನು ಕೇಳದರೆ ಉತ್ತಮ ಮಾಹಿತಿ ಸಿಗುತ್ತದೆ ಎಂದು ಪ್ರತಿಕ್ರಯಿಸಿದ್ದಾರೆ.

ಯಾವ ಹೆಚ್ಚಿನ ದುರಾಸೆಯಿಲ್ಲದೆ, ಕಲಹಗಳಿಲ್ಲದೆ, ಇದ್ದುದನ್ನು ತೃಪ್ತಿಯಿಂದ ಹಂಚಿಕೊಂಡು ತಿನ್ನುವುದೇ ಬುಡಕಟ್ಟು ಸಮುದಾಯದ ಕುಟುಂಬಗಳಲ್ಲಿ ಕಂಡುಬರುವ ಒಂದು ಸಾಮಾಜಿಕ ಮೌಲ್ಯವು ಪ್ರಸ್ತುತ ಅಧ್ಯಯನದಿಂದ ದೃಢಪಟ್ಟಿದೆ.

ಒಟ್ಟಿನಲ್ಲಿ ಸಮುದಾಯವು ಜನರನ್ನು ಒಳಗೊಂಡ ಒಂದು ವ್ಯವಸ್ಥೆಯಾಗಿರುವುದರಿಂದ ಇಲ್ಲಿ ಸಮುದಾಯದೊಳಗಿನ ಅಂಶಗಳು ಅಥವಾ ಹೊರಗಿನ ಅಂಶಗಳು ಒಟ್ಟು ಸಾಮಾಜಿಕ ಬದಲಾವಣೆಯನ್ನು ತರುವುದು ಸ್ವಾಭಾವಿಕವಾಗಿದೆ. ಭೌಗೋಳಿಕವಾಗಿ ಬುಡಕಟ್ಟು ಸಮುದಾಯವು ಇತರ ಸಮುದಾಯಗಳಿಂದ ಅಂತರದಲ್ಲಿರುವುದರಿಂದ ಬದಲಾವಣೆಯು ಮಂದಗತಿಯಲ್ಲಿದೆ. ಎನ್ನುವುದು ಅಧ್ಯಯನದಿಂದ ಗಮನಿಸಬಹುದಾಗಿದೆ.

ತಮ್ಮ ಗುಂಪಿನವರೊಂದಿಗೆ ಸಹಬಾಳ್ವೆ ನಡೆಸುತ್ತಿರುವುದರಿಂದ ಬುಡಕಟ್ಟು ಸಮುದಾಯಕ್ಕೆ ಒಟ್ಟು ಸಮಾಜದ ಪ್ರಭಾವ ತೀವ್ರವಾಗಿಲ್ಲದಿದ್ದರೂ ಆಧುನೀಕರಣದಿಂದಾಗಿ ಮನರಂಜನೆಯ ಮೂಲ, ಸಂವಹನ ವಾಹಿನಿಗಳು, ಧಾರ್ಮಿಕ ನಂಬಿಕೆ, ವಿಚಾರಗಳು, ಉಡುಗೆ-ತೊಡುಗೆ, ವಿದ್ಯುತ್ ಆಧಾರಿತ ಗೃಹೋಪಯೋಗಿ ವಸ್ತುಗಳ ಬಳಕೆ ಇತ್ಯಾದಿ ಬದಲಾವಣೆಗಳು ಸಮುದಾಯದಲ್ಲಿ ಆಗಿವೆ ಎನ್ನುವುದನ್ನು ಅಧ್ಯಯನದ ಮೂಲಕ ಗಮನಿಸಬಹುದಾಗಿದೆ.

ಮುಂದಿನ ಅಧ್ಯಾಯವು ಬುಡಕಟ್ಟು ಮಹಿಳೆಯರ ಆರ್ಥಿಕ ಪರಿಸ್ಥಿತಿಯತ್ತ ನೋಟ ಬೀರುತ್ತದೆ.

# ಅಧ್ಯಾಯ – ನಾಲ್ಕು

# ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಆರ್ಥಿಕ ಜೀವನದ ಸ್ಥಿತಿ – ಗತಿ

ಸಾಮಾಜಿಕ ಮತ್ತು ಆರ್ಥಿಕ ಜೀವನದ ಮಾನದಂಡಗಳು ಒಂದಕ್ಕೊಂದು ಪೂರಕವಾಗಿದೆ. ಅಥವಾ ಅವೆರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಮನುಷ್ಯನ ದೈನಂದಿನ ಚಟುವಟಿಕೆಗಳು, ಜೀವನ ಶೈಲಿ, ಆಹಾರ, ಉಡುಗೆ ತೊಡುಗೆ, ಯೋಚನೆಗಳು, ಮನರಂಜನೆ, ಸಾಮಾಜಿಕ ಸಾಮರಸ್ಯ, ಒಡನಾಟ ಇವೆಲ್ಲವೂ ಆ ವ್ಯಕ್ತಿಯ ಆರ್ಥಿಕ ಚೌಕಟ್ಟಿನ ಮೇಲೆ ಅವಲಂಬಿತವಾಗಿರುತ್ತದೆ.

ಸ್ವತಂತ್ರ ಭಾರತಕ್ಕೆ 50 ವರ್ಷಗಳು ಕಳೆದರೂ ಬುಡಕಟ್ಟು ಅಭಿವೃದ್ಧಿ ಕುಂಟುತ್ತ ಸಾಗಿದೆ. ಬುಡಕಟ್ಟು ಸರ್ವತೋಮುಖ ಅಭಿವೃದ್ಧಿಗೆಂದೇ ಪ್ರತ್ಯೇಕವಾಗಿ ಬುಡಕಟ್ಟು ವ್ಯವಹಾರಗಳ ಮಂತ್ರಾಲಯವೊಂದು (Ministry of Tribal Affairs) 1999ರ ಅಕ್ಟೋಬರ್ ತಿಂಗಳಿಂದ ಕಾರ್ಯನಿರ್ವಹಿಸುತ್ತಿದೆ.

ಬುಡಕಟ್ಟುಗಳ ಮೂಲ ಆರ್ಥಿಕ ಸಂಘಟನೆಯು ಪಾಶ್ಚಾತೀಕರಣ, ಸಂಸ್ಕೃತೀಕರಣ, ತಾಂತ್ರೀಕರಣ ಮತ್ತು ಸರಕಾರಿ ಯೋಜನೆಗಳ ಅನುಷ್ಠಾನದಿಂದ ಬದಲಾಗುತ್ತಿದೆ. ಬುಡಕಟ್ಟುಗಳ ಪ್ರೀತಿಯ ತಾಣವಾಗಿದ್ದ ಮತ್ತು ಆಸರೆಯಾಗಿದ್ದ ಕಾಡುಗಳು ಸರಕಾರದ ಯೋಜನೆಗಳ ಸೊತ್ತಾದಾಗ ಬುಡಕಟ್ಟು ಜನರ ಕಸುಬಿಗೆ ತೊಂದರೆಯಾಗಿದ್ದು ಸ್ವಾಭಾವಿಕವೇ. ಇದರಿಂದಾಗಿ ಇಂದು ಅಲ್ಪಪ್ರಮಾಣದಲ್ಲಿ ಬುಡಕಟ್ಟು ಜನರು ಮೂಲಕಸುಬನ್ನು ಅವಲಂಬಿಸಿದ್ದರೆ ಹೆಚ್ಚಿನ ಬುಡಕಟ್ಟು ಸಮುದಾಯಗಳು ಕೃಷಿ ಹಾಗೂ ಕೃಷಿಯೇತರ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ

ಈ ಅಧ್ಯಾಯದಲ್ಲಿ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಆರ್ಥಿಕ ಸ್ಥಿತಿ ಗತಿಯನ್ನು ಅವಲೋಕಿಸಲು ಅವರು ಅವಲಂಬಿಸಿರುವ ಕಸುಬು, ಕುಟುಂಬದ ಒಟ್ಟು ವಾರ್ಷಿಕ ವರಮಾನ, ಸ್ವಂತಿಕೆಯಲ್ಲಿರುವ ಒಟ್ಟು ಭೂಮಿ, ನೀರಾವರಿ ವ್ಯವಸ್ಥೆ ಕೃಷಿಯಲ್ಲಿ ತೊಡಗಿಸಿಕೊಂಡವರು ಬೆಳೆಯುವ ಬೆಳೆ, ಸ್ವಉದ್ಯೋಗ, ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆಯರ ಯೋಚನೆಗಳು, ಮನೆಗೆ ಬೇಕಾಗುವ ವಸ್ತುಗಳನ್ನು ಖರೀದಿಸುವಲ್ಲಿ ಮಹಿಳೆಯರ ಸ್ವಾತಂತ್ರ್ಯ,

ಸ್ವಂತದ ಉಪಯೋಗಕ್ಕಾಗಿ ಮಹಿಳೆಯರಲ್ಲಿ ಇರುವ ಒಟ್ಟು ಚಿನ್ನದ ಒಡವೆಗಳನ್ನು ಮಾನದಂಡವಾಗಿ ಬಳಸಿಕೊಳ್ಳಲಾಗಿದೆ.

ಮನೆನಿರ್ವಹಣೆಗೆ ಅಗತ್ಯ ಸಂದರ್ಭಗಳಲ್ಲಿ ಬುಡಕಟ್ಟು ಮಹಿಳೆಯರು ಪಡಕೊಂಡಿರುವ ಸಾಲದ ಉದ್ದೇಶಗಳು, ಬೆಳೆಸಿಕೊಂಡು ಬಂದಿರುವ ಉಳಿತಾಯದ ಹವ್ಯಾಸ ಮತ್ತು ಉಳಿತಾಯದ ಹಣದಲ್ಲಿ ಸ್ವಾತಂತ್ರ್ಯ ಹಾಗೂ ಒಟ್ಟು ಸಂಪಾದನೆಯ ಹಣದ ವಿನಿಯೋಗದ ಕುರಿತು ಅಧ್ಯಯನ ನಡೆಸಲಾಗಿದೆ. ಈ ಎಲ್ಲಾ ವ್ಯತ್ಯಯಗಳನ್ನು ವಿಶ್ಲೇಷಿಸಿ ಈ ಅಧ್ಯಾಯದಲ್ಲಿ ಇವುಗಳನ್ನು ವೈಜ್ಞಾನಿಕವಾಗಿ ವಿವರಿಸಲಾಗಿದೆ.

## ಕೋಷ್ಟಕ ಸಂಖ್ಯೆ 4.1

## ಒಟ್ಟು ವಾರ್ಷಿಕ ಆದಾಯದ ಕುರಿತಾದ ವಿವರಗಳು

| ಕ್ರ.ಸಂ | ಆದಾಯ | ಒಟ್ಟು | ಶೇಕಡವಾರು | ಎಕ್ಸ್ | ಎಫ್.ಎಕ್ಸ್ |
|---|---|---|---|---|---|
| 1 | 10,000 – 30,000 | 08 | 2.67 | 20,000 | 16,0000 |
| 2 | 30,000–50,000 | 36 | 12.00 | 40,000 | 1,44,0000 |
| 3 | 50,000–70,000 | 123 | 41.00 | 60,000 | 73,80,000 |
| 4 | 70,000–ಕ್ಕೂ ಅಧಿಕ | 133 | 44.33 | 80,000 | 10,640,000 |
| ಒಟ್ಟು | | 300 | 100 | | 1,96,20,000 |

ಒಟ್ಟು 300 ಮಹಿಳೆಯರ ಕುಟುಂಬಗಳಲ್ಲಿ (100%) ಎಂಟು ಮಹಿಳೆಯರ (2.67ಶೇ) ಕುಟುಂಬದಲ್ಲಿ ವಾರ್ಷಿಕ ಆದಾಯ ರೂ 10,000– 30,000 ಹಾಗೂ 36 (12%) ಕುಟುಂಬಗಳಲ್ಲಿ ರೂ 30,000 – 50,000 ಹಾಗೂ 123 (41%) ಕುಟುಂಬಗಳಲ್ಲಿ ಒಟ್ಟು ಆದಾಯ ರೂ 50,000 ರಿಂದ 70,000 ಮತ್ತು 133 (44.33ಶೇ) ಕುಟುಂಬಗಳಲ್ಲಿ 70,000 ಕ್ಕಿಂತ ಹೆಚ್ಚು ವಾರ್ಷಿಕ ಆದಾಯವೆಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಹಾಗೂ ಒಟ್ಟು ಬುಡಕಟ್ಟು ಮಹಿಳೆಯರ ಕುಟುಂಬದ ಸರಾಸರಿ ವಾರ್ಷಿಕ ಆದಾಯ ರೂ 65,400 ಆಗಿರುವುದು ಈ ಅಧ್ಯಯನದಿಂದ ಗಮನಿಸಬಹುದಾಗಿದೆ.

ಕ್ಷೇತ್ರ ಭೇಟಿಯ ಆಧಾರದಿಂದ ವಿಶ್ಲೇಷಿಸುವುದಾದರೆ ಬಹುತೇಕ ಬುಡಕಟ್ಟು ಕುಟುಂಬಗಳಲ್ಲಿ ಪುರುಷರು ಕೂಲಿ ಕೆಲಸವನ್ನು ಅವಲಂಬಿಸಿದ್ದಾರೆ. ಶಿಕ್ಷಣದ ಕೊರತೆ ಮತ್ತು ಮಾರ್ಗದರ್ಶನದ ಕೊರತೆಯಿಂದಾಗಿ ಬುಡಕಟ್ಟು ಸಮುದಾಯದಲ್ಲಿ ಪುರುಷರಿಗೆ ಕೂಲಿ ವೃತ್ತಿಯನ್ನು ಬಿಟ್ಟರೆ ಬೇರೆ ವೃತ್ತಿಯ ಅವಕಾಶಗಳಿಲ್ಲ. ಅಲ್ಪಸಂಖ್ಯೆಯ ಬುಡಕಟ್ಟು ಪುರುಷರು ಆಟೋ ಚಾಲಕರಾಗಿ, ಸ್ವಚ್ಛತೆಯ ಕೆಲಸಗಳಲ್ಲಿ ಹಾಗೂ ಪುಟ್ಟ ವ್ಯಾಪಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಒಟ್ಟು 300 ಕುಟುಂಬಗಳಲ್ಲಿ 32(10.66%) ಕುಟುಂಬಗಳಲ್ಲಿ ಜೀವನ ನಿರ್ವಹಣೆಗಾಗಿ ತಮ್ಮದೇ ಭೂಮಿಯಿರುವುದರಿಂದ ಕೃಷಿಯನ್ನು ಅವಲಂಬಿಸಿದ್ದು ಇದರಲ್ಲಿ ಅಕ್ಕಿ, ತೆಂಗು, ಅಡಿಕೆ, ಮಲ್ಲಿಗೆ, ತರಕಾರಿಯನ್ನು ಬೆಳೆಯುತ್ತಿದ್ದಾರೆ.

ಒಂದು ಸಮುದಾಯದ ಆರ್ಥಿಕ ಸ್ಥಿತಿಯನ್ನು ಅಳೆಯಲು, ಅಲ್ಲಿನ ವೃತ್ತಿ ಕೌಶಲ್ಯಗಳು ಬಹಳ ಪ್ರಮುಖವಾಗಿರುತ್ತವೆ. ಹಿಂದಿನ ದಿನಗಳಲ್ಲಿ ಕಾಡು-ಮೇಡುಗಳಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಕಾಡಿನ ಉತ್ಪನ್ನಗಳನ್ನು ಉಪಯೋಗಿಸಿ ಕಾಡುಪ್ರಾಣಿಗಳನ್ನು ಬೇಟೆಯಾಡಿ, ಅನುಭೋಗಿಸಿ ಬದುಕಿದ ಈ ಸಮುದಾಯಗಳು ಕಾಡಿನ ನಾಶದಿಂದಾಗಿ ಜಿಲ್ಲೆಯ ಅನೇಕ ಇತರ ಸಮುದಾಯಗಳ ತೋಟ, ಗದ್ದೆಗಳಲ್ಲಿ ಜೀವನಕ್ಕಾಗಿ ಕೂಲಿಯನ್ನು ಆರಂಭಿಸಿದರು.

ಕೆ. ಎಂ. ಮೈತ್ರಿ ಅವರು ಬುಡಕಟ್ಟು ಕುಲಕಸುಬಿನ ಕುರಿತಾದ ತನ್ನ ಅಧ್ಯಯನದಲ್ಲಿ ಹೀಗೆ ಪ್ರತಿಕ್ರಯಿಸಿದ್ದಾರೆ. "ವಿಶೇಷವಾಗಿ ಮರಾಠಿ ನಾಯ್ಕರು ಬೇಟೆಗಾರರಾಗಿದ್ದು ದಕ್ಷಿಣಕನ್ನಡ ಜಿಲ್ಲೆಯ ಗಿರಿಕಂದರಗಳಲ್ಲಿ ಕುಮರಿ ಬೇಸಾಯ ಮಾಡುತ್ತಿದ್ದರು. ಹಾಗಾಗಿ ಕೃಷಿ ಇವರ ಕಸುಬಾಯಿತು. ಇತ್ತೀಚೆಗೆ ಬಂಟರ, ಜೈನರ, ಗೌಡರ ಭೂಮಿಗಳನ್ನು ಗೇಣಿರೂಪದಲ್ಲಿ ಪಡೆದು ಕೃಷಿ ಮಾಡುತ್ತಿದ್ದು ಕಷ್ಟ ಸಹಿಷ್ಣುಗಳು, ಶ್ರಮಜೀವಿಗಳು ಆಗಿದ್ದು, ಸರಕಾರದ ಸಹಾಯ ಪಡೆದು ಸದುಪಯೋಗಪಡಿಸಿಕೊಂಡು ಜಿಲ್ಲೆಯ ಇತರ ಗಿರಿಜನ ವರ್ಗಗಳಿಗಿಂತ ಮುಂದಿದ್ದಾರೆ. (2002: ಪು.ಸ.180)

ಕುಡುಬಿ ಜನಾಂಗವೂ ಮೂಲತಃ ಕಾಡಿನಲ್ಲಿಯೇ ವಾಸಿಸುತ್ತಿದ್ದರಿಂದ ಅಡವಿ ಉತ್ಪನ್ನಗಳಿಂದಲೇ ಹಿಂದೆ ಜೀವನ ಸಾಗಿಸುತ್ತಿದ್ದರು. ಇದರೊಂದಿಗೆ ಬೇಟೆ ಮತ್ತು ಮೀನು ಹಿಡಿಯುವುದು ಇವರ ಇತರ ಉದ್ಯೋಗವಾಗಿತ್ತು. ಆದರೆ ಹೊಸ ಅರಣ್ಯ ನೀತಿ ಹಾಗೂ ಕಾಡುಗಳ ನಾಶದಿಂದಾಗಿ ಕಾಡಿನಿಂದ ಹೊರ ಬಂದ ಕುಡುಬಿಯರು ಪಕ್ಕದ ಬೆಟ್ಟ ಗುಡ್ಡ

ಪ್ರದೇಶಗಳಲ್ಲಿ ವಾಸಿಸುತ್ತ ನಿಧಾನಕ್ಕೆ ಕೃಷಿ ಕೂಲಿಯತ್ತ ಮೊರೆ ಹೋದರು ಎಂದು ಗಮನಿಸಬಹುದು.

ಮಲೆಕುಡಿಯ ಸಮುದಾಯವು ಹಿಂದೆ ಕಾಡು ಬೆಟ್ಟಗಳಲ್ಲಿ ಬಂಡೆಕಲ್ಲುಗಳ ನಡುವೆ ವಾಸಿಸುತ್ತಿದ್ದು ಬೇಟೆ ಹಾಗೂ ಆಹಾರ ಸಂಗ್ರಹಣೆಯಲ್ಲಿ ನಿರತರಾಗಿದ್ದ ಈ ಜನಾಂಗ ನಂತರ ಕೃಷಿ ಮತ್ತು ಕೃಷಿ ಕೂಲಿಯನ್ನು ಅವಲಂಬಿಸಿ ಕಾಡು ಉತ್ಪನ್ನಗಳ ಮಾರಾಟದಿಂದ ಜೀವನ ಸಾಗಿಸುತ್ತಾ, ಅರಣ್ಯದ ಬೀಳಲುಗಳಿಂದ ಬುಟ್ಟಿ, ಮಕ್ಕರಿ ಇತ್ಯಾದಿಗಳನ್ನು ತಯಾರಿಸಿ ಮಾರುತ್ತಿದ್ದುದೂ ಇದೆ. ಆದರೆ ಈಗ ಕಚ್ಚಾ ಸಾಮಾಗ್ರಿಗಳ ಕೊರತೆಯಿಂದ ಈ ಕಸುಬನ್ನು ನಿಲ್ಲಿಸಿದ್ದು ಇತರ ಬುಡಕಟ್ಟುಗಳಂತೆ ಇವರಲ್ಲಿ ಕೂಲಿಯೇ ಮುಖ್ಯ ಉದ್ಯೋಗವಾಗಿದೆ.

ಕೊರಗರೂ ಹಿಂದೆ ಅಡವಿವಾಸಿಗಳೇ ಆಗಿದ್ದು ಕಾಡು ಉತ್ಪನ್ನಗಳಿಂದ ಚಾಪೆ, ಹಗ್ಗ, ಬುಟ್ಟಿ ತಯಾರಿಸಿ ಅವುಗಳನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಭೂಮಾಲೀಕರು ಇವರನ್ನು ಜೀತಕ್ಕೆ ಬಳಸಿಕೊಂಡ ಉದಾಹರಣೆಗಳೂ ಇವೆ. ಅರಣ್ಯ ನೀತಿಯಿಂದಾಗಿ ಪಾರಂಪರಿಕ ಕುಲಕಸುಬಿನಿಂದ ದೂರ ಸರಿದ ಕೊರಗರು ಇಂದು ತಮ್ಮ ಜೀವನ ನಿರ್ವಹಣೆಗಾಗಿ ಕೂಲಿ ಕೆಲಸವನ್ನು ಅವಲಂಬಿಸಿದ್ದಾರೆ. ಉಳಿದ ಮೂರು ಬುಡಕಟ್ಟುಗಳಿಗಿಂತ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದ ಈ ಸಮುದಾಯಕ್ಕೆ ತಾವು ಅಸ್ಪೃಶ್ಯರೆನ್ನುವ ಕೀಳರಿಮೆಯೂ ಇದೆ.

ಕುಡುಬಿ, ಮರಾಠಿ ನಾಯ್ಕ, ಮಲೆಕುಡಿಯ ಮತ್ತು ಕೊರಗ ಈ ನಾಲ್ಕು ಬುಡಕಟ್ಟು ಸಮುದಾಯಗಳ ಪರಂಪರೆಯಿಂದ ಬಂದಿರುವ ಉದ್ಯೋಗಗಳಾದ ಬೇಟೆ, ಮೀನು ಹಿಡಿಯುವುದು, ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದು, ಅರಣ್ಯದ ಬೀಳಲುಗಳಿಂದ ತಯಾರಿಸುವ ಬುಟ್ಟಿ, ಮಕ್ಕರಿ, ಹಾಗೂ ಮೊರಗಳು ಆಧುನೀಕರಣದಿಂದ ಇಂದು ಮರೆಯಾಗುತ್ತಿರುವುದನ್ನು ಗಮನಿಸಬಹುದು.

ಕಾಡಿನಲ್ಲಿದ್ದು ಸ್ವಾವಲಂಬಿ ಜೀವನದ ಮೌಲ್ಯವನ್ನು ಪಸರಿಸಿ ಮಾದರಿಯಾಗಿದ್ದ ಈ ಜನಾಂಗಗಳು ಇಂದು ಜೀವನ ನಿರ್ವಹಣೆಗಾಗಿ ಹೆಚ್ಚೆಚ್ಚು ಪರಾವಲಂಬಿಯಾಗಿರುವುದನ್ನು ಕಾಣಬಹುದು.

## ಕೋಷ್ಟಕ ಸಂಖ್ಯೆ 4.2

## ಸ್ವಂತ ಭೂಮಿ ಹೊಂದಿರುವ ಬುಡಕಟ್ಟು ಮಹಿಳೆಯರ ವಿವರಗಳು

| ಕ್ರ.ಸಂ | ಒಟ್ಟು ಇರುವ ಭೂಮಿ | ಒಟ್ಟು | ಶೇಕಡವಾರು |
|---|---|---|---|
| 1 | 0 – 5 ಸೆಂಟ್ಸ | 26 | 8,67 |
| 2 | 5 – 10 ಸೆಂಟ್ಸ | 02 | 0.66 |
| 3 | 10 – 25 ಸೆಂಟ್ಸ | 10 | 3.33 |
| 4 | 25 ರಿಂದ 50 ಸೆಂಟ್ಸ | 08 | 2.67 |
| 5 | 50 ರಿಂದ 1 ಎಕ್ರೆ | 08 | 2.67 |
| 6 | 1 ರಿಂದ 4 ಎಕ್ರೆ | 05 | 1.67 |
| 7 | 4 ರಿಂದ ಮೇಲೆ | 01 | 0.33 |
| 8 | ಏನೂ ಇಲ್ಲ | 240 | 80.00 |
| | | 300 | 100 |

ಕೋಷ್ಟಕ ಸಂಖ್ಯೆ 4.2 ರ ಪ್ರಕಾರ ಒಟ್ಟು 300 (100%) ಮಹಿಳೆಯರಲ್ಲಿ 60(20%) ಮಹಿಳೆಯರು ಸ್ವಂತ ಭೂಮಿ ಹೊಂದಿದ್ದಾರೆ. ಇದರಲ್ಲಿ 26(8.67%) ಮಹಿಳೆಯರಲ್ಲಿ 0 – 5 ಸೆಂಟ್ಸ್‌ನಷ್ಟು ಭೂಮಿ ಸ್ವಂತಿಕೆಯಲ್ಲಿದೆ. ಎರಡು (0.66%) ಮಹಿಳೆಯರಲ್ಲಿ ಐದರಿಂದ 10 ಸೆಂಟ್ಸ್, 10 (3.33%) ಮಹಿಳೆಯರಲ್ಲಿ 10 ರಿಂದ 25 ಸೆಂಟ್ಸ್, ಎಂಟು (2.67%) ಮಹಿಳೆಯರಲ್ಲಿ 25 ರಿಂದ 50 ಸೆಂಟ್ಸ್, ಎಂಟು (2.67%) ಮಹಿಳೆಯರಲ್ಲಿ 50 ರಿಂದ 1 ಎಕ್ರೆ, ಐದು (1.67%) ಮಹಿಳೆಯರಲ್ಲಿ ಒಂದರಿಂದ ನಾಲ್ಕು ಎಕ್ರೆ, ಒಂದು (0.33%) ಮಹಿಳೆಯಲ್ಲಿ ನಾಲ್ಕು ಎಕ್ರೆಯಿಂದ ಮೇಲೆ, ಹಾಗೂ 40 (80%) ಮಹಿಳೆಯರು ತಮ್ಮ ಸ್ವಂತಿಕೆಯಲ್ಲಿ ಯಾವುದೇ ಭೂಮಿ ಇಲ್ಲವೆಂದು ಪ್ರತಿಕ್ರಯಿಸಿದ್ದಾರೆ.

ಕೋಷ್ಟಕದ ಆಧಾರದಿಂದ ಗಮನಿಸಬಹುದಾದ ಅಂಶವೆಂದರೆ ಅತಿ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರ ಸ್ವಂತಿಕೆಯಲ್ಲಿ ಭೂಮಿ ಇಲ್ಲದಿರುವುದು ದತ್ತಾಂಶದಿಂದ ಕಂಡುಬಂದಿದೆ. ಹಾಗೂ 28 (9.33) ಮಹಿಳೆಯರ ಹೆಸರಲ್ಲಿ ಐದರಿಂದ 10 ಸೆಂಟ್ಸ್‌ನಷ್ಟು ಜಾಗವಿದ್ದು, ಇದು ವಾಸದ ಮನೆಯನ್ನು ಸೇರಿಸಿ, ಜಾಗವನ್ನು ಸೂಚಿಸಿರುವುದರಿಂದ ಈ ಜಾಗದಲ್ಲಿ ಯಾವುದೇ ರೀತಿಯ ಕೃಷಿಯನ್ನು ಮಾಡಲು ಸಾಧ್ಯವಾಗುವುದಿಲ್ಲ ಎನ್ನುವುದನ್ನು ಕ್ಷೇತ್ರ ಕಾರ್ಯದಲ್ಲಿ ಗಮನಿಸಲಾಗಿದೆ. ಒಟ್ಟಿನಲ್ಲಿ ಕೇವಲ 60 (20%) ಮಹಿಳೆಯರ ಹೆಸರಿನಲ್ಲಿ

ಜಾಗವಿದ್ದು ಅದು ಅವರಿಗೆ, ಯಾವ ರೀತಿ ಲಭ್ಯವಾಗಿದೆಯೆಂದು ಕೋಷ್ಟಕ ಸಂಖ್ಯೆ 4.3 ರಲ್ಲಿ ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 4.3

## ಬುಡಕಟ್ಟು ಮಹಿಳೆಯರು ಸ್ವಂತ ಭೂಮಿಯನ್ನು ಹೇಗೆ ಮತ್ತು ಯಾವ ರೀತಿಯಿಂದ ಪಡೆದಿದ್ದರು ಎಂಬುದರ ಕುರಿತಾದ ವಿವರಗಳು

| ಕ್ರ.ಸಂ | ಭೂಮಿ ದೊರೆತ ರೀತಿ | ಒಟ್ಟು | ಶೇಕಡವಾರು |
|---|---|---|---|
| 1 | ಪಿತ್ರಾರ್ಜಿತ | 19 | 6.34 |
| 2 | ಖರೀದಿಸಿದ್ದು | 09 | 3.00 |
| 3 | ಭೂ ಸುಧಾರಣೆಯಿಂದ | 05 | 1.67 |
| 4 | ಸರಕಾರದಿಂದ | 17 | 5.67 |
| 5 | ಉಡುಗೊರೆಯಾಗಿ ಬಂದಿದ್ದು | 02 | 0.66 |
| 6 | ಗಂಡನಿಂದ ಬಂದಿರುವುದು | 08 | 2.66 |
| 7 | ಅನ್ವಯಿಸುವುದಿಲ್ಲ | 240 | 80.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.3 ರ ಪ್ರಕಾರ 60 ರಲ್ಲಿ 19(6.34%) ಮಹಿಳೆಯರು ಪಿತ್ರಾರ್ಜಿತ ಆಸ್ತಿಯಿಂದ ಜಾಗ ಪಡಕೊಂಡಿದ್ದು ಒಂಭತ್ತು (3%) ಮಹಿಳೆಯರು ಜಾಗ ಖರೀದಿಸಿದ್ದಾಗಿ ಪ್ರತಿಕ್ರಿಯಿಸಿದ್ದು ಭೂ ಸುಧಾರಣೆ ಕಾಯಿದೆಯಿಂದ ಐದು (1.67%) ಮಹಿಳೆಯರಿಗೆ ಜಾಗ ಲಭ್ಯವಾಗಿದ್ದು, 17(5.67%) ಮಹಿಳೆಯರಿಗೆ ಸರಕಾರದಿಂದ, ಇಬ್ಬರಿಗೆ (0.66%) ಉಡುಗೊರೆಯಾಗಿ ಜಾಗ ಸಿಕ್ಕಿದ್ದು ಹಾಗೂ ಎಂಟು (2.66%) ಮಂದಿ ಮಹಿಳೆಯರಿಗೆ ಗಂಡನಿಂದ (ಮರಣಾನಂತರ) ತಮ್ಮ ಹೆಸರಿಗೆ ಜಾಗ ವರ್ಗಾವಣೆಯಾಗಿರುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕೋಷ್ಟಕದ ಅಂಕಿ ಅಂಶಗಳ ಪ್ರಕಾರ ಅತ್ಯಂತ ಹೆಚ್ಚಿನ ಮಹಿಳೆಯರು ಎಂದರೆ 19 ಮಂದಿ ತಮ್ಮ (6.34%) ತಂದೆಯ ಆಸ್ತಿಯಲ್ಲಿ ಜಾಗ ಸಿಕ್ಕಿರುವುದು ಗಮನಿಸಬಹುದಾಗಿದೆ. ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಹಕ್ಕಿರುವ ಅಂಶವು ಇಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು.

ವಿ.ಕೆ. ಶ್ರೀವಾತ್ಸವ ಅವರು ಬುಡಕಟ್ಟು ಅಭಿವೃದ್ಧಿಯ ಕುರಿತಾದ ತಮ್ಮ ಅಧ್ಯಯನದಲ್ಲಿ "ತನ್ನ ಮನೆಯಲ್ಲಿ ಪುರುಷರಿಗಿಂತ ಹೆಚ್ಚಾಗಿ ಮನೆಯ ಹಾಗೂ ಹೊರಗಿನ

ಕೆಲಸದಲ್ಲಿ ತೊಡಗಿಸಿಕೊಂಡಿರುವ ಬುಡಕಟ್ಟು ಮಹಿಳೆಗೆ ತನ್ನ ಗಂಡನ ಅಥವಾ ತನ್ನ ತಂದೆಯ ಆಸ್ತಿಯಲ್ಲಿ ಹಕ್ಕಿಲ್ಲದೇ ಇರುವುದರಿಂದ ಬುಡಕಟ್ಟು ಮಹಿಳೆಯರು ತಾರತಮ್ಯಕ್ಕೆ ಒಳಗಾಗಿದ್ದಾರೆ ಎಂದಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಅವರು ಬಿಲ್ಸ್, ಒರಾನ್ ಮತ್ತು ಗೊಂಡರ ಬುಡಕಟ್ಟು ಮಹಿಳೆಯರನ್ನು ಹೆಸರಿಸಿದ್ದಾರೆ." (2006: ಪು.ಸಂ 145 ಮತ್ತು 146 )

ಸರಕಾರದಿಂದ ಭೂಮಿ ಪಡೆದಿರುವ ಮಹಿಳೆಯರಲ್ಲಿ ಕೊರಗ ಮಹಿಳೆಯರು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಒಟ್ಟು 16(5.33%) ಮಹಿಳೆಯರಿಗೆ ಈ ಸೌಲಭ್ಯ ದೊರೆತಿದೆ. ಕೊರಗ ಕುಟುಂಬಗಳಿಗೆ ಮನೆಯನ್ನು ಹೊಂದುವ ಸವಲತ್ತು ಇರುವುದರಿಂದ ಸರಕಾರದಿಂದ ಮಹಿಳೆಯರ ಹೆಸರಿನಲ್ಲಿ ಮನೆಗಳು ಮಂಜೂರಾಗಿರುವುದು ಕಂಡುಬಂದಿದೆ. ಹೆಚ್ಚಿನ ಎಲ್ಲಾ ಭೂಮಿಯಲ್ಲೂ ಯಾವುದೇ ರೀತಿಯ ಕೃಷಿಯ ಕೆಲಸ ನಡೆಯದೇ ಹಾಗೆಯೇ ಬಿಟ್ಟು ಬಿಡಲಾಗಿದೆ. ನೀರಿನ ಕೊರತೆಯಿಂದಾಗಿ ಯಾವುದೇ ರೀತಿಯ ಕೃಷಿ ಮಾಡಲು ಸಾಧ್ಯವಾಗಿಲ್ಲ ವೆಂದು ಬುಡಕಟ್ಟು ಮಹಿಳೆಯರು ಪ್ರತಿಕ್ರಯಿಸುತ್ತಾರೆ.

## ಕೋಷ್ಟಕ ಸಂಖ್ಯೆ 4.4

## ಬುಡಕಟ್ಟು ಕುಟುಂಬಗಳು ಅವಲಂಬಿಸಿರುವ ನೀರಾವರಿ ವ್ಯವಸ್ಥೆ

| ಕ್ರ.ಸಂ | ನೀರಾವರಿ ವ್ಯವಸ್ಥೆ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವಂತ ಬಾವಿ | 168 | 56.0 |
| 2 | ಕೆರೆ | 17 | 5.66 |
| 3 | ಕೊಳವೆ ಬಾವಿ | 32 | 10.67 |
| 4 | ಮಳೆ ನೀರು | - | - |
| 5 | ಸರ್ಕಾರಿ ಬಾವಿ/ನಲ್ಲಿ | 48 | 16.00 |
| 6 | ಪಕ್ಕದ ಮನೆ ಬಾವಿ | 35 | 11.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.4 ರಲ್ಲಿ ಒಟ್ಟು 300 ರಲ್ಲಿ 168(56%) ಕುಟುಂಬಗಳು ಮನೆಯಲ್ಲಿ ನೀರಿಗಾಗಿ ಸ್ವಂತ ಬಾವಿಯನ್ನು, 17(5.66%) ಮಹಿಳೆಯರು ಕೆರೆಯನ್ನು ಅವಲಂಬಿಸಿರುವುದೆಂದು ತಿಳಿಸಿದ್ದಾರೆ. 32(10.67%) ಮಹಿಳೆಯರು ಸರ್ಕಾರಿ

ಬಾವಿ/ನಲ್ಲಿಯನ್ನು ಹಾಗೂ 35(11.67%) ಮಹಿಳೆಯರು ನೀರಿಗಾಗಿ ಪಕ್ಕದ ಮನೆಯ ಬಾವಿಯನ್ನು ಅವಲಂಬಿಸಿದ್ದಾರೆ.

ಅತಿ ಹೆಚ್ಚು ಸಂಖ್ಯೆಯ ಬುಡಕಟ್ಟು ಕುಟುಂಬಗಳಲ್ಲಿ, ನೀರಿಗಾಗಿ ಸ್ವಂತ ಬಾವಿ ಇದೆ. ಆದರೂ ಹೆಚ್ಚಿನ ಬುಡಕಟ್ಟು ಮಹಿಳೆಯರು ಬೇಸಿಗೆಯಲ್ಲಿ ನೀರಿನ ಸಮಸ್ಯೆ ಇದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗೂ ಒಟ್ಟು 35 (11.67%) ಬುಡಕಟ್ಟು ಕುಟುಂಬಗಳು ನೀರಿಗಾಗಿ ನೆರೆಹೊರೆಯ ಮನೆಯ ಬಾವಿಯನ್ನು ಅವಲಂಬಿಸಿವೆ. ಪ್ರಸ್ತುತ ಅಧ್ಯಯನದಲ್ಲಿ ಅರ್ಧಕ್ಕಿಂತ ಸ್ವಲ್ಪ ಪ್ರಮಾಣದ ಮಾಹಿತಿದಾರರು ಅಂದರೆ ಒಟ್ಟು 132(44%) ಮಹಿಳೆಯರ ಕುಟುಂಬಗಳಲ್ಲಿ ಸ್ವಂತ ನೀರಿನ ಸೌಲಭ್ಯದ ಕೊರತೆ ಇದ್ದು, ಆ ಕುಟುಂಬಗಳಲ್ಲಿ ನೀರಿಗಾಗಿ ಇತರ ಮನೆಗಳನ್ನು ಅವಲಂಬಿಸಬೇಕಾಗಿರುವ ಸ್ಥಿತಿ ಇರುವುದನ್ನು ಅವಲೋಕಿಸಬಹುದು.

## ಕೋಷ್ಟಕ ಸಂಖ್ಯೆ 4.5

## ಕೃಷಿಕ ಕುಟುಂಬಗಳು ಬೆಳೆಸುವ ಬೆಳೆಗಳ ವಿವರಗಳು

| ಕ್ರ.ಸಂ | ಬೆಳೆಗಳು | ಒಟ್ಟು | ಶೇಕಡವಾರು |
|---|---|---|---|
| 1 | ತೆಂಗು ಮತ್ತು ತರಕಾರಿ | 26 | 8.67 |
| 2 | ಅಡಿಕೆ ತರಕಾರಿ | 20 | 6.66 |
| 3 | ಭತ್ತ ಮತ್ತು ತರಕಾರಿ | 10 | 3.34 |
| 4 | ಮಲ್ಲಿಗೆ ಮತ್ತು ಇತರ | 07 | 2.33 |
| 5 | ಅನ್ವಯಿಸುವುದಿಲ್ಲ | 237 | 79.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.5 ರಲ್ಲಿ ಬುಡಕಟ್ಟು ಮಹಿಳೆಯರು ತಮ್ಮ ಮನೆಯಲ್ಲಿ ಬೆಳೆಯುವ ಬೆಳೆಗಳ ಕುರಿತು ನೀಡಿದ ಮಾಹಿತಿಯನ್ನು ಕಾಣಬಹುದು. ಒಟ್ಟು 300(100%) ಮಹಿಳೆಯರಲ್ಲಿ 26(8.67%) ಕುಟುಂಬಗಳಲ್ಲಿ ತೆಂಗು ಮತ್ತು ತರಕಾರಿ ಬೆಳೆಯುತ್ತಾರೆ. 20(6.66%) ಕುಟುಂಬಗಳಲ್ಲಿ ಅಡಿಕೆ ಮತ್ತು ತರಕಾರಿ ಬೆಳೆಯುತ್ತಿದ್ದು, 10(3.34%) ಕುಟುಂಬಗಳಲ್ಲಿ ಭತ್ತ ಮತ್ತು ತರಕಾರಿ ಹಾಗೂ ಏಳು (2.33%) ಕುಟುಂಬಗಳಲ್ಲಿ ಮಲ್ಲಿಗೆ ಮತ್ತು ಇತರ ಅಂದರೆ ಬಾಳೆ, ಪಪ್ಪಾಯಿ, ಏಲಕ್ಕಿ, ಕರಿಮೆಣಸು ಇತ್ಯಾದಿಗಳನ್ನು ಬೆಳೆಯುತ್ತಾರೆ.

ಸ್ವಾತಂತ್ರ್ಯಾನಂತರ ಸರಕಾರದ ಯೋಜನೆಯಿಂದ ಅನೇಕ ಕುಟುಂಬಗಳಿಗೆ ದರ್ಖಾಸ್ತು ಭೂಮಿ ಒಂದೆರಡು ಎಕ್ರೆ ಜಮೀನು ದೊರೆತಿದ್ದು, ರಾಜ್ಯ ಸರಕಾರದ ಅಕ್ರಮ ಜಮೀನು ಸಕ್ರಮಗೊಳಿಸುವಲ್ಲಿ ಕಾಡಿನ ಅಂಚಿನಲ್ಲಿದ್ದ ಬುಡಕಟ್ಟುಗಳಿಗೆ ವರದಾನವಾಯಿತು. ಕಾಡಿನ ನಾಶ, ಅರಣ್ಯ ನೀತಿಯಿಂದ ಅತಂತ್ರವಾಗಿದ್ದ ಬುಡಕಟ್ಟು ಸಮುದಾಯದ ಜೀವನಕ್ಕೆ ಈ ಮೂಲಕ ದಾರಿಯಾಗಿದ್ದು ಸಣ್ಣ ಪ್ರಮಾಣದಲ್ಲಿ 63(21.00%) ಕುಟುಂಬಗಳು ಕೃಷಿಯನ್ನು ನಂಬಿ ಬದುಕುವಂತಾಯಿತು.

ವಾಣಿಜ್ಯ ಬೆಳೆಗಳ ಬೆಳೆಯಲ್ಲಿ ಅಡಿಕೆಗೇ ಪ್ರಥಮ ಸ್ಥಾನವಿದ್ದು ಇದರೊಂದಿಗೆ ಭತ್ತ, ಕಾಳುಮೆಣಸು, ಏಲಕ್ಕಿ, ಬಾಳೆ, ಕೊಕ್ಕೋ ಇತ್ಯಾದಿಗಳನ್ನು ಬೆಳೆಯುತ್ತಿದ್ದಾರೆ. ನೀರಿನಾಶ್ರಯವಿಲ್ಲದೇ ಇರುವಲ್ಲಿ ಗೇರು ಸಸಿಗಳನ್ನು ನೆಟ್ಟಿದ್ದಾರೆ.

ಬೆಳ್ತಂಗಡಿಯ ಮಲೆಕುಡಿಯರು ಕೃಷಿಯಲ್ಲಿ ಮುಂದುವರಿದವರಾಗಿದ್ದು ಕೊರಗ ಬುಡಕಟ್ಟುಗಳಲ್ಲಿ ಕೃಷಿಯನ್ನು ನಂಬಿ ಜೀವನ ಮಾಡುವವರು ಯಾರೂ ಇಲ್ಲ ಎಂದು ಕ್ಷೇತ್ರ ಅಧ್ಯಯನದ ಆಧಾರದಿಂದ ಗಮನಿಸಲಾಗಿದೆ.

ಕುಡುಬಿಯರ ಬೇಸಾಯದ ಕುರಿತು ಎ.ವಿ.ನಾವಡ ಅವರು ತಮ್ಮ ತುಳುಪೊಲಿ ಎಂಬ ಗ್ರಂಥದಲ್ಲಿ ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಭತ್ತದ ಬೇಸಾಯ ಕುಡುಬಿಯರ ಪ್ರಧಾನ ವೃತ್ತಿ. 1974ರ ಭೂಮಸೂದೆ ಜಾರಿಗೆ ಬರುವ ಮೊದಲು ಕುಡುಬಿಗಳು ಇನ್ನೊಬ್ಬರ ಗದ್ದೆಗಳಲ್ಲಿ ಗೇಣಿದಾರರಾಗಿ, ಕೃಷಿಕಾರ್ಮಿಕರಾಗಿ ದುಡಿಯುತ್ತಿದ್ದು ಇಂದು ಬಹುಮಂದಿ ಕುಡುಬಿಯರಿಗೆ ಸ್ವಂತ ಜಮೀನಿದ್ದು, ಭತ್ತದ ಗದ್ದೆಯಲ್ಲಿ ಮೊದಲ ಬೆಳೆ (ಕಾರ್ತಿ) ಹಾಗೂ ಮೂರನೇ ಬೆಳೆ (ಕೊಳಕೆ) ಬೆಳೆಯುತ್ತಾರೆ. ಎರಡನೆ ಬೆಳೆ ಸುಗ್ಗಿಯ ಬದಲು ಉದ್ದು, ಹೆಸರು, ಬೆಳೆಯುವುದು ಇತ್ತೀಚೆಗೆ ವಾಣಿಜ್ಯ ಬೆಳೆಯಾಗಿ ಮೆಣಸು, ಅಲಸಂಡೆ, ಹಾಗಲಕಾಯಿ ಕಬ್ಬು ಬೆಳೆಯುತ್ತಾರೆ." (2013: ಪು.ಸಂ 321)

ಒಟ್ಟಿನಲ್ಲಿ ಬುಡಕಟ್ಟಿನ ಭದ್ರ ನೆಲೆಗೆ ಕೃಷಿ ಕಾರಣವಾಗಿದ್ದು ಆರಂಭದಲ್ಲಿ ಕುಮ್ರಿ ಬೇಸಾಯ ಹಾಗೂ ಸ್ಥಳಾಂತರ ಬೇಸಾಯ ಮಾಡುತ್ತಿದ್ದ ಬುಡಕಟ್ಟು ಸಮುದಾಯ ಅಲ್ಪಪ್ರಮಾಣದಲ್ಲಿಯಾದರು ಇಂದು ಭೂಮಿ ಹಾಗೂ ನೀರಿನ ಆಶ್ರಯವಿರುವಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಹಂತಕ್ಕೆ ಮುಟ್ಟಿರುವುದನ್ನು ಗಮನಿಸಬಹುದು.

## ಕೋಷ್ಟಕ ಸಂಖ್ಯೆ 4.6

## ಸ್ವಉದ್ಯೋಗದಲ್ಲಿ ನಿರ್ಧಾರ ತೆಗೆದುಕೊಳ್ಳುವುದರ ಅಭಿಪ್ರಾಯದ ಕುರಿತ ವಿವರಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವಂತ | 04 | 1.33 |
| 2 | ಗಂಡ | 10 | 3.34 |
| 3 | ಜೊತೆಯಾಗಿ | 10 | 3.34 |
| 4 | ಇತರರು | 02 | 0.66 |
| 5 | ಅನ್ವಯಿಸುವುದಿಲ್ಲ | 274 | 91.33 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.6 ರ ಪ್ರಕಾರ ಒಟ್ಟು 300(100%) ಮಹಿಳೆಯರಲ್ಲಿ ಕೇವಲ 26(8.67%) ರಷ್ಟು ಮಹಿಳೆಯರು ಸ್ವ ಉದ್ಯೋಗವನ್ನು ಮಾಡುತ್ತಿದ್ದು, ನಾಲ್ಕು ಮಂದಿ (1.33%) ಮಹಿಳೆಯರು ಈ ಕುರಿತಾಗಿ ತಾವೇ ನಿರ್ಧಾರ ತೆಗೆದುಕೊಳ್ಳುತ್ತಾರೆ. ಹತ್ತು ಮಂದಿ (3.34%) ಮಹಿಳೆಯರ ಗಂಡಂದಿರು ಸ್ವ ಉದ್ಯೋಗದಲ್ಲಿ ನಿರ್ಧಾರ ತೆಗೆದುಕೊಳ್ಳುತ್ತಿದ್ದು, ಹತ್ತು ಮಂದಿ (3.34%) ಮಹಿಳೆಯರು ಜೊತೆಯಾಗಿ ಗಂಡನೊಂದಿಗೆ ನಿರ್ಧಾರ ತೆಗೆದುಕೊಳ್ಳುತ್ತಿದ್ದು, ಇಬ್ಬರು (0.66%) ಮಹಿಳೆಯರ ಮಕ್ಕಳು ಮತ್ತು ಮನೆಯ ಇತರರು ಸ್ವ ಉದ್ಯೋಗದಲ್ಲಿ ನಿರ್ಧಾರ ತೆಗೆದುಕೊಳ್ಳುತ್ತಾರೆ.

ಸ್ವ ಉದ್ಯೋಗದಲ್ಲೇ ಪೂರ್ತಿಯಾಗಿ ತೊಡಗಿಸಿಕೊಂಡಿರುವ ಮಹಿಳೆಯರು ಕೇವಲ ಏಳು (2.33%) ಮಾತ್ರ. ತಮ್ಮ ಇತರ (ವಿಶೇಷವಾಗಿ ಬೀಡಿ ಕಟ್ಟುವ) ಕೆಲಸದೊಂದಿಗೆ ಸ್ವ ಉದ್ಯೋಗಗಳಾದ ಬುಟ್ಟಿ ತಯಾರಿಕೆ, ಮಲ್ಲಿಗೆ ಕೃಷಿ, ಹೈನುಗಾರಿಕೆ ಮತ್ತು ವ್ಯಾಪಾರಗಳಲ್ಲಿ ಅಲ್ಪ ಪ್ರಮಾಣದ ಬುಡಕಟ್ಟು ಮಹಿಳೆಯರು ತೊಡಗಿಸಿಕೊಂಡಿದ್ದಾರೆ. (26.8%) ಮಲ್ಲಿಗೆ ಕೃಷಿಯನ್ನು ಮತ್ತು ಬುಟ್ಟಿ ತಯಾರಿಕೆಯಲ್ಲಿ ತೊಡಗಿರುವ ಬುಡಕಟ್ಟುಗಳಲ್ಲಿ ಕೊರಗ ಮಹಿಳೆಯರು ಹೆಚ್ಚಿದ್ದು, ವ್ಯಾಪಾರದಲ್ಲಿ ಕುಡುಬಿ ಮಹಿಳೆಯರು ಹೆಚ್ಚಿದ್ದಾರೆ. ಹೈನುಗಾರಿಕೆಯಲ್ಲಿ ಮರಾಠಿ ನಾಯ್ಕ ಮಹಿಳೆಯರು ತೊಡಗಿಸಿಕೊಂಡಿದ್ದು, ಮಲೆಕುಡಿಯರಲ್ಲಿ ಕೇವಲ ಎರಡು ಮಂದಿ ಮಹಿಳೆಯರು(0.66%) ಹೈನಗಾರಿಕೆಯಲ್ಲಿ ಸ್ವ ಉದ್ಯೋಗ ಮಾಡುತ್ತಿದ್ದಾರೆ.

ಬುಡಕಟ್ಟು ಮಹಿಳೆಯರು ಶ್ರಮ ಜೀವಿಗಳಾಗಿರುವುದರಿಂದಲೂ, ಮನೆಯ ಆರ್ಥಿಕ ನಿರ್ವಹಣೆಗೆ ದುಡಿಮೆ ಅನಿವಾರ್ಯವೂ ಆಗಿರುವುದರಿಂದ ಒಂದಲ್ಲ ಒಂದು ಕೆಲಸದಲ್ಲಿ

ತೊಡಗಿಸಿಕೊಂಡಿದ್ದಾರೆ. ಬುಡಕಟ್ಟು ಸಾಮಾಜಿಕ ಬದುಕಿನಲ್ಲಿ ಸ್ತ್ರೀಪುರುಷರು ಸಮಾನರು. ಮುಖ್ಯವಾಹಿನಿಯಲ್ಲಿ ಹೆಣ್ಣು ಭಾರವಾಗಿರುವಂತೆ ಬುಡಕಟ್ಟು ಸಮಾಜದಲ್ಲಿ ಆ ರೀತಿಯ ಋಣಾತ್ಮಕ ಮೌಲ್ಯಗಳಿಲ್ಲ. ಆಕೆ ದುಡಿಯುವ ಹೆಣ್ಣಾಗಿ, ಪುರುಷನಂತೆ ಸಮಾನ ಸ್ಥಾನ ಪಡೆಯುತ್ತಾಳೆ. ಲಿಂಗ ಸಮಾನತೆ ಬುಡಕಟ್ಟು ಸಂಸ್ಕೃತಿಯ ವಿಶೇಷ ಮೌಲ್ಯವಾಗಿದೆ.

ಆದರೆ ಪರಂಪರಾಗತವಾದ ಸ್ವ ಉದ್ಯೋಗಗಳನ್ನೇ ಬುಡಕಟ್ಟುಗಳು ನೆಚ್ಚಿರುವುದರಿಂದ ಆಧುನಿಕ ಸಮಾಜದಲ್ಲಿ ಇರುವ ಇತರ ಅನೇಕ ಲಾಭದಾಯಕ ಸ್ವ ಉದ್ಯೋಗಗಳನ್ನು ಅವಲಂಬಿಸುವಲ್ಲಿ ಬುಡಕಟ್ಟು ಮಹಿಳೆಯರಿಗೆ ಮಾಹಿತಿಯ ಕೊರತೆ ಇದೆ ಎನ್ನುವುದು ಸ್ಪಷ್ಟವಾಗುತ್ತದೆ.

## ಕೋಷ್ಟಕ ಸಂಖ್ಯೆ 4.7

## ಹೆಚ್ಚಿನ ಆದಾಯ ಗಳಿಸುವಲ್ಲಿ ಬುಡಕಟ್ಟು ಮಹಿಳೆಯರ ಯೋಚನೆಗಳು

| ಕ್ರ.ಸಂ | ಯೋಚನೆಗಳು | ಒಟ್ಟು | ಶೇಕಡವಾರು |
|---|---|---|---|
| 1 | ವ್ಯಾಪಾರ | 08 | 2.67 |
| 2 | ಕೃಷಿ | 06 | 2.00 |
| 3 | ಮಲ್ಲಿಗೆ ಕೃಷಿ | 04 | 1.33 |
| 4 | ಸರಕಾರಿ ಉದ್ಯೋಗ | 02 | 0.67 |
| 5 | ಅನ್ವಯಿಸುವುದಿಲ್ಲ | 280 | 93.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.7 ರಲ್ಲಿ ಒಟ್ಟು 300 (100%) ಬುಡಕಟ್ಟು ಮಹಿಳೆಯರಲ್ಲಿ 20(6.67%) ಮಹಿಳೆಯರು ಹೆಚ್ಚಿನ ಆದಾಯ ಗಳಿಸುವಲ್ಲಿ ತಮಗಿರುವ ಯೋಜನೆಗಳನ್ನು ಅಭಿವ್ಯಕ್ತಪಡಿಸಿದ್ದಾರೆ. 08(2.67%) ಮಹಿಳೆಯರು ತಾವು ವ್ಯಾಪಾರವನ್ನು ಪ್ರಾರಂಭಿಸುವ ಯೋಚನೆ ಇದೆ ಎಂದು, ಆರು(2.00%) ಮಹಿಳೆಯರು ಕೃಷಿಯಲ್ಲಿ ತೊಡಗಿಸಿಕೊಳ್ಳುವ ಕುರಿತು ನಾಲ್ಕು (1.33%) ಮಹಿಳೆಯರಿಗೆ ಮಲ್ಲಿಗೆ ಕೃಷಿಯ ಯೋಚನೆ ಹಾಗೂ ಇಬ್ಬರು (0.67%) ಮಹಿಳೆಯರಿಗೆ ಸರಕಾರಿ ಉದ್ಯೋಗದ ಚಿಂತನೆ ಇದೆ ಎಂದು ಪ್ರತಿಕ್ರಯಿಸಿದ್ದಾರೆ.

ಕ್ಷೇತ್ರ ಕಾರ್ಯದ ಅನುಭವದಲ್ಲಿ ಕಂಡುಕೊಂಡಂತೆ ಬುಡಕಟ್ಟು ಮಹಿಳೆಯರಲ್ಲಿ ತಮ್ಮ ಮುಂದಿನ ಒಟ್ಟು ಜೀವನದ ಕುರಿತಾದ ಆಕಾಂಕ್ಷೆಗಳು, ಭವಿಷ್ಯದ ಕುರಿತಾದ

ಯೋಚನೆಯ ಕೊರತೆಯನ್ನು ಗಮನಿಸಲಾಗಿದೆ. ಈ ಕುರಿತಾದ ಮಾತುಕತೆಯಲ್ಲಿ ನೀರಸ ಪ್ರತಿಕ್ರಿಯೆಯನ್ನು ಗಮನಿಸಲಾಗಿದೆ.

ಪ್ರಸ್ತುತ ಜೀವನ ಹಾಗೂ ಮುಂದಿನ ಯೋಚನೆಗಳನ್ನು ಒಂದಕ್ಕೊಂದು ಜೋಡಿಸಿಕೊಳ್ಳುವ ಯೋಚನೆಗಳ ಕೊರತೆಯನ್ನು ಮಹಿಳೆಯರಲ್ಲಿ ಗಮನಿಸಲಾಗಿದೆ. ಇದ್ದುದರಲ್ಲಿ ತೃಪ್ತಿ ಪಡುವ ಮನೋಭಾವವನ್ನು ಬುಡಕಟ್ಟು ಮಹಿಳೆಯರಲ್ಲಿ ಗಮನಿಸಬಹುದು.

ಕೆ. ಕೇಶವನ್ ಪ್ರಸಾದ್ ಅವರ ಸೋಲಿಗರ ಪರಿಸರ ಪ್ರಜ್ಞೆಯ ಕುರಿತಾದ ತಮ್ಮ ಅಧ್ಯಯನದಲ್ಲಿ ಹೀಗೆ ಪ್ರತಿಕ್ರಯಿಸಿದ್ದಾರೆ. "ಬುಡಕಟ್ಟು ಸಮುದಾಯಗಳನ್ನು ಕಾಡುವಾಸಿಗಳು, ಆದಿವಾಸಿ, ಗಿರಿಜನರು, ಮೂಡಜನರು ಎಂಬುದಾಗಿ ಕರೆಯುವುದುಂಟು. ಆದರೆ ಈ ಜನ ನಾಡಿನ ಆಧುನಿಕರಿಗಿಂತಲೂ ಬುದ್ಧಿವಂತರು ಎಂಬುದು ಮೇಲ್ನೋಟಕ್ಕೆ ತಿಳಿಯುವುದಿಲ್ಲ. ವಿಶ್ವದ ಯಾವುದೇ ತತ್ವಜ್ಞಾನಿಗಳಿಗೂ ಇವರು ಕಡಿಮೆ ಇಲ್ಲ. ನೂರಕ್ಕೆ ನೂರರಷ್ಟು ವಾಸ್ತವವಾದಿಗಳು. ಪ್ರಕೃತಿಗೆ ಪೂರಕವಾಗಿ ತಾನು ಅದರ ಮಗು, ಅದು ನನ್ನನ್ನು ಸಾಕಿ ಸಲಹುವ ತಾಯಿ ಎಂಬ ವಾತ್ಸಲ್ಯದಿಂದ ಬದುಕುವರು. ಒಟ್ಟಿಗೆ ಅವರವರ ಜೀವನಕ್ಕೆ ಬೇಕಾದುದನ್ನು ಪಡೆದುಕೊಂಡು ಒಂದು ಅಂತರದಲ್ಲಿ ಬದುಕನ್ನು ಸಾಗಿಸುವುದು ಕಂಡುಬರುತ್ತದೆ. ಇದೊಂದು ಸಮತೂಕದ ಬದುಕು ಎಂದು ಹೇಳಿದರೂ ತಪ್ಪಾಗಲಾರದು". (2008: ಪು.ಸಂ 245)

ದತ್ತಾಂಶಗಳ ಈ ವಿಶ್ಲೇಷಣೆಯಿಂದ ಬುಡಕಟ್ಟು ಸಮುದಾಯಕ್ಕೆ ನಾಗರಿಕ ಸಮುದಾಯದಂತೆ ಇಂದಿಗೆ, ನಾಳೆಗೆ ಮತ್ತು ಮುಂದಿನ ಜನಾಂಗಕ್ಕೆ ಸಂಗ್ರಹಿಸಿಡುವ ಮನೋಭಾವ ಇಲ್ಲವೆಂದೂ ಹಾಗೂ ಭವಿಷ್ಯದ ಆರ್ಥಿಕ ಭದ್ರತೆಗೆ ಹೆಚ್ಚಿನ ಯೋಚನೆಗಳು ಇಲ್ಲವೆಂದೂ ಅರ್ಥ ಮಾಡಿಕೊಳ್ಳಬಹುದಾಗಿದೆ.

ಪೌಲೋಪ್ರೇರಿಯವರು ಮನುಷ್ಯ ಮತ್ತು ಸಮುದಾಯದಲ್ಲಿ ಇರುವ ಮೂರು ಪ್ರಜ್ಞೆಯ ಹಂತಗಳಲ್ಲಿ, ಮೊದಲನೆಯ ಮಾಯಾ ಪ್ರಜ್ಞೆಯ ಹಂತದಲ್ಲಿ ಮನುಷ್ಯರ ಪ್ರಯತ್ನಗಳು ಕೇವಲ ಮೂಲಭೂತ ಅವಶ್ಯಕತೆಗಳಾದ ನಿದ್ರೆ, ನೀರು ಮತ್ತು ಹಸಿವನ್ನು ನೀಗಿಸುವಿಕೆಗೆ ಸೀಮಿತವಾಗಿರುತ್ತದೆ. ಎನ್ನುವ ಅಂಶವನ್ನು ಇಲ್ಲಿ ಒಪ್ಪಿಕೊಳ್ಳಬಹುದಾಗಿದೆ. (1989: ಪು.ಸಂ 161 ರಿಂದ 163)

## ಕೋಷ್ಟಕ ಸಂಖ್ಯೆ 4.8 (ಎ ಮತ್ತು ಬಿ)

## ಬುಡಕಟ್ಟು ಮಹಿಳೆಯರಿಗೆ ಮನೆಗೆ ಬೇಕಾಗುವ ವಸ್ತುಗಳನ್ನು ಖರೀದಿಸುವ ಮತ್ತು ಅಗತ್ಯವಿದ್ದಾಗ ಮಾರುವ ಸ್ವಾತಂತ್ರ್ಯದ ಕುರಿತಾದ ವಿವರಗಳು

**4.8(ಎ) ಖರೀದಿಸುವುದು 4.8(ಬಿ)ಮಾರುವುದು**

| ಕ್ರ. ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು | ಕ್ರ. ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|---|---|---|---|
| 1 | ಖರೀದಿಸುತ್ತೇವೆ | 289 | 96.33 | 1 | ಮಾರುತ್ತೇವೆ | 92 | 30.67 |
| 2 | ಖರೀದಿಸುವುದಿಲ್ಲ | 011 | 3.67 | 2 | ಮಾರುವುದಿಲ್ಲ | 208 | 69.33 |
| | ಒಟ್ಟು | 300 | 100.00 | | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 4.8(ಎ)ರ ಪ್ರಕಾರ 300(100%)ರಲ್ಲಿ 289 ಮಹಿಳೆಯರು ತಮ್ಮ ಮನೆಗೆ ಬೇಕಾಗುವ ವಸ್ತುಗಳನ್ನು ತಾವು ಖರೀದಿಸುತ್ತೇವೆ ಎಂದಿದ್ದಾರೆ ಹಾಗೂ 11(3.67%)ರಷ್ಟು ಮಹಿಳೆಯರು ಮಾತ್ರ ತಮಗೆ ಆ ಸ್ವಾತಂತ್ರ್ಯವಿಲ್ಲ ಎಂದಿದ್ದಾರೆ. ಹಾಗೇ ಕೋಷ್ಟಕ ಸಂಖ್ಯೆ 4.8(ಬಿ)ಯಲ್ಲಿ 92(30.67%) ಮಹಿಳೆಯರು ಮಾತ್ರ ಅಗತ್ಯವೆನಿಸಿದರೆ ತಮಗೆ ಮನೆಯ ವಸ್ತುಗಳನ್ನು ಮಾರುವ ಅಧಿಕಾರವಿದೆ ಎಂದರೆ ಹೆಚ್ಚಿನ ಸಂಖ್ಯೆಯ 208(69.33%) ಮಹಿಳೆಯರು ತಮಗೆ ಅಗತ್ಯವಿದ್ದಾಗ ಮನೆಯ ವಸ್ತುಗಳನ್ನು ಮಾರುವ ಅಧಿಕಾರ ಇಲ್ಲವೆಂದು ತಿಳಿಸಿದ್ದಾರೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಒಂದಲ್ಲ ಒಂದು ಉದ್ಯೋಗದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ, ಅಲ್ಪ ಸ್ವಲ್ಪ ಆದಾಯದ ಗಳಿಕೆಯಿಂದ ಮನೆಗೆ ಬೇಕಾಗುವ ವಸ್ತುಗಳನ್ನು ಖರೀದಿಸುತ್ತಾರೆ. ಖರೀದಿಗೆ ತಮ್ಮ ಗಂಡಂದಿರ (ಕುಟುಂಬ ಸದಸ್ಯರ) ಅನುಮತಿ ಬೇಕಾಗಿಲ್ಲ ಎಂದಿದ್ದಾರೆ. ಆದರೆ ಅದೇ ವಸ್ತುಗಳನ್ನು ಅಗತ್ಯ ಬಿದ್ದಾಗ ಮಾರುವಲ್ಲಿ ಮಾತ್ರ ಮನೆಯಲ್ಲಿ ಪತಿಯಂದಿರ (ಅಥವಾ ಇತರ ಕುಟುಂಬ ಸದಸ್ಯರ) ಅನುಮತಿ ಬೇಕಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

ಈ ಕುರಿತಾದ ನಡೆಸಿದ ಸಂದರ್ಶನಗಳ ಸಂದರ್ಭಗಳಲ್ಲಿ ಗಮನಿಸಿದಂತೆ ಬುಡಕಟ್ಟು ಮಹಿಳೆಯರು ತಮ್ಮ ಪತಿಯಂದಿರ ಕುರಿತಾಗಿ ಅವರಿಗೆ ಭಯವಿರುವುದು ಮುಖ

ಭಾವನೆಯಲ್ಲಿ ವ್ಯಕ್ತವಾಗಿಲ್ಲ. ಬದಲಾಗಿ ಪತಿಯ ಅಭಿಪ್ರಾಯಕ್ಕೆ ಮನ್ನಣೆ ಬೇಕು ಎನ್ನುವ ಸರಳ ಯೋಚನೆಯನ್ನು ಅವರಲ್ಲಿರುವುದನ್ನು ಗಮನಿಸಲಾಗಿದೆ.

## ಕೋಷ್ಟಕ ಸಂಖ್ಯೆ 4.9

## ಬುಡಕಟ್ಟು ಮಹಿಳೆಯರಲ್ಲಿ ಸ್ವಂತದ ಉಪಯೋಗಕ್ಕಾಗಿ ಇರುವ ಒಟ್ಟು ಚಿನ್ನ

| ಕ್ರ.ಸಂ | ಒಟ್ಟು ಚಿನ್ನ | ಒಟ್ಟು | ಶೇಕಡವಾರು |
|---|---|---|---|
| 1 | 4 ಗ್ರಾಂಗಿಂತ ಕಡಿಮೆ | 82 | 27.34 |
| 2 | 4 ರಿಂದ 8 ಗ್ರಾಂ | 93 | 31.00 |
| 3 | 8 ರಿಂದ 24 | 72 | 24.00 |
| 4 | 24 ರಿಂದ 48 | 36 | 12.00 |
| 5 | 48 ಗ್ರಾಂಗಿಂತ ಹೆಚ್ಚು | 13 | 4.33 |
| 6 | ಏನೂ ಇಲ್ಲ | 04 | 1.33 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.9 ರ ಪ್ರಕಾರ ಒಟ್ಟು 300 (100%) ಮಹಿಳೆಯರಲ್ಲಿ 82(27.34%) ಮಹಿಳೆಯರಲ್ಲಿ, ನಾಲ್ಕು ಗ್ರಾಂಗಿಂತ ಕಡಿಮೆ ಚಿನ್ನ ಇದ್ದು, 93 (31.00%) ಮಹಿಳೆಯರಲ್ಲಿ ನಾಲ್ಕರಿಂದ ಎಂಟು ಗ್ರಾಂ ಚಿನ್ನವಿದೆ. ಹಾಗೂ 72 (24.00%) ಮಹಿಳೆಯರಲ್ಲಿ ಎಂಟ ರಿಂದ 24ಗ್ರಾಂನಷ್ಟು ಸ್ವಂತದ ಉಪಯೋಗಕ್ಕೆ ಚಿನ್ನವಿದ್ದು, 36(12%) ಮಹಿಳೆಯರಲ್ಲಿ 24ರಿಂದ 48ಗ್ರಾಂ ಚಿನ್ನವಿದ್ದು, 13(4.33%) ಮಹಿಳೆಯರಲ್ಲಿ 48 ಗ್ರಾಂಗಿಂತ ಹೆಚ್ಚು ಚಿನ್ನವಿದೆ. ಹಾಗೂ ನಾಲ್ಕು(1.33%) ಮಹಿಳೆಯರಲ್ಲಿ ಸ್ವಂತದ ಉಪಯೋಗಕ್ಕಾಗಿ ಚಿನ್ನ ಇಲ್ಲ ಎಂದು ಕೋಷ್ಟಕದ ಆಧಾರದಿಂದ ತಿಳಿದುಕೊಳ್ಳಬಹುದು.

ಅತೀ ಹೆಚ್ಚಿನ ಬುಡಕಟ್ಟು ಮಹಿಳೆಯರಲ್ಲಿ ನಾಲ್ಕರಿಂದ ಎಂಟು ಗ್ರಾಂ ನಷ್ಟು ಚಿನ್ನವು ಅವರ ಸ್ವಂತದ ಉಪಯೋಗಕ್ಕಾಗಿ ಇರುವುದನ್ನು ಗಮನಿಸಿಲಾಗಿದೆ.

ನಾಲ್ಕು ಬುಡಕಟ್ಟು ಮಹಿಳೆಯರಲ್ಲಿ ಅತಿ ಕಡಿಮೆ ಚಿನ್ನವನ್ನು ಹೊಂದಿರುವುದು ಕೊರಗ ಮಹಿಳೆಯರು. ಇದರಲ್ಲಿ ನಾಲ್ಕು ಮಹಿಳೆಯರು ತಮ್ಮಲ್ಲಿ ಚಿನ್ನ ಇಲ್ಲ ಎಂದು ಪ್ರತಿಕ್ರಯಿಸಿದ್ದು ಅತ್ಯಂತ ಹೆಚ್ಚು ಪ್ರಮಾಣದ ಎಂದರೆ ಎಂಟರಿಂದ 24ಗ್ರಾಂ ನವರೆಗೆ ಮಾತ್ರ ಈ ಸಮುದಾಯದ ಮಹಿಳೆಯರಲ್ಲಿ ಚಿನ್ನವಿರುವುದು ಕ್ಷೇತ್ರ ಕಾರ್ಯದಿಂದ ತಿಳಿಯಲಾಗಿದೆ. ಕೊರಗ ಸಮುದಾಯವು ಇತರ ಸಮುದಾಯಕ್ಕಿಂತ ಆರ್ಥಿಕವಾಗಿ ತೀರಾ ಕೆಳಮಟ್ಟದಲ್ಲಿದೆ. ಎಂದು ತಿಳಿಯಲು ಈ ಕೋಷ್ಟಕದ ದತ್ತಾಂಶಗಳು ಸಹ ಒಂದು ಮಾನದಂಡವಾಗಿದೆ.

## ಕೋಷ್ಟಕ 4.10 (ಎ)

## ಸ್ವಸಹಾಯ ಸಂಘದ ಸದಸ್ಯೆಯರು ಸಂಘದ ಆರ್ಥಿಕ ವ್ಯವಹಾರದಲ್ಲಿ ಸಲಹೆ ನೀಡಿರುವ ಕುರಿತು ವಿವರಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸಲಹೆ ನೀಡುತ್ತೇವೆ | 163 | 54.34 |
| 2 | ಸಲಹೆ ನೀಡುವುದಿಲ್ಲ | 63 | 21.00 |
| 3 | ಅನ್ವಯಿಸುವುದಿಲ್ಲ | 74 | 24.66 |
| | ಒಟ್ಟು | 300 | 100.00 |

ಒಟ್ಟು 300 (100%) ನಮೂನೆ ಮಾಹಿತಿದಾರರಲ್ಲಿ 226 (75.34%) ಮಹಿಳೆಯರು ಸ್ವಸಹಾಯ ಗುಂಪಿನ ಸದಸ್ಯತ್ವ ಪಡೆದುಕೊಂಡಿದ್ದಾರೆ. ಮತ್ತು 74(24.66%) ಮಹಿಳೆಯರು ಸದಸ್ಯರಾಗಿಲ್ಲ. 163(54.34%) ಮಹಿಳೆಯರು ಗುಂಪಿನ ಆರ್ಥಿಕ ಚರ್ಚೆಗಳಲ್ಲಿ ಸಲಹೆ ನೀಡುತ್ತೇವೆ ಎಂದಿದ್ದಾರೆ. 63(21%) ಮಹಿಳೆಯರು ಆರ್ಥಿಕ ಸಂಬಂಧಿತ ಚರ್ಚೆಗಳಲ್ಲಿ ಸಲಹೆ ನೀಡುವುದಿಲ್ಲ ಎಂದಿದ್ದಾರೆ.

ಸ್ವಸಹಾಯ ಸಂಘಗಳಗೆ ತಪ್ಪದೇ ಭಾಗವಹಿಸುವ ಸದಸ್ಯರಲ್ಲಿ ಸಂವಹನ ಕೌಶಲ್ಯ ಬೆಳೆಯುವುದು ಮತ್ತು ಅವರ ಯೋಚನೆಗಳಲ್ಲಿ ಬದಲಾವಣೆಯಾಗುವುದು. ಒಟ್ಟು ಸೇರಿ ಚರ್ಚಿಸುವುದರಿಂದ ಮತು ನಿರ್ಧಾರ ತೆಗೆದುಕೊಳ್ಳುವುದರಿಂದ ಇವರಲ್ಲಿ ಕೌಶಲ್ಯಗಳು ಬೆಳೆಯಲು ಅನುಕೂಲವಾಗುತ್ತದೆ ಇದರೊಂದಿಗೆ ಸ್ಥಳೀಯ ಬ್ಯಾಂಕ್‌ನೊಂದಿಗೆ ವ್ಯವಹರಿಸುವ ಕೌಶಲ್ಯವೂ ಬೆಳೆಯುತ್ತದೆ.

ಸಂಘಗಳಲ್ಲಿ ಭಾಗವಹಿಸುವಿಕೆ, ಮಾತುಕತೆಗಳು ಹೆಚ್ಚಾದಂತೆ ಉಳಿದ ಮಹಿಳೆಯರನ್ನು ಅರ್ಥಮಾಡಿಕೊಳ್ಳಲು ಮತ್ತು ಅವರ ಮನೆಯ ಪರಿಸ್ಥಿತಿ, ಆರ್ಥಿಕ ಮಟ್ಟ ಶಿಕ್ಷಣ ಮಟ್ಟದ ಕುರಿತೂ ಮಹಿಳೆಯರು ತಿಳಿದುಕೊಂಡು ತಮ್ಮ ಆರ್ಥಿಕ ವ್ಯವಹಾರಗಳಲ್ಲಿ ಸಲಹೆ ಕೊಡುವಲ್ಲಿ ಶಕ್ತರಾಗುತ್ತಾರೆ. ಹಾಗೆಯೇ ಉಳಿದ 63 (21%) ಮಹಿಳೆಯರು ತಮಗೆ ಯಾವ ರೀತಿ ಸಲಹೆಗಳನ್ನು ಕೊಡಬೇಕೆಂದು ತಿಳಿಯುವುದಿಲ್ಲವೆಂದೂ ಆ ಕುರಿತಂತೆ ತಮಗೆ ಸಾಕಷ್ಟು ಜ್ಞಾನವಿಲ್ಲವೆಂದೂ ಮತ್ತು ಆ ಕಾರಣದಿಂದಾಗಿ ನಾವು ಯಾವುದೇ ಆರ್ಥಿಕ ವ್ಯವಹಾರಗಳಲ್ಲಿ ಮಾತುಕತೆ ಮಾಡುವುದಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ.

## ಕೋಷ್ಟಕ ಸಂಖ್ಯೆ 4.10 (ಬಿ)

## ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಸಂಘದ ಸದಸ್ಯರಾಗಿ ಆರ್ಥಿಕ ಸಲಹೆಗಳನ್ನು ನೀಡುವುದರ ಕುರಿತಾದ ತುಲನಾತ್ಮಕ ಅಭಿಪ್ರಾಯಗಳು

| ಕ್ರ. ಸಂ | ಅಭಿಪ್ರಾಯ | ಕುಡುಬಿ | ಒಟ್ಟು ಶೇ | ಮರಾಠಿ ನಾಯ್ಕ | ಒಟ್ಟು ಶೇ | ಮಲೆ ಕುಡಿಯ | ಒಟ್ಟು ಶೇ | ಕೊರಗ | ಒಟ್ಟು ಶೇ |
|---|---|---|---|---|---|---|---|---|---|
| 1 | ಹೌದು | 58 | 58% | 73 | 73% | 23 | 38% | 13 | 32% |
| 2 | ಇಲ್ಲ | 20 | 20% | 16 | 16% | 12 | 20% | 11 | 28% |
| 3 | ಅನ್ವಯಿಸುವುದಿಲ್ಲ | 22 | 22% | 11 | 11% | 25 | 42% | 16 | 40% |
| | ಒಟ್ಟು | 100 | 100% | 100 | 100% | 60 | 100% | 40 | 100% |

$X^2 = 33.233$, P 0.0001

ಕೋಷ್ಟಕ ಸಂಖ್ಯೆ 4.10 (ಬಿ) ಯಲ್ಲಿ ಬುಡಕಟ್ಟು ಮಹಿಳೆಯರು ಸ್ವಸಹಾಯ ಸಂಘದಲ್ಲಿ ಆರ್ಥಿಕ ಸಲಹೆಗಳನ್ನು ನೀಡಿರುವುದರ ಕುರಿತಾದ ತುಲನಾತ್ಮಕ ಅಭಿಪ್ರಾಯಗಳಿವೆ.

ಕೈ ಸ್ಕೇರ್ ಟೆಸ್ಟ್‌ನ (Chi Square Test) ಪ್ರಕಾರ ಬುಡಕಟ್ಟು ಮಹಿಳೆಯರು ಸ್ವಸಹಾಯ ಸಂಘದಲ್ಲಿ ಆರ್ಥಿಕ ಸಲಹೆಗಳನ್ನು ನೀಡಿರುವುದರ ಕುರಿತಾದ ಅಭಿಪ್ರಾಯದಲ್ಲಿ ಮಹತ್ತರವಾದ ಭಿನ್ನತೆಗಳಿರುವುದನ್ನು ಗಮನಿಸಬಹುದಾಗಿದೆ.

ಒಟ್ಟು 100 ಕುಡುಬಿ ಮಹಿಳೆಯರಲ್ಲಿ 58 (58%) ಮಹಿಳೆಯರು ಸ್ವಸಹಾಯ ಸಂಘದಲ್ಲಿ ಆರ್ಥಿಕ ಸಲಹೆ ನೀಡುತ್ತಾರೆ. 20(20%) ಮಹಿಳೆಯರು ಸಲಹೆ ನೀಡುವುದಿಲ್ಲ ಹಾಗೂ 20(20%) ಮಹಿಳೆಯರು ಸ್ವಸಹಾಯ ಸಂಘಗಳಲ್ಲಿ ಸದಸ್ಯರಲ್ಲದೆ ಇರುವುದರಿಂದ ವಿಷಯ ಅನ್ವಯಿಸುವುದಿಲ್ಲ. ಒಟ್ಟು 100 ಮರಾಠಿ ನಾಯ್ಕ ಮಹಿಳೆಯರಲ್ಲಿ 73 (73%) ಮಹಿಳೆಯರು ಆರ್ಥಿಕ ಚಟುವಟಿಕೆಗಳಲ್ಲಿ ಸಲಹೆ ನೀಡುತ್ತಾರೆ. 16(16%) ಮಹಿಳೆಯರು ಈ

ಕುರಿತಾಗಿ ಸಲಹೆ ನೀಡುವುದಿಲ್ಲ. 11 (11%) ಮಹಿಳೆಯರು ಸ್ವಸಹಾಯ ಸಂಘದಲ್ಲಿ ಸದಸ್ಯರಾಗಿಲ್ಲ ಎನ್ನುವುದನ್ನು ಅಧ್ಯಯನ ಸ್ಪಷ್ಟಪಡಿಸುತ್ತದೆ.

ಒಟ್ಟು 60(100%) ಮಲೆಕುಡಿಯ ಮಹಿಳೆಯರಲ್ಲಿ 23(38%) ಮಹಿಳೆಯರು ಸಂಘದ ಮಾತುಕತೆಯಲ್ಲಿ ಆರ್ಥಿಕ ಸಲಹೆ ನೀಡುತ್ತಾರೆ. 12(20%) ಮಹಿಳೆಯರು ಸಲಹೆ ನೀಡುತ್ತಿಲ್ಲ. 25(42%) ಮಹಿಳೆಯರು ಸದಸ್ಯರಲ್ಲದೆ ಇರುವುದರಿಂದ ಈ ವಿಷಯ ಅನ್ವಯಿಸುವುದಿಲ್ಲ.

ಒಟ್ಟು 40(100%) ಕೊರಗ ಮಹಿಳೆಯರಲ್ಲಿ 13(32%) ಮಹಿಳೆಯರು ಸ್ವಸಹಾಯಗಳಲ್ಲಿ ಆರ್ಥಿಕ ಸಲಹೆ ನೀಡುತ್ತಾರೆ. 11 (28%) ಮಹಿಳೆಯರು ಈ ಕುರಿತಾಗಿ ಸಲಹೆ ನೀಡುವುದಿಲ್ಲ. 16(40%) ಮಹಿಳೆಯರು ಸದಸ್ಯರಲ್ಲದೆ ಇರುವುದರಿಂದ ಈ ವಿಷಯ ಅನ್ವಯವಾಗುವುದಿಲ್ಲ.

ಕೋಷ್ಟಕದ ಆಧಾರದಿಂದ ಗಮನಿಸುವುದಾದರೆ ಅತೀ ಹೆಚ್ಚಿನ ಮರಾಠಿ ನಾಯ್ಕ ಬುಡಕಟ್ಟು ಮಹಿಳೆಯರಿಗೆ ಆರ್ಥಿಕ ವ್ಯವಹಾರಗಳಲ್ಲಿ ಹೆಚ್ಚಿನ ಜ್ಞಾನವಿರುವುದರಿಂದ ಸಂಘಗಳ ಆರ್ಥಿಕ ಸಂಬಂಧಿತ ಸಲಹೆ ನೀಡುವ ಶಕ್ತಿ ಇರುವುದನ್ನು ಗಮನಿಸಬಹುದು. ಹಾಗೂ ಮರಾಠಿ ನಾಯ್ಕ ಸಮುದಾಯವು ಇತರ ಮೂರು ಬುಡಕಟ್ಟುಗಳ ಜನರಿಗಿಂತ ವೇಗವಾಗಿ ಆರ್ಥಿಕವಾಗಿ ಮುನ್ನಡೆಯುವುದನ್ನು ಗಮನಿಸಬಹುದಾಗಿದೆ.

ಹಾಗೇ ಅತೀ ಹೆಚ್ಚಿನ ಕೊರಗ ಬುಡಕಟ್ಟು ಮಹಿಳೆಯರು ಅಂದರೆ 11 (28%) ಮಹಿಳೆಯರು ಆರ್ಥಿಕ ಚರ್ಚೆಗಳಲ್ಲಿ ಸಲಹೆ ನೀಡುವುದಿಲ್ಲ ಎಂದಿದ್ದಾರೆ. ಕೊರಗ ಸಮುದಾಯವು ಇತರ ಮೂರು ಸಮುದಾಯಗಳಗಿಂತ ಆರ್ಥಿಕವಾಗಿ ತೀರಾ ಕೆಳಮಟ್ಟದಲ್ಲಿರುವುದು, ಮಹಿಳೆಯರು ಹೆಚ್ಚಿನ ಆರ್ಥಿಕ ಚಟುವಟಿಕೆಗಳಲ್ಲಿ ಸಲಹೆ ಕೊಡುವಲ್ಲಿ ಅಡ್ಡಿಯಾಗಿರುವುದಕ್ಕೂ ಪರಸ್ಪರ ಸಂಬಂಧವಿರುವುದನ್ನು ಅಧ್ಯಯನದಿಂದ ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 4.11

## ಬುಡಕಟ್ಟು ಮಹಿಳೆಯರು ಮತ್ತು ಸಾಲದ ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸಾಲ ಇದೆ | 176 | 58.66 |
| 2 | ಸಾಲ ಇಲ್ಲ | 124 | 41.34 |
| 3 | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.11ರ ಪ್ರಕಾರ ಒಟ್ಟು 300(100%) ಮಹಿಳೆಯರಲ್ಲಿ 176(58.66%) ಮಹಿಳೆಯರು ಸಾಲ ಪಡೆದಿದ್ದಾರೆ. 124(41.34%) ಮಹಿಳೆಯರು ಸಾಲ ಇಲ್ಲವೆಂದು ಪ್ರತಿಕ್ರಯಿಸಿದ್ದಾರೆ.

ಹಿಂದೆ ಊರಿನ ಜಮೀನ್ದಾರರು ಮತ್ತು ಶ್ರೀಮಂತರಿಂದ ಪಡಕೊಳ್ಳುತ್ತಿದ್ದ ಸಾಲವನ್ನು ಇಂದು ಮಹಿಳೆಯರು ಎಲ್ಲಾ ಕಡೆ ಇರುವ ಸ್ವಸಹಾಯ ಸಂಘಗಳಿಂದ ಪಡಕೊಳ್ಳುತ್ತಿದ್ದಾರೆ. ಪ್ರಸ್ತುತ ದಿನಗಳಲ್ಲಿ ಸರಳ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಬುಡಕಟ್ಟು ಮಹಿಳೆಯರು ಆಗಾಗ ಸ್ವಸಹಾಯ ಸಂಘಗಳಿಂದ ಸಾಲ ಪಡಕೊಳ್ಳುವುದನ್ನು ಗಮನಿಸಬಹುದಾಗಿದೆ.

ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿಯನ್ನು ಅವಲೋಕಿಸಿದಾಗ ತೀರಾ ಕೆಳಮಟ್ಟದಲ್ಲಿರುವುದನ್ನು ಗಮನಿಸಬಹುದು. ಬಡತನ, ಸಾಕಷ್ಟು ಆದಾಯವಿರದ ಅರೆ ಕಸುಬುಗಳು, ಶಿಕ್ಷಣ ಮತ್ತು ಕೌಶಲ್ಯಗಳ ಕೊರತೆಯೊಂದಿಗೆ ಕುಡಿತ ಮತ್ತು ಇತರ ದುರಭ್ಯಾಸಗಳು, ಗುಟ್ಕಾ ಹಾಗೂ ತಂಬಾಕು ಸೇವನೆ, ಸಮುದಾಯವನ್ನು ತೀರಾ ಸಂಕಷ್ಟದಲ್ಲಿ ಸಿಲುಕಿಸಿದೆ.

ಹೆಚ್ಚಿನ ಪುರುಷರು ದುರಭ್ಯಾಸಗಳನ್ನು ಹೊಂದಿರುವುದರಿಂದ ದುಡಿತದ ಆದಾಯದ ಬಹುಪಾಲು ಅಮಲು ಸೇವನೆಗೆ ಸೇರುತ್ತದೆ. ಇದರ ನೇರ ಪರಿಣಾಮ ಕುಟುಂಬದಲ್ಲಿ ಮಹಿಳೆಯರ ಮೇಲೆ ಉಂಟಾಗುವುದರಿಂದ ಮನೆಯ ಅಗತ್ಯ ವಸ್ತುಗಳಿಗೆ ಮತ್ತು ಮನೆ ನಿರ್ವಹಣೆಗೆ ಬುಡಕಟ್ಟು ಮಹಿಳೆಯರು ಸಾಲ ಪಡಕೊಳ್ಳುತ್ತಾರೆ ಎನ್ನುವುದನ್ನು ಅಧ್ಯಯನದಿಂದ ತಿಳಿಯಬಹುದಾಗಿದೆ.

## ಕೋಷ್ಟಕ ಸಂಖ್ಯೆ 4.12

## ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಪಡೆದುಕೊಂಡಿರುವ ಸಾಲದ ಮೂಲದ ವಿವರಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಬ್ಯಾಂಕ್ | 24 | 8.00 |
| 2 | ಖಾಸಗಿ ಫೈನಾನ್ಸ್ | 02 | 0.66 |
| 3 | ಸ್ವಸಹಾಯ | 147 | 49.00 |
| 4 | ಊರಿನ ಶ್ರೀಮಂತರಿಂದ | 03 | 1.00 |
| 5 | ಅನ್ವಯಿಸುವುದಿಲ್ಲ | 124 | 41.34 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.12 ರಲ್ಲಿ, 300(100%) ಮಹಿಳೆಯರಲ್ಲಿ, 17,6 (58.6%) ಮಹಿಳೆಯರು ವಿವಿಧ ಮೂಲಗಳಂದ ಸಾಲ ತೆಗೆದುಕೊಂಡಿರುವುದಾಗಿ ಪ್ರತಿಕ್ರಯಿಸಿದ್ದು 24(8.00%) ಮಹಿಳೆಯರು ಬ್ಯಾಂಕ್‌ಗಳಂದ, ಇಬ್ಬರು(0.66%) ಮಹಿಳೆಯರು ಖಾಸಗಿ ಆರ್ಥಿಕ ಸಂಸ್ಥೆಗಳಂದ, ಹಾಗೆಯೇ 147 (49%) ಮಹಿಳೆಯರು ಸ್ವಸಹಾಯ ಸಂಘಗಳಂದ, ಮತ್ತು ಮೂವರು (1%)ಮಹಿಳೆಯರು ಊರಿನ ಶ್ರೀಮಂತರಿಂದ ಸಾಲ ಪಡೆದುಕೊಂಡಿದ್ದಾರೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ಊರಿನಲ್ಲಿರುವ ಸ್ವಸಹಾಯ ಸಂಘಗಳಂದ ಸಾಲ ಪಡೆದುಕೊಂಡಿದ್ದಾರೆ. ಹಿಂದೆ ಖಾಸಗಿ ಆರ್ಥಿಕ ಸಂಸ್ಥೆಗಳಂದ, ಊರಿನ ಶ್ರೀಮಂತರಿಂದ ಸಾಲ ಕೇಳುತ್ತಿದ್ದ ಬುಡಕಟ್ಟು ಸಮುದಾಯಗಳಗೆ ಈಗ ಸ್ವಸಹಾಯ ಸಂಘಗಳು ಸಾಲ ನೀಡುತ್ತಿವೆ. ಇದರಿಂದಾಗಿ ಖಾಸಗಿಯವರಿಗೆ ಕೊಡುತ್ತಿದ್ದ ಅಧಿಕ ಬಡ್ಡಿಯಿಂದ ಬಡ ಸಮುದಾಯಗಳು ತಪ್ಪಿಸಿಕೊಂಡಿದ್ದು, ಸ್ವಸಹಾಯ ಸಂಘಗಳು ಕಡಿಮೆ ಬಡ್ಡಿಗೆ ಬುಡಕಟ್ಟು ಸಮುದಾಯಗಳಗೆ ಸಾಲ ನೀಡುವುದರಿಂದ ತಕ್ಷಣದ ಆರ್ಥಿಕ ಸಮಸ್ಯೆಯಿಂದ ಅದೆಷ್ಟೋ ಕುಟುಂಬಗಳು ಪಾರಾಗಲು ಸಹಕಾರಿಯಾಗಿವೆ.

ಆದರೆ ಬುಡಕಟ್ಟು ಮಹಿಳೆಯರು ಸಾಲ ಪಡೆದುಕೊಂಡಿರುವ ಉದ್ದೇಶಗಳು ಅನುತ್ಪಾದಕವಾಗಿರುವುದರಿಂದ, ಅವರು ಪುನಃ ಸಾಲದಲ್ಲೇ ಇರುವಂತೆ ಪ್ರೇರೇಪಣೆ ನೀಡಿದಂತಾಗಿ ಅನುಕೂಲತೆಗಿಂತ ಅನಾನುಕೂಲವೇ ಹೆಚ್ಚಾಗಿರುವ ಅಂಶವನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

## ಕೋಷ್ಟಕ ಸಂಖ್ಯೆ 4.13

## ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಸಾಲ ಪಡಕೊಂಡ ಉದ್ದೇಶಗಳು

| ಕ್ರ.ಸಂ | ಸಾಲದ ಉದ್ದೇಶಗಳು | ಒಟ್ಟು | ಶೇಕಡವಾರು |
|---|---|---|---|
| 1 | ಮನೆ ಕಟ್ಟಲು | 59 | 19.66 |
| 2 | ಬಾವಿ ತೋಡಲು | 06 | 2.00 |
| 3 | ಶಿಕ್ಷಣ | 19 | 6.34 |
| 4 | ಮದುವೆ | 17 | 5.66 |
| 5 | ಆಸ್ತಿ ಖರೀದಿ | 06 | 2.00 |
| 6 | ಇತರ | 69 | 23.00 |
| 7 | ಅನ್ವಯಿಸುವುದಿಲ್ಲ | 124 | 41.34 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕದಿಂದ 4.13ರ ಪ್ರಕಾರ, ಒಟ್ಟು 300(100%) ಮಹಿಳೆಯರಲ್ಲಿ 59 (19.66%) ಮಹಿಳೆಯರು ಮನೆಕಟ್ಟಲು ಸಾಲ ಪಡೆದಿರುವುದಾಗಿ, ಆರು (2%) ಮಹಿಳೆಯರು ಬಾವಿ ತೋಡಲು, 19(6.34%) ಮಹಿಳೆಯರು ಮಕ್ಕಳ ಶಿಕ್ಷಣದ ಉದ್ದೇಶಕ್ಕಾಗಿ, 17(5.66%) ಮಹಿಳೆಯರು ಮದುವೆ ಖರ್ಚಿಗಾಗಿ, ಆರು(2%) ಮಹಿಳೆಯರು ಆಸ್ತಿ ಖರೀದಿಗಾಗಿ ಹಾಗೂ 69(23%) ಮಹಿಳೆಯರು ಇತರ ಕಾರಣಗಳಿಂದಾಗಿ ಅಂದರೆ ಚಿನ್ನ ಖರೀದಿಗೆ, ಬಟ್ಟೆ ಬರೆ ಮತ್ತು ಮನೆ ಸಾಮಾನು ಖರೀದಿಸಲು ಸಾಲವನ್ನು ಪಡೆದಿದ್ದಾರೆ. ಹಾಗೆಯೇ ಕೆಲವು ಮಹಿಳೆಯರು ಹಿಂದೆ ಮಾಡಿರುವ ಸಾಲವನ್ನು ತೀರಿಸುವ ಸಲುವಾಗಿ ಮತ್ತೆ ಸಾಲ ಮಾಡಿರುವುದಾಗಿ ತಿಳಿಸಿದ್ದಾರೆ.

ಸ್ವಸಹಾಯ ಸಂಘದಲ್ಲಿ ಸದಸ್ಯೆಯಾಗಿರುವ ಮಹಿಳೆಯರಲ್ಲಿ ಸಣ್ಣ ಉಳಿತಾಯವೂ ಇರುವುದರಿಂದ ಹಣದ ಅಗತ್ಯವಿರುವಾಗ ಸುಲಭವಾಗಿ ಸಾಲ ದೊರೆಯುತ್ತದೆ. ಆದರೆ ಈ ಸಾಲವನ್ನು ಅವರು ಅನುತ್ಪಾದಕ ಉದ್ದೇಶಗಳಿಗಾಗಿ ಹೆಚ್ಚಾಗಿ ಪಡೆದುಕೊಳ್ಳುತ್ತಿದ್ದು ಮುಂದೆ ಲಾಭದಾಯಕವಾಗಿರುವ ಯಾವುದೇ ಚಟುವಟಿಕೆಗಳನ್ನು ಮಾಡದೇ ಇರುವುದರಿಂದ ಅವರಲ್ಲಿ ಸಾಲ ಬೆಳೆಯುತ್ತಲೇ ಇರುವ ಅಂಶವು ಕಾಣುತ್ತದೆ.

ಹೆಚ್ಚಿನ ಬುಡಕಟ್ಟು ಮಹಿಳೆಯರು ಶೈಕ್ಷಣಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಸಾಲ ಪಡೆದಿದ್ದು, ಇದು ಲಾಭದಾಯಕವಾದ ಚಟುವಟಿಕೆಯಾಗಿಲ್ಲ ಹಾಗೂ ಸಾಲವನ್ನು ಆರ್ಥಿಕ

ಚಟುವಟಿಕೆಗೆ ಹೊಂದಿಸಿಕೊಂಡು ಅಭಿವೃದ್ಧಿಯತ್ತ ಸಾಗುವ ಮಾರ್ಗದರ್ಶನದ ಕೊರತೆಯನ್ನು ಬುಡಕಟ್ಟು ಮಹಿಳೆಯರಲ್ಲಿ ಕಾಣಬಹುದಾಗಿದೆ.

## ಕೋಷ್ಟಕ ಸಂಖ್ಯೆ 4.14

## ಬುಡಕಟ್ಟು ಮಹಿಳೆಯರ ಹಣದ ಉಳಿತಾಯದ ಮೂಲ

| ಕ್ರ.ಸಂ | ಆರ್ಥಿಕ ಸಂಸ್ಥೆಗಳು | ಉತ್ತರಗಳು | ಶೇಕಡವಾರು |
|---|---|---|---|
| 1 | ಬ್ಯಾಂಕ್ ಠೇವಣಿ | 05 | 1.67 |
| 2 | ಅಂಚೆ ಕಛೇರಿ | 27 | 9.00 |
| 3 | ಬ್ಯಾಂಕ್ ಉಳಿತಾಯ | 11 | 3.66 |
| 4 | ಪಿಗ್ಮಿ ಸಂಗ್ರಹಣೆ | 03 | 1.00 |
| 5 | ಸ್ವ ಸಹಾಯ | 203 | 67.67 |
| 6 | ಜೀವವಿಮೆ | 03 | 1.00 |
| 7 | ಮ್ಯೂಚುವಲ್ ಫಂಡ್ | 04 | 1.33 |
| 8 | ಯಾವುದೇ ಉಳಿತಾಯ ಇಲ್ಲ | 44 | 14.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.14 ಬುಡಕಟ್ಟು ಮಹಿಳೆಯರ ಉಳಿತಾಯದ ರೂಢಿ ಮತ್ತು ಅದರ ಮೂಲಗಳನ್ನು ಪ್ರತಿಬಿಂಬಿಸುತ್ತದೆ. ಒಟ್ಟು 300(100%) ಮಹಿಳೆಯರಲ್ಲಿ ಠೇವಣಾತಿ ಮೂಲದ ಐವರು (1.67) ಮಹಿಳೆಯರು ಬ್ಯಾಂಕ್‌ಗಳಲ್ಲಿ ಠೇವಣಿಯಾಗಿ, 27(9%) ಮಹಿಳೆಯರು ಅಂಚೆಕಛೇರಿಯಲ್ಲಿ, 11(3.66%) ಮಹಿಳೆಯರು ಬ್ಯಾಂಕ್‌ಗಳಲ್ಲಿ ಉಳಿತಾಯ, ಮೂರು ಮಂದಿ (1%) ಮಹಿಳೆಯರು ಪಿಗ್ಮಿ ಸಂಗ್ರಹ, 203(67.67%) ಮಹಿಳೆಯರು ಸ್ವಸಹಾಯ ಸಂಘಗಳಲ್ಲಿ, ಮೂವರು (1%) ಜೀವವಿಮೆಗಳಲ್ಲಿ, ನಾಲ್ಕು ಮಂದಿ (1.33%) ಮಹಿಳೆಯರು ಮ್ಯುಚುವಲ್ ಫಂಡ್‌ಗಳಲ್ಲಿ ಹಾಗೂ ಒಟ್ಟು 44(14.67%) ಮಹಿಳೆಯರು ಯಾವುದೇ ರೀತಿಯ ಉಳಿತಾಯ ಇಲ್ಲ ಎಂದು ತಿಳಿಸಿದ್ದಾರೆ.

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಡಿಯಲ್ಲಿ, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ನವೋದಯ ಸಹಕಾರಿ ಸಂಘಗಳ ಆಶ್ರಯದಡಿಯಲ್ಲಿ

ಅನೇಕ ಸ್ವಸಹಾಯ ಗುಂಪುಗಳ ರಚನೆಯಾಗಿದ್ದು, ಇಲ್ಲಿ ಹೆಚ್ಚಿನ ಬುಡಕಟ್ಟು ಮಹಿಳೆಯರು ಸದಸ್ಯತ್ವ ಪಡಕೊಂಡಿರುತ್ತಾರೆ. ವಿವಿಧ ಚಟುವಟಿಕೆಗಳ ಮೂಲಕ ಮಹಿಳಾ ಸಬಲೀಕರಣದ ಉದ್ದೇಶವನ್ನಿಟ್ಟುಕೊಂಡ ಈ ಸ್ವಸಹಾಯ ಸಂಘಗಳಲ್ಲಿ ಉಳಿತಾಯವೆಂಬ ಕಿರು ಚಟುವಟಿಕೆಯಿದ್ದು, ಇದು ಮಹಿಳೆಯರನ್ನು ಆಕರ್ಷಿಸುವ ಒಂದು ಯೋಜನೆಯಾಗಿದೆ. ಮತ್ತು ತಮ್ಮ ಉಳಿತಾಯದ ಮೇಲೆ ಸದಸ್ಯರಿಗೆ ಸಾಲ ನೀಡುವ ವ್ಯವಸ್ಥೆಯೂ ಇಂತಹ ಸರ್ಕಾರೇತರ ಸಂಸ್ಥೆಗಳಲ್ಲಿದೆ.

ಇಂತಹ ಸರ್ಕಾರೇತರ ಸಂಸ್ಥೆಗಳ ಸದಸ್ಯರೆಲ್ಲರು ಕಡ್ಡಾಯವಾಗಿ ವಾರಕ್ಕೆ ಕಡಿಮೆ ಎಂದರೆ ಹತ್ತು ರೂ.ಗಳಾದರು ಉಳಿತಾಯ ಮಾಡಬೇಕೆನ್ನುವ ನಿಯಮವಿರುವುದರಿಂದ ಹೆಚ್ಚಿನ ಮಹಿಳೆಯರು ಉಳಿತಾಯದ ಅಭ್ಯಾಸವನ್ನು ಬೆಳೆಸಿಕೊಂಡಿದ್ದಾರೆ. ಅತ್ಯಂತ ಹೆಚ್ಚಿನ ಎಂದರೆ 203(67.67%) ಮಹಿಳೆಯರು ಸ್ವಸಹಾಯ ಗುಂಪುಗಳಲ್ಲಿ ಉಳಿತಾಯ ಮಾಡುತ್ತಿರುವುದು ಗಮನಾರ್ಹವಾಗಿದೆ.

ಈ ಕುರಿತ ಮಾತುಕತೆಗಳನ್ನು ಆಡುವಾಗ ಬುಡಕಟ್ಟು ಮಹಿಳೆಯರು ತಾವು ದುಡಿದದ್ದು ತಮ್ಮ ಮನೆ ಖರ್ಚಿಗೆ ಸಾಲುವುದಿಲ್ಲ. ಹಾಗಿರುವಾಗ ಉಳಿತಾಯ ಮಾಡುವುದು ಹೇಗೆ ಸಾಧ್ಯವಾಗುತ್ತದೆ ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಮಹಿಳೆಯರಲ್ಲಿ ಉಳಿತಾಯ ಮಾಡುವ ರೂಢಿಯು ಆಧುನಿಕ ಯುಗದ ಯೋಜನೆಯಾಗಿದ್ದು ಅವರ ಮೇಲೆ ಹೇರಿರುವ ಒಂದು ಮೌಲ್ಯವೆಂದು ಪರಿಗಣಿಸಬಹುದು. ಸ್ವಭಾವತಃ ದಿನವೊಂದಕ್ಕೆ ಅಗತ್ಯವಿರುವಷ್ಟು ಮಾತ್ರ ಆಹಾರ ಸಂಗ್ರಹಣೆ ಮಾಡಿ ಅಥವಾ ಬೀಳಲುಗಳನ್ನು ಕಾಡಿನಿಂದ ತಂದು ಕುಲ ಕಸುಬು ಮಾಡುತ್ತಿದ್ದ ಬುಡಕಟ್ಟುಗಳು ಇದ್ದುದರಲ್ಲೇ ತೃಪ್ತಿ ಪಡುತ್ತಿರುವ ಜನಾಂಗವಾಗಿದೆ. ಸ್ವಾವಲಂಬಿಗಳಾಗಿದ್ದ ಈ ಜನಾಂಗ ಇಂದು ತನ್ನ ದಿನನಿತ್ಯದ ಬದುಕಿನ ನಿರ್ವಹಣೆಗಾಗಿ ಸರಕಾರ ಮತ್ತು ಇತರ ಜನರ ಮೇಲೆ ಅವಲಂಬಿತವಾಗಿದೆ.

ವಿಶೇಷವಾಗಿ ಕೊರಗ ಮಹಿಳೆಯರು ತಮ್ಮ ಮನೆವಾರ್ತೆ, ದಿನನಿತ್ಯದ ಸಂಪಾದನೆಗಾಗಿ ಜಾಗರೂಕತೆಯಿಂದ ಒಂದು ದಿನಕ್ಕೆ ಬೇಕಾಗುವಷ್ಟೇ ಬೀಳಲುಗಳನ್ನು ತರುವುದನ್ನು ಕ್ಷೇತ್ರ ಕಾರ್ಯದಲ್ಲಿ ಗಮನಿಸಲಾಗಿದೆ.

## ಕೋಷ್ಟಕ ಸಂಖ್ಯೆ 4.15

## ಬುಡಕಟ್ಟು ಮಹಿಳೆಯರ ಉಳತಾಯದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವವರು

| ಕ್ರ.ಸಂ | ಅಭಿಪ್ರಾಯ | ಒಟ್ಟು ಸಂಖ್ಯೆ | ಶೇಕಡವಾರು |
|---|---|---|---|
| 1 | ಸ್ವತಃ | 217 | 72.34 |
| 2 | ಗಂಡ | 31 | 10.33 |
| 3 | ಗಂಡು ಮಕ್ಕಳು | 01 | 0.33 |
| 4 | ಹೆಣ್ಣು ಮಕ್ಕಳು | 01 | 0.33 |
| 5 | ಮನೆಯ ಇತರರು | 02 | 0.67 |
| 6 | ಗಂಡ ಹೆಂಡತಿ ಒಟ್ಟು | 12 | 4.00 |
| 7 | ಅನ್ವಯಿಸುವುದಿಲ್ಲ | 36 | 12.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.15 ಬುಡಕಟ್ಟು ಮಹಿಳೆಯರ ಉಳತಾಯದಲ್ಲಿ ನಿರ್ಧಾರ ತೆಗೆದುಕೊಳ್ಳುವುದನ್ನು ಸೂಚಿಸುತ್ತದೆ.

ಒಟ್ಟು 300(100%) ರಲ್ಲಿ 264 ಮಹಿಳೆಯರು ಉಳತಾಯದ ಹವ್ಯಾಸವನ್ನು ಬೆಳೆಸಿಕೊಂಡಿದ್ದು, ಈ ಹಿಂದಿನ ಕೋಷ್ಟಕ ಸಂಖ್ಯೆ 4.14ರಲ್ಲಿ ಗಮನಿಸಬಹುದು. 217(72.34%) ಮಹಿಳೆಯರು ತಮ್ಮ ಉಳತಾಯದಲ್ಲಿ ತಾವೇ ನಿರ್ಧಾರ ತೆಗೆದುಕೊಳ್ಳುತ್ತಾರೆ. ಹಾಗೆ 31(10.33%) ಮಹಿಳೆಯರ ಪತಿಯಂದಿರು, ತಮ್ಮ ಪತ್ನಿಯರ ಉಳತಾಯದಲ್ಲಿ ನಿರ್ಧಾರ ತೆಗೆದುಕೊಂಡರೆ, ಒಂದು (0.33%) ಮಹಿಳೆಯ ಗಂಡುಮಗ, ಒಂದು(0.33%) ಮಹಿಳೆಯ ಹೆಣ್ಣು ಮಗಳು, ಎರಡು (0.67%) ಮಹಿಳೆಯರ ಮನೆಯಲ್ಲಿನ ಇತರ ಸದಸ್ಯರು ಹಾಗೂ 12(4%) ಮಹಿಳೆಯರು ಗಂಡನೊಂದಿಗೆ ಸೇರಿ ತಮ್ಮ ಉಳತಾಯದ ಕುರಿತು ನಿರ್ಧರಿಸುವುದಾಗಿ ತಿಳಸಿದ್ದಾರೆ.

ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರಿಗೆ ತಮ್ಮ ಉಳತಾಯದ ಹಣದ ಮೇಲೆ ಅಧಿಕಾರವಿದೆ. ಮಹಿಳೆಯರಿಗೆ ತಮ್ಮ ಉಳತಾಯದ ಹಣದ ಮೇಲೆ ಅಧಿಕಾರವಿದ್ದರೂ ಹಣದ ವಿನಿಯೋಗ ಮಾತ್ರ ಕುಟುಂಬದ ನಿರ್ವಹಣೆಗೆ ಹೋಗುವುದಾಗಿ ಮಹಿಳೆಯರು ಒಪ್ಪಿಕೊಳ್ಳುತ್ತಾರೆ. ಉಳತಾಯದ ಹಣವನ್ನು ಮನೆಯ ಅಗತ್ಯದ ವಸ್ತುಗಳನ್ನು ತರಲು ಉಪಯೋಗಿಸುವುದಾಗಿ ಬುಡಕಟ್ಟು ಮಹಿಳೆಯರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

## ಕೋಷ್ಟಕ ಸಂಖ್ಯೆ 4.16

## ಉದ್ಯೋಗದಲ್ಲಿ ಇನ್ನೂ ಹೆಚ್ಚಿನ ಉನ್ನತಿ ಹೊಂದುವ ಇಚ್ಛೆ- ಬುಡಕಟ್ಟು ಮಹಿಳೆಯರ ಅಭಿಪ್ರಾಯ

| ಕ್ರ.ಸಂ | ಅಭಿಪ್ರಾಯ | ಒಟ್ಟು ಸಂಖ್ಯೆ | ಶೇಕಡವಾರು |
|---|---|---|---|
| 1 | ಹೆಚ್ಚಿನ ಉನ್ನತಿಯ ಇಚ್ಛೆ ಇದೆ | 11 | 3.67 |
| 2 | ಹೆಚ್ಚಿನ ಉನ್ನತಿಯ ಇಚ್ಛೆ ಇಲ್ಲ | 265 | 88.33 |
| 3 | ಅನ್ವಯಿಸುವುದಿಲ್ಲ | 24 | 8.00 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.16ರಲ್ಲಿ ಒಟ್ಟು 300 (100%) ಮಹಿಳೆಯರಲ್ಲಿ ಕೇವಲ ಒಟ್ಟು 11(3.67%) ಮಹಿಳೆಯರು ತಮ್ಮ ಉದ್ಯೋಗದಲ್ಲಿ ಉನ್ನತಿ ಹೊಂದುವ ಇಚ್ಛೆ ಇದೆ ಎಂದು ಪ್ರತಿಕ್ರಯಿಸಿದ್ದು ,265 (88.33%) ಮಹಿಳೆಯರು ಯಾವುದೇ ಉದ್ಯೋಗದ ಇಚ್ಛೆ ಇಲ್ಲ ಎಂದು, 24(8%%) ಮಹಿಳೆಯರು ಉದ್ಯೋಗದಲ್ಲಿ ಇಲ್ಲದೇ ಇರುವುದರಿಂದ ಈ ವಿಚಾರ ಅನ್ವಯಿಸುವುದಿಲ್ಲ. ಒಟ್ಟು 11(3.67%%) ಮಹಿಳೆಯರು ಮಾತ್ರವೇ ತಮ್ಮ ಉದ್ಯೋಗದಲ್ಲಿ ಉನ್ನತಿ ಹೊಂದುವ ಇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ.

ಇಲ್ಲಿ ಹೆಚ್ಚಿನ ಬುಡಕಟ್ಟು ಮಹಿಳೆಯರು ಬೀಡಿಯನ್ನೇ ಮುಖ್ಯ ಕಸುಬಾಗಿಸಿಕೊಂಡಿರುವುದರಿಂದ ಇನ್ನೂ ಹೆಚ್ಚಿನ ಉನ್ನತಿ ಹೊಂದುವ ಕುರಿತಾದ ಯೋಚನೆಗಳಲ್ಲಿ ಕೊರತೆ ಇದೆ ಎಂದು ಗಮನಿಸಬಹುದಾಗಿದೆ.

ಬುಡಕಟ್ಟು ಸಮುದಾಯವು ಸರಳವಾದ ಆರ್ಥಿಕ ಸಂಘಟನೆಯನ್ನು ಹೊಂದಿರುತ್ತದೆ. ಹಿಂದೆ ಸ್ವಾವಲಂಬಿಯಾಗಿದ್ದ ಈ ಸಮುದಾಯ ಇಂದು ಪರಾವಲಂಬಿಯಾಗಿದೆ. ಶಿಕ್ಷಣದ ಕೊರತೆಯಿಂದಲೂ, ದುರಾಸೆಯಿಲ್ಲದೇ ಇರುವುದರಿಂದಲೂ ಹಾಗೂ ಇದ್ದುದರಲ್ಲೇ ತೃಪ್ತಿ ಪಡುವ ಸ್ವಭಾವವನ್ನು ಹೊಂದಿರುವುದರಿಂದಲೂ ಮಹಿಳೆಯರು ಮುಂದಿನ ಜೀವನದ ಕುರಿತಾದ ಸ್ಪಷ್ಟ ನಿಲುವುಗಳನ್ನು ವ್ಯಕ್ತಪಡಿಸಲು ಅಸಾಧ್ಯವಾಗಿರುವುದನ್ನು ಅಧ್ಯಯನವು ಸಾಬೀತುಪಡಿಸುತ್ತದೆ. ಆದರೆ ಹೆಚ್ಚು ಶಿಕ್ಷಣ ಪಡೆದ ಬುಡಕಟ್ಟು ಮಕ್ಕಳಲ್ಲಿ ಭವಿಷ್ಯದ ಕುರಿತಾದ ಸ್ಪಷ್ಟ ಯೋಚನೆಗಳನ್ನು ಗಮನಿಸಬಹುದಾಗಿದೆ ಎಂದು ಕ್ಷೇತ್ರ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

## ಕೋಷ್ಟಕ ಸಂಖ್ಯೆ 4.17

## ಸ್ವಂತ ಉದ್ಯೋಗ/ವ್ಯವಹಾರದ ತೊಂದರೆಗಳು

| ಕ್ರ.ಸಂ | ಸ್ವಂತ ಉದ್ಯೋಗ ತೊಂದರೆ | ಒಟ್ಟು ಸಂಖ್ಯೆ | ಶೇಕಡವಾರು |
|---|---|---|---|
| 1 | ಮೂಲ ವಸ್ತುವಿನ ಕೊರತೆ | 03 | 1.00 |
| 2 | ಬಂಡವಾಳದ ಕೊರತೆ | 04 | 1.33 |
| 3 | ಅಸಮರ್ಪಕ ಕೂಲಿ | 01 | 0.33 |
| 4 | ಜಾಗದ ಅಂತರ | - | - |
| 5 | ಮನೆಯ ಪುರುಷರ ಸಹಕಾರದ ಕೊರತೆ | - | - |
| 6 | ಆರೋಗ್ಯ ಸಮಸ್ಯೆ | 02 | 0.66 |
| 7 | ಸರಿಯಾದ ಜ್ಞಾನ ಹಾಗೂ ತರಬೇತಿಯ ಕೊರತೆ | - | - |
| 8 | ಅನ್ವಯಿಸುವುದಿಲ್ಲ | 290 | 96.68 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.17ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 10(3.32%) ಮಹಿಳೆಯರು ತಾವು ಮಾಡುತ್ತಿರುವ ಸ್ವಂತ ಉದ್ಯೋಗ/ವ್ಯವಹಾರದ ಕುರಿತು ಪ್ರತಿಕ್ರಯಿಸಿದ್ದಾರೆ. ಮೂರು(1%) ಮಹಿಳೆಯರು ಮೂಲ ವಸ್ತುವಿನ ಕೊರತೆ ಇದೆ. ಎಂದಿದ್ದಾರೆ ನಾಲ್ಕು (1.33%) ಮಹಿಳೆಯರು ಬಂಡವಾಳದ ಕೊರತೆ ಇದೆ ಎಂದು ಪ್ರತಿಕ್ರಯಿಸಿದ್ದಾರೆ. ಒಂದು (0.33%) ಮಹಿಳೆ ಅಸಮರ್ಪಕ ಕೂಲಿ ಎಂದಿದ್ದು ಎರಡು (0.66%) ಮಹಿಳೆಯರು ಆರೋಗ್ಯ ಸಮಸ್ಯೆಯನ್ನು, ಸ್ವಂತ ಉದ್ಯೋಗದ ತೊಂದರೆ ಎಂದು ಪ್ರತಿಕ್ರಯಿಸಿದ್ದಾರೆ.

ಬಹಳ ಕಡಿಮೆ ಸಂಖ್ಯೆಯ ಬುಡಕಟ್ಟು ಮಹಿಳೆಯರು ಕುಲಕಸುಬನ್ನು ಅವಲಂಬಿಸಿದ್ದು ಮೂರು ಮಹಿಳೆಯರು ಸ್ವ ಉದ್ಯೋಗಕ್ಕಾಗಿ ಮೂಲವಸ್ತುಗಳ ಕೊರತೆ ಇದೆ ಎಂದಿದ್ದಾರೆ. ಹೊಸ ಅರಣ್ಯನೀತಿ, ಮತ್ತು ಅರಣ್ಯಕ್ಕೆ ಸಲೀಸಾಗಿ ಮೊದಲಿನಂತೆ ಪ್ರವೇಶಿಸಲು ಆಗದೇ ಇರುವುದು ಮೂಲವಸ್ತುಗಳನ್ನು ತರಲು ತೊಂದರೆಯಾಗಿದೆ ಎಂದು ಬುಡಕಟ್ಟು ಮಹಿಳೆಯರು ಪ್ರತಿಕ್ರಯಿಸಿದ್ದಾರೆ.

ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ಜೀವನ ನಿರ್ವಹಣೆಗಾಗಿ ಜೇನು ಸಂಗ್ರಹಿಸುವ, ಬುಟ್ಟಿ ಹೆಣೆಯುವ ಮತ್ತು ಹಗ್ಗ ನೇಯುವುದೇ ಬುಡಕಟ್ಟುಗಳ ಆರ್ಥಿಕತೆಯ ಮೂಲವಾಗಿತ್ತು. ಆಧುನೀಕರಣದಿಂದಾಗಿ ಕಾಡು ಬರಿದಾಗುತ್ತಿದೆ. ಕುಲಕಸುಬಿಗೆ

ಬೇಕಾಗುವ ಮೂಲ ವಸ್ತುಗಳ ಕೊರತೆಯಿದೆ. ಅರಣ್ಯ ಇಲಾಖೆಯಿಂದಲೂ ನಿರ್ಬಂಧವಿದೆ. ಜಾಗತೀಕರಣ ಮತ್ತು ಆಧುನಿಕತೆಯ ಪ್ರಭಾವದಿಂದ ಕುಲಕಸುಬಿನ ಉತ್ಪನ್ನಗಳಿಗೆ ಪರ್ಯಾಯವಾದ ಉತ್ಪನ್ನಗಳು ಇಂದು ಕಡಿಮೆ ದರದಲ್ಲಿ ಮಾರುಕಟ್ಟೆಯಲ್ಲಿ ಲಭ್ಯವಿದೆ. ಹಾಗಾಗಿ ಬುಡಕಟ್ಟು ಸಮುದಾಯದ ಉತ್ಪನ್ನಗಳಿಗೆ ಬೇಡಿಕೆ ಇಲ್ಲದೆ ಇರುವುದರಿಂದ ಅವರ ಕುಲಕಸುಬು ಸಮುದಾಯದಿಂದ ನಿಧಾನವಾಗಿ ಮರೆಯಾಗುತ್ತಾ ಇರುವುದಕ್ಕೆ ಕಾರಣವಾಗಿದೆ. ಇದರಿಂದಾಗಿ ಅತ್ಯಲ್ಪ ಮಹಿಳೆಯರು ಮಾತ್ರ ಕುಲಕಸುಬನ್ನು ಇಂದು ತಮ್ಮ ಬದುಕಿಗೆ ಆಧಾರವಾಗಿಸಿಕೊಂಡಿದ್ದಾರೆ. ಎಂದು ಅಭಿಪ್ರಾಯ ಪಡಬಹುದಾಗಿದೆ.

ವಿಶೇಷವಾಗಿ ಕೊರತಗರ ಅಭಿವೃದ್ಧಿಯ ಬಗ್ಗೆ ಪ್ರತಿಕ್ರಯಿಸುತ್ತ ಸುಶೀಲಾನಾಡ ಅವರು 'ಅಭಿವೃದ್ಧಿ ಯೋಜನೆಗಳು ಮತ್ತು ಕೊರಗರು' ಎಂಬ ತಮ್ಮ ಅಧ್ಯಯನದಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ.

"ನಮಗೆ ಸ್ವ ಉದ್ಯೋಗ ಮಾಡಲು ಹಲವಾರು ಯೋಜನೆಗಳು ಜಾರಿಗೆ ಬಂದಿದ್ದರೂ ನಾವು ಪ್ರಕೃತಿಯನ್ನು ನಂಬಿರುವುದರಿಂದ ಈ ಯೋಜನೆಗಳನ್ನು ಅಳವಡಿಸಲು ಮಾನಸಿಕವಾಗಿ ಸಿದ್ಧರಾಗಿಲ್ಲ. ಸ್ವ ಉದ್ಯೋಗ ಮಾಡುವ ಮೊದಲು ತರಬೇತಿ ಪೂರ್ವಹಂತ, ತರಬೇತಿಯ ಹಂತ, ತರಬೇತಿಯ ನಂತರದ ಹಂತ ಎಂದು ವಿಂಗಡಿಸಿ ಸಮುದಾಯವನ್ನು ತಯಾರು ಮಾಡಬೇಕಾಗಿದೆ. ಇದರಲ್ಲಿ ಸಮುದಾಯದ ಜನರ ಆಸಕ್ತಿ, ಅವರಲ್ಲಿನ ಆತ್ಮವಿಶ್ವಾಸವನ್ನು ಗುರುತಿಸಿ ತರಬೇತಿಗಾಗಿ ಅವರನ್ನು ಪ್ರೇರೇಪಿಸುವ ಅಗತ್ಯವಿದೆ. ಈ ರೀತಿಯ ತರಬೇತಿಗಳು ಸಿಗದೆ ಕೇವಲ ಘಟಕ, ಘಟಕ ವೆಚ್ಚ ಎಂಬ ನೀತಿಯಿಂದಾಗಿ ಯಾವುದೇ ಯೋಜನೆಯು ನಮ್ಮ ಸಮುದಾಯದಲ್ಲಿ ಪ್ರಗತಿ ಕಾಣದೆ ಶೂನ್ಯವಾಗಿದೆ. ಉದಾಹರಣೆಗೆ 2000ದ ಇಸವಿಯಲ್ಲಿ ಉಡುಪಿ ಮತ್ತು ದಕ್ಷಿಣಕನ್ನಡ ಜಿಲ್ಲೆಗೆ ಸ್ವ ಉದ್ಯೋಗಕ್ಕಾಗಿ ಸುಮಾರು ಮೂರು ಕೋಟಿಗೂ ಅಧಿಕ ಮೊತ್ತ ಖರ್ಚು ಮಾಡಿದರೂ ಸಹ ಒಂದೇ ಒಂದು ಸ್ವ ಉದ್ಯೋಗ ಆರಂಭಿಸಿದ ಜನರು ಇಲ್ಲದೇ ಇರುವುದು ವಿಷಾದನೀಯ."
(2012: ಪು.ಸಂ 31 ಮತ್ತು 32)

ಒಟ್ಟಿನಲ್ಲಿ ಬುಡಕಟ್ಟು ಸಮುದಾಯಗಳಿಗೆ ಸ್ವ ಉದ್ಯೋಗ ತರಬೇತಿಯನ್ನು ನೀಡುವ ಮೊದಲು ಸಮುದಾಯಗಳೊಂದಿಗೆ ಪರಿಣಾಮಕಾರಿಯಾದ ಚರ್ಚೆಯನ್ನು ನಡೆಸದೇ ಇರುವ ಕೊರತೆ ಕಾಣುತ್ತದೆ.

## ಕೋಷ್ಟಕ ಸಂಖ್ಯೆ 4.18

## ಆರ್ಥಿಕ ಮುಗ್ಗಟ್ಟುಗಳ ಸಂದರ್ಭದಲ್ಲಿ ಬುಡಕಟ್ಟು ಮಹಿಳೆಯರು ಸಂಪರ್ಕಿಸುವ ವ್ಯಕ್ತಿಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು ಸಂಖ್ಯೆ | ಶೇಕಡವಾರು |
|---|---|---|---|
| 1 | ಮನೆಯವರು | 78 | 26.00 |
| 2 | ಬಂಧುಗಳು | 12 | 4.00 |
| 3 | ಗಂಡ | 195 | 65.00 |
| 4 | ಸ್ನೇಹಿತರು | 02 | 0.66 |
| 5 | ನೆರೆಹೊರೆಯವರು | 07 | 2.34 |
| 6 | ಬಂಧುಗಳಂದ | 04 | 1.34 |
| 7 | ಗಂಡು ಮಕ್ಕಳಲ್ಲಿ | 02 | 0.66 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆರ 4.18 ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 78(26%) ಮಹಿಳೆಯರು ತಮ್ಮ ಮನೆಯ ಸದಸ್ಯರಲ್ಲಿ ಆರ್ಥಿಕ ಮುಗ್ಗಟ್ಟು ಆದಾಗ ಚರ್ಚಿಸಿ ಪರಿಹರಿಸಿಕೊಳ್ಳುತ್ತಾರೆ. 12(4%) ಮಹಿಳೆಯರು ಬಂಧುಗಳಲ್ಲಿ, 195(65%) ಮಹಿಳೆಯರು ತಮ್ಮ ಗಂಡಂದಿರಲ್ಲಿ, ಎರಡು (0.66%)ಮಹಿಳೆಯರು ಸ್ನೇಹಿತರಲ್ಲಿ, ಏಳು (2.34%) ಮಹಿಳೆಯರು ನೆರೆಹೊರೆಯವರಲ್ಲಿ, ನಾಲ್ಕು (1.34%) ಮಹಿಳೆಯರು ಬಂಧುಗಳಲ್ಲಿ, ಹಾಗೂ ಎರಡು(0.66%) ಮಹಿಳೆಯರು ತಮ್ಮ ಗಂಡು ಮಕ್ಕಳಲ್ಲಿ ತಮಗೆ ಆರ್ಥಿಕ ಮುಗ್ಗಟ್ಟು ಉಂಟಾದಾಗ ಚರ್ಚಿಸಿ ಪರಿಹರಿಸಿಕೊಳ್ಳುತ್ತಾರೆ ಎಂಬುದು ಕೋಷ್ಟಕದಿಂದ ತಿಳಿದುಬರುತ್ತದೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ಗಂಡಂದಿರಲ್ಲಿ ತಮಗೆ ಆರ್ಥಿಕ ಸಮಸ್ಯೆಯಾದಾಗ ಚರ್ಚಿಸುವುದು ಗಮನಿಸಬಹುದಾಗಿದೆ.

ಕೋಷ್ಟಕದ ಆಧಾರದಿಂದ ಬುಡಕಟ್ಟು ಕುಟುಂಬಗಳಲ್ಲಿ ಪತಿ ಪತ್ನಿಯರು ಆರ್ಥಿಕ ಮುಗ್ಗಟ್ಟಾದಾಗ ಪರಸ್ಪರ ಚರ್ಚಿಸುತ್ತಾರೆ. ಹಾಗೂ ಸಮಸ್ಯೆಗಳಿಗೆ ಪರಿಹಾರಗಳನ್ನು ಜೊತೆಯಾಗಿ ಕಂಡುಕೊಳ್ಳುತ್ತಾರೆ. ಇದರಿಂದ ಕುಟುಂಬಗಳಲ್ಲಿ ಸಮಾನತೆಯ ಮೌಲ್ಯದ ಭದ್ರ ಅಡಿಪಾಯವನ್ನು ಗಮನಿಸಬಹುದಾಗಿದೆ.

## ಕೋಷ್ಟಕ ಸಂಖ್ಯೆ 4.19

## ಬುಡಕಟ್ಟು ಮಹಿಳೆ ಹಾಗೂ ಸಂಪಾದನೆ ಹಣದ ವಿನಿಯೋಗ

| ಕ್ರ.ಸಂ | ಅಭಿಪ್ರಾಯ | ಒಟ್ಟು ಸಂಖ್ಯೆ | ಶೇಕಡವಾರು |
|---|---|---|---|
| 1 | ಮನೆ ದೈನಂದಿನ ಖರ್ಚು | 210 | 70.00 |
| 2 | ಮಕ್ಕಳ ವಿದ್ಯಾಭ್ಯಾಸ | 53 | 17.67 |
| 3 | ಉಳಿತಾಯ ಖಾತೆ | 09 | 3.00 |
| 4 | ಬಟ್ಟೆ ಬರೆ | - | - |
| 5 | ಕೆಟ್ಟ ಹವ್ಯಾಸಗಳಿಗೆ | 04 | 1.33 |
| 6 | ಅನ್ವಯಿಸುವುದಿಲ್ಲ | 24 | 8.00 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 4.19 ರಲ್ಲಿ ಒಟ್ಟು 276(92%) ಮಹಿಳೆಯರು ದುಡಿಯುತ್ತಿದ್ದು 210(70%) ಮಹಿಳೆಯರು ತಮ್ಮ ಸಂಪಾದನೆಯ ಹಣ ಹೆಚ್ಚಾಗಿ ಮನೆಯ ದೈನಂದಿನ ಖರ್ಚಿಗೆ, 53(17.67%) ಮಹಿಳೆಯರ ಸಂಪಾದನೆ ಮಕ್ಕಳ ವಿದ್ಯಾಭ್ಯಾಸಕ್ಕೆ, ಒಂಭತ್ತು (3%) ಮಹಿಳೆಯರ ಸಂಪಾದನೆಯ ಹಣ ಉಳಿತಾಯ ಖಾತೆಗೆ, ನಾಲ್ಕು(1.33%) ಮಹಿಳೆಯರು ತಮ್ಮ ಕೆಟ್ಟ ಹವ್ಯಾಸಗಳಿಗೆ, (ಗುಟ್ಕಾ, ಹೊಗೆಸೊಪ್ಪು) ಸಂಪಾದನೆಯ ಹಣದ ಹೆಚ್ಚಿನ ಪಾಲು ವಿನಿಯೋಗವಾಗುತ್ತದೆ ಎಂದಿದ್ದಾರೆ.

ಜಗದೀಶಕುಮಾರ್ ಚ.ನಾಯಿಕ ಅವರು ಬುಡಕಟ್ಟು ಮಹಿಳಾ ಅಭಿವೃದ್ಧಿಯಲ್ಲಿ ಸ್ವಸಹಾಯ ಸಂಘಗಳ ಪಾತ್ರದ ಕುರಿತಾದ ತನ್ನ ಅಧ್ಯಯನದಲ್ಲಿ ಬುಡಕಟ್ಟು ಸ್ತ್ರೀಯರ ಆರ್ಥಿಕ ಸಂಕಷ್ಟಗಳನ್ನು ಚಿತ್ರಿಸುತ್ತ – "ಬುಡಕಟ್ಟು ಮಹಿಳೆಯರು ತಮ್ಮ ಸಾಂಪ್ರದಾಯಿಕ ಕಸುಬಿನಿಂದ ಬಂದ ಆದಾಯ ತಮ್ಮ ಕುಟುಂಬ ನಿರ್ವಹಣೆಗೆ ತೊಡಗಿಸುವುದರಿಂದ ಇವರಲ್ಲಿ ಕೂಡಿಡುವ ಕ್ರಮ ಇಲ್ಲ. ಹೀಗಿದ್ದಾಗ ಸ್ವಸಹಾಯದ ಕಲ್ಪನೆ ಹೇಗೆ ಮೂಡುತ್ತದೆ? ಮೂಲಭೂತವಾಗಿ ಇಂದಿನ ಸಂದರ್ಭದಲ್ಲಿ ಅರಣ್ಯದಿಂದ ಪರಕೀಯ ಪ್ರಜ್ಞೆ ಎದುರುಗೊಳ್ಳುವಂತಹ ಬುಡಕಟ್ಟು ಸಮುದಾಯದ ಮಹಿಳೆಯರು ಉತ್ಪಾದನಾ ಚಟುವಟಿಕೆಗಳಿಂದ ಅತಂತ್ರ ಸ್ಥಿತಿಯಲ್ಲಿರುವಾಗ ಅರೆ ಉದ್ಯೋಗಿಗಳೇ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ದುಡಿಮೆಗೆ ಅವಕಾಶವಿಲ್ಲದ ಈ ಸಂದರ್ಭದಲ್ಲಿ ಬದುಕು ನಿರ್ವಹಿಸುವುದೇ ಕಷ್ಟವಾದಾಗ ಉಳಿತಾಯದ ಕಲ್ಪನೆ

ಗೋಚರಿಸುವುದಿಲ್ಲ." (2006: 63 ರಿಂದ 67) ಎನ್ನುವ ಈ ಅಭಿಪ್ರಾಯದಲ್ಲಿ ಗಳಿಸಿದ ಆದಾಯವೆಲ್ಲವೂ ಕುಟುಂಬ ನಿರ್ವಹಣೆಯ ಪಾಲಾದಾಗ ಅಥವಾ ಆದಾಯದಿಂದ ಮೂಲಭೂತ ಅವಶ್ಯಕತೆಗಳನ್ನೇ ಪೂರೈಸಲು ಅಸಾಧ್ಯವಾದಾಗ ಆರ್ಥಿಕ ಸಶಕ್ತೀಕರಣ ಎನ್ನುವ ಪರಿಕಲ್ಪನೆಯನ್ನೇ ಬುಡಕಟ್ಟು ಮಹಿಳೆಯರಲ್ಲಿ ಮೂಡಿಸುವುದು ಸದ್ಯದ ಪರಿಸ್ಥಿತಿಯಲ್ಲಿ ಕಷ್ಟವಿದೆ ಎನ್ನುವುದನ್ನು ಅಧ್ಯಯನದಿಂದ ಅರ್ಥ ಮಾಡಿಕೊಳ್ಳಬಹುದಾಗಿದೆ.

ಕಾಡು ಮತ್ತು ಕಾಡಿನ ಅಂಚಿನಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳು ಹೆಚ್ಚಿನ ಪ್ರಮಾಣದಲ್ಲಿ ಬಡತನದಲ್ಲಿ ಬದುಕು ಸಾಗಿಸುತ್ತಿವೆ. ಪ್ಲಾಸ್ಟಿಕ್ ಯುಗದ ಪ್ರಾರಂಭದ ನಂತರ ಇವರ ಕುಲಕಸುಬಿಗೆ ತೊಂದರೆ ಬಂದಿರುವುದಂತೂ ನಿಜ. ಅರಣ್ಯ ಸಂಪತ್ತಿನ ಮೇಲೆ ಆಧುನೀಕರಣದ ಪ್ರಭಾವದಿಂದಾಗಿ ಬುಡಕಟ್ಟು ಸಂಘ ಜೀವನಕ್ಕೂ ತೊಂದರೆಯಾಗಿ ಉಳಲು ಭೂಮಿಯಿಲ್ಲದೆ ಜೀವನ ಕಷ್ಟವಾದಾಗ ಭೂಮಾಲೀಕರ ತೋಟಗದ್ದೆಗಳಲ್ಲಿ ದಿನಕೂಲಿ ಕಾರ್ಮಿಕರಾಗಿ ಕೆಲಸ ಮಾಡುವ ಅನಿವಾರ್ಯತೆ ಬಂದೊದಗಿತು. ಕೃಷಿ ಕ್ಷೇತ್ರದಲ್ಲಿ ಯಂತ್ರಗಳ ಬಳಕೆಯಾದಾಗ, ಕೂಲಿವೃತ್ತಿಗೂ ಅಡಚಣೆಯುಂಟಾಗಿ ದಕ್ಷಿಣ ಕನ್ನಡದಲ್ಲಿ ಅನೇಕ ಬುಡಕಟ್ಟು ಮಹಿಳೆಯರು ಜೀವನ ನಿರ್ವಹಣೆಗೆ ಬೀಡಿಯೆಂಬ ಅರೆಕಾಲಿಕ ಉದ್ಯೋಗದಲ್ಲಿ ತೊಡಗಿಸಿಕೊಂಡಿರುವ ಅಂಶ ಪ್ರಸ್ತುತ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಉತ್ಪಾದನಾ ಚಟುವಟಿಕೆಗಳಿಂದ ದೂರವಿರುವ ಮಹಿಳೆಯರು ಬದುಕು ನಿರ್ವಹಿಸುವುದೇ ಕಷ್ಟವಾದಾಗ ಉಳಿತಾಯವೂ ಸಹ ಕಷ್ಟ ಸಾಧ್ಯ.

ಒಟ್ಟು ಕುಟುಂಬದ ವಾರ್ಷಿಕ ಆದಾಯವೂ ಸರಾಸರಿ 65,400 ಇರುವುದು ಅಧ್ಯಯನದಿಂದ ದೃಢಪಟ್ಟಿದೆ.

ಹೆಚ್ಚಿನ ಬುಡಕಟ್ಟು ಮಹಿಳೆಯರಲ್ಲಿ ಸ್ವಂತಿಕೆಯಲ್ಲಿ ಭೂಮಿ ಇಲ್ಲದಿರುವುದು, ಅತ್ಯಂತ ಹೆಚ್ಚಿನ ಬುಡಕಟ್ಟು ಕುಟುಂಬಗಳಲ್ಲಿ ಸ್ವಂತ ನೀರಿನ ವ್ಯವಸ್ಥೆಯ ಕೊರತೆ ಇರುವುದರಿಂದ, ಅತ್ಯಲ್ಪ ಕುಟುಂಬಗಳು ತೆಂಗು, ತರಕಾರಿ, ಅಡಿಕೆ, ಭತ್ತ ಮತ್ತು ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡಿರುವುದನ್ನು ಅಧ್ಯಯನದಿಂದ ಗಮನಿಸ ಬಹುದಾಗಿದೆ.

ಕೇವಲ 26 ಕುಟುಂಬಗಳು ಮಾತ್ರ ಬುಟ್ಟಿ ತಯಾರಿಕೆ, ಮಲ್ಲಿಗೆ, ಹೈನುಗಾರಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು, ಈ ಕುರಿತಂತೆ ಮಹಿಳೆಯರಲ್ಲಿ ಆರ್ಥಿಕ ಅಭಿವೃದ್ಧಿಯ ಯೋಚನೆಗಳಲ್ಲಿ ಕೊರತೆ ಇರುವುದನ್ನು ಅಧ್ಯಯನದಿಂದ ಗಮನಿಸಬಹುದಾಗಿದೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಸ್ವಸಹಾಯ ಸಂಘಗಳಲ್ಲಿ ಸದಸ್ಯತ್ವವನ್ನು ಹೊಂದಿದ್ದು ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಆರ್ಥಿಕ ಸಲಹೆಗಳನ್ನು ನೀಡುತ್ತಾರೆ.

ಹೆಚ್ಚಿನ ಬುಡಕಟ್ಟು ಮಹಿಳೆಯರು ಜೀವನ ನಿರ್ವಹಣೆಗೆ ಸ್ವಸಹಾಯ ಸಂಘಗಳಿಂದ ಸಾಲ ಪಡೆದುಕೊಳ್ಳುವುದನ್ನು ರೂಢಿಮಾಡಿಕೊಂಡಿದ್ದು ಇದು ಹೆಚ್ಚಾಗಿ ಅನುತ್ಪಾದಕ ಉದ್ದೇಶಗಳಿಗೆ ಮಾತ್ರ ಸೀಮಿತವಾಗಿರುವುದೆಂದು ಗಮನಿಸಲಾಗಿದೆ.

ಅತ್ಯಲ್ಪ ಆದಾಯದ ಗಳಿಕೆಯೊಂದಿಗೂ ಹೆಚ್ಚಿನ ಮಹಿಳೆಯರು ಸ್ವಸಹಾಯ ಸಂಘಗಳ ಮೂಲಕ ಉಳಿತಾಯ ರೂಢಿಯಲ್ಲಿ ತೊಡಗಿಸಿಕೊಂಡಿರುತ್ತಾರೆ.

ಒಟ್ಟಿನಲ್ಲಿ ದಕ್ಷಿಣ ಕನ್ನಡದಲ್ಲಿ ಬುಡಕಟ್ಟು ಮಹಿಳೆಯರು ತಮ್ಮ ಬದುಕಿಗಾಗಿ ಬೀಡಿಯ ಕಸುಬನ್ನು ಅವಲಂಬಿಸಿದ್ದು, ಅರೆ ಉದ್ಯೋಗವಾದುದರಿಂದ ಬರುವ ಹೆಚ್ಚಿನ ಪಾಲಿನ ಗಳಿಕೆಯು ಮನೆಯ ದೈನಂದಿನ ಖರ್ಚಿಗೆ ವಿನಿಯೋಗವಾಗುತ್ತಿದೆ. ಕೌಶಲ್ಯಾಧಾರಿತ ಮತ್ತು ಹೆಚ್ಚು ಆದಾಯ ಗಳಿಕೆಯ ಉದ್ಯೋಗದ ಕೊರತೆಯು ಮಹಿಳೆಯರಲ್ಲಿದೆ ಎನ್ನುವುದು ಅಧ್ಯಯನದಿಂದ ದೃಢಪಟ್ಟಿದೆ.

ಮುಂದಿನ ಅಧ್ಯಾಯ ಐದರಲ್ಲಿ ಬುಡಕಟ್ಟು ಮಹಿಳೆಯರ ಆರ್ಥಿಕ ಪರಿಸ್ಥಿತಿ ಎಷ್ಟರ ಮಟ್ಟಿಗೆ ಬುಡಕಟ್ಟು ಮಹಿಳೆಯನ್ನು ಸಬಲಳನ್ನಾಗಿ ಮಾಡುವಲ್ಲಿ ಪೂರಕವಾಗಿದೆ ಎನ್ನುವುದರ ಚಿತ್ರಣವಿದೆ.

# ಅಧ್ಯಾಯ – ಐದು

# ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಶಕ್ತೀಕರಣ ಪ್ರಕ್ರಿಯೆ

ಈ ಅಧ್ಯಾಯದಲ್ಲಿ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಶಕ್ತೀಕರಣ ಪ್ರಕ್ರಿಯೆಯನ್ನು ಗಮನಿಸಬಹುದು. ಸಶಕ್ತೀಕರಣ ಪ್ರಕ್ರಿಯೆಯ ಮಾನದಂಡಗಳಾಗಿ, ಬುಡಕಟ್ಟು ಮಹಿಳೆಯರು ಕುಟುಂಬದಲ್ಲಿ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ, ಮನೆಯ ಹೊರಗಿನ ಚಟುವಟಿಕೆಗಳಲ್ಲಿ ಸ್ವ ಇಚ್ಛೆಯಿಂದ ಭಾಗವಹಿಸುವಿಕೆಯ ಕುರಿತು, ತಾವು ದುಡಿದ ಹಣದ ವಿನಿಯೋಗದ ಅಧಿಕಾರ, ದುಡಿದ ಹಣದಲ್ಲಿ ಖರೀದಿಸುವ ಅಧಿಕಾರ, ಸ್ವಸಹಾಯ ಸಂಘಗಳಲ್ಲಿ ಭಾಗವಹಿಸುವಿಕೆ, ಪಂಚಾಯತ್ ಸದಸ್ಯರಾಗಿ ಬುಡಕಟ್ಟು ಮಹಿಳೆಯರ ರಾಜಕೀಯ ಭಾಗವಹಿಸುವಿಕೆ, ಇತ್ಯಾದಿಗಳನ್ನು ಅವಲೋಕಿಸಲಾಗಿದೆ. ಅಧ್ಯಯನದಲ್ಲಿ ಬುಡಕಟ್ಟು ಮಹಿಳೆಯರ ಸಶಕ್ತೀಕರಣ ಪ್ರಕ್ರಿಯೆಯನ್ನು ಅವಲೋಕಿಸುವುದಾದರೆ ವಿಭಿನ್ನ ರೀತಿಯ ಅಭಿಪ್ರಾಯಗಳನ್ನು ನೀಡಬಹುದಾಗಿದೆ. ಆರ್ಥಿಕವಾಗಿ ಅವರು ಸ್ವಾವಲಂಬಿಗಳಾದರೂ ಶಿಕ್ಷಣದ ಕೊರತೆ, ಕೌಶಲ್ಯದ ಕೊರತೆಯ ಪರಿಣಾಮವಾಗಿ ಅಲ್ಪ ಆದಾಯ ಗಳಿಕೆ ಹಾಗೂ ಎಲ್ಲ ಗಳಿಕೆಯೂ ಮನೆನಿರ್ವಹಣೆಗೆ ಸಲ್ಲುತ್ತದೆ. ಹಾಗೂ ಹೆಚ್ಚಿನ ಮಹಿಳೆಯರು ಮನೆಯ ಮುಖ್ಯ ಚಟುವಟಿಕೆಗಳಲ್ಲಿ, ನಿರ್ಧಾರ ತೆಗೆದುಕೊಳ್ಳುವಲ್ಲಿ ಮನೆಯ ಇತರರನ್ನು ಅವಲಂಬಿಸಿರುವುದು ಸ್ಪಷ್ಟವಾಗುತ್ತದೆ. ರಾಜಕೀಯದಲ್ಲಿಯೂ ಬುಡಕಟ್ಟು ಮಹಿಳೆಯರ ಭಾಗವಹಿಸುವಿಕೆಯ ಕೊರತೆಯನ್ನು ಅಧ್ಯಯನದಲ್ಲಿ ಕಾಣಬಹುದಾಗಿದೆ.

ಬುಡಕಟ್ಟು ಮಹಿಳೆ ಗಂಡಸಿನಂತೆಯೇ ದುಡಿಯುತ್ತಾಳೆ. ಎನ್ನುವ ಒಂದು ಕಾರಣಕ್ಕಾಗಿ ಅವಳನ್ನು ಸಶಕ್ತಳು ಎಂದು ಪರಿಗಣಿಸಲು ಸಾಧ್ಯವಾಗುವುದಿಲ್ಲ. ಸಾಮಾಜಿಕ, ರಾಜಕೀಯ, ಆರೋಗ್ಯದ ಅಂಶಗಳಲ್ಲಿ ಸಶಕ್ತತೆಯ ಕೊರತೆ ಇರುವುದನ್ನು ಅಧ್ಯಯನ ಸಾಬೀತುಪಡಿಸುತ್ತದೆ.

ಮಹಿಳಾ ಸಶಕ್ತೀಕರಣವೆಂದರೆ "ವೈಯಕ್ತಿಕ ಮಟ್ಟದಲ್ಲಿ ಮಹಿಳೆಯರನ್ನು ಸ್ವಾವಲಂಬನೆ, ಆತ್ಮ ವಿಶ್ವಾಸ, ನಿರ್ಧಾರ ಕೈಗೊಳ್ಳುವ ಹಾಗೂ ಆಯ್ಕೆಯ ಸ್ವಾತಂತ್ರ್ಯವಿರುವ ವ್ಯಕ್ತಿಯಾಗಿ ಹಾಗೂ ಸಾಮುದಾಯಿಕ ಮಟ್ಟದಲ್ಲಿ, ಲಿಂಗವ್ಯವಸ್ಥೆ ಮತ್ತು ಅಧಿಕಾರ ಸಂಬಂಧಗಳನ್ನು ಪ್ರಶ್ನಿಸಿ ಬದಲಾಯಿಸುವ, ಲಿಂಗ ತಾರತಮ್ಯಗಳನ್ನು ಹೋಗಲಾಡಿಸುವ ಮತ್ತು ಸಮಾನತೆಯ ಸಮಾಜವನ್ನು ಕಟ್ಟುವ ವ್ಯಕ್ತಿಯಾಗಿ ರೂಪಿಸುವ ಪ್ರಕ್ರಿಯೆ" ಎನ್ನುವ

ಸಬಲೀಕರಣದ ಪರಿಕಲ್ಪನೆಯ ಆಧಾರದೊಂದಿಗೆ ಸಂಬಂಧಿಸಿದ ವ್ಯತ್ಯಯಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ ಸಂಖ್ಯೆ 5.1**

**ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಕುಟುಂಬದಲ್ಲಿ ತೆಗೆದುಕೊಳ್ಳುವ ನಿರ್ಧಾರ ಹಾಗೂ ನಿರ್ಣಯಗಳ ಕುರಿತು ಅಭಿಪ್ರಾಯಗಳು**

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವತಃ | 66 | 22.00 |
| 2 | ಗಂಡ | 103 | 34.33 |
| 3 | ಜೊತೆಯಾಗಿ | 86 | 28.67 |
| 4 | ಅತ್ತೆ | 10 | 3.33 |
| 5 | ಮಾವ | 08 | 2.67 |
| 6 | ಎಲ್ಲಾ ಒಟ್ಟಾಗಿ | 19 | 6.34 |
| 7 | ಗಂಡು ಮಕ್ಕಳು | 08 | 2.66 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 5.1 ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 66(22%) ಮಹಿಳೆಯರು ಕುಟುಂಬದಲ್ಲಿ ಸ್ವತಃ ತಾವೇ ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವುದಾಗಿ ತಿಳಿಸಿದ್ದರೆ, ಅತಿ ಹೆಚ್ಚು ಅಂದರೆ 103(34.33%) ಮಹಿಳೆಯರು ತಮ್ಮ ಗಂಡಂದಿರು ಮುಖ್ಯ ಚಟುವಟಿಕೆಗಳಲ್ಲಿ ನಿರ್ಧಾರ ತೆಗೆದುಕೊಳ್ಳುವುದಾಗಿಯೂ, 86(28.67%) ಮಹಿಳೆಯರು ಪತಿ, ಪತ್ನಿ ಜೊತೆಯಾಗಿ ನಿರ್ಧಾರ ತೆಗೆದುಕೊಳ್ಳುವುದಾಗಿಯೂ, ಹಾಗೂ 10(3.33%)ಮಹಿಳೆಯರು ತಮ್ಮ ಅತ್ತೆಯಂದಿರು, ಎಂಟು(2.67%) ಮಾವಂದಿರು, ಹಾಗೂ 19(6.34%) ಮಹಿಳೆಯರು ಎಲ್ಲಾ ಒಟ್ಟಾಗಿ ನಿರ್ಧಾರ ತೆಗೆದುಕೊಳ್ಳುವುದಾಗಿಯೂ, 08(2.66%) ಮಹಿಳೆಯರು ಮನೆಯಲ್ಲಿ ಪ್ರಬುದ್ಧರಾದ ಗಂಡು ಮಕ್ಕಳು ಮನೆಯ ಮುಖ್ಯ ಚಟುವಟಿಕೆಯಲ್ಲಿ ನಿರ್ಧಾರ ತೆಗೆದುಕೊಳ್ಳುವುದಾಗಿ ಅಭಿಪ್ರಾಯ ಪಟ್ಟಿದ್ದಾರೆ.

ಕೋಷ್ಟಕದ ಆಧಾರದ ಪ್ರಕಾರ ಅರ್ಧಕ್ಕಿಂತ ಸ್ವಲ್ಪ ಹೆಚ್ಚು ಎಂದರೆ ಶೇ 57.01 ರಷ್ಟು ಮಹಿಳೆಯರು ಕುಟುಂಬದ ಇತರರೊಂದಿಗೆ ನಿರ್ಧಾರ ತೆಗೆದುಕೊಳ್ಳುತ್ತಾರಾದರೂ,

ಅರ್ಧಕ್ಕಿಂತ ಸ್ವಲ್ಪ ಕಡಿಮೆ ಎಂದರೆ 42.99% ಮಹಿಳೆಯರು ಮನೆಯ ಮುಖ್ಯ ಚಟುವಟಿಕೆಗಳಲ್ಲಿ ನಿರ್ಧಾರ ತೆಗೆದುಕೊಳ್ಳುವುದರಲ್ಲಿ, ಕುಟುಂಬದ ಇತರರನ್ನು, ಮುಖ್ಯವಾಗಿ ಗಂಡಸರನ್ನು ಅವಲಂಬಿಸಿರುವುದರಿಂದ ಪುರುಷರ ಅಧಿಕಾರದ ಲಕ್ಷಣಗಳನ್ನು ಇಲ್ಲಿ ಕಾಣಬಹುದಾಗಿದೆ.

ಯಾವ ಕುಟುಂಬಗಳಲ್ಲಿ ಗಂಡಸು ಮನೆಯ ಮುಖ್ಯ ಚಟುವಟಿಕೆಗಳಲ್ಲಿ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗಿಲ್ಲವೋ ಎಂದರೆ, ಮದ್ಯಪಾನದ ಚಟದಿಂದ ಕುಟುಂಬ ನಿರ್ವಹಣೆ ಮರೆತಾಗ ಮತ್ತು ವಿಧವೆಯಾಗಿದ್ದ ಸಂದರ್ಭಗಳಲ್ಲಿ ಬುಡಕಟ್ಟು ಮಹಿಳೆ ಪರಿಸ್ಥಿತಿಯ ಒತ್ತಡಗಳಿಂದಾಗಿ ಮನೆಯ ಒಟ್ಟು ಜವಾಬ್ದಾರಿ ವಹಿಸಿ ಕುಟುಂಬವನ್ನು ನಿರ್ವಹಿಸಿಕೊಂಡು ಹೋಗುವುದು ಅಧ್ಯಯನದಿಂದ ಗಮನಿಸಬಹುದಾಗಿದೆ.

ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರು 103(34.33%) ಮನೆಯ ಮುಖ್ಯ ನಿರ್ವಹಣೆ ನಿರ್ಧಾರಗಳಲ್ಲಿ ಪತಿಯಂದಿರೇ ಅಂತಿಮ ಎಂದಿರುವುದನ್ನು ಗಮನಿಸಿದರೆ ಯಾವ ಕುಟುಂಬಗಳಲ್ಲಿ ಮಹಿಳೆಯರಲ್ಲಿ ಕುಟುಂಬ ನಿರ್ವಹಣೆಯ ಕುರಿತಾದ ಲವಲವಿಕೆ ಇಲ್ಲವೋ, ಲೋಕಜ್ಞಾನದ ಕೊರತೆಯಿರುವುದೋ ಮತ್ತು ಹೆಚ್ಚಾಗಿ ಅನಕ್ಷರಸ್ಥರಾಗಿರುವ ಮಹಿಳೆಯರ ಕುಟುಂಬದಲ್ಲಿ ಗಂಡಸರು ಒಟ್ಟು ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾರೆಂದು ಗಮನಿಸಲಾಗಿದೆ. ಈ ರೀತಿಯ ಪುರುಷ ಪ್ರಧಾನ ಕುಟುಂಬಗಳಲ್ಲಿ ಕ್ಷೇತ್ರ ಕಾರ್ಯದ ಸಂದರ್ಶನ ವೇಳೆಯಲ್ಲೂ ಮಹಿಳೆಯರ ಬದಲಾಗಿ ಪುರುಷರು ಅಭಿಪ್ರಾಯ ಹಂಚಿಕೊಳ್ಳುವರೇ ಪತ್ನಿಗೆ ಏನೂ ತಿಳಿಯುವುದಿಲ್ಲ ಎಂದು ಅಭಿವ್ಯಕ್ತಪಡಿಸಿ, ಉತ್ತರಿಸಲು ಪ್ರಯತ್ನಿಸಿದ್ದಾರೆ. ಹಾಗೂ ಒಂದಷ್ಟು ಕುಟುಂಬಗಳಲ್ಲಿ 86(28.67%) ಒಟ್ಟು ಸಮಾಜದಲ್ಲಿ ಲಿಂಗ ಸಮಾನತೆಯ ವಾತಾವರಣ ಸೃಷ್ಟಿಯಾಗುತ್ತಿರುವಂತೆ ಬುಡಕಟ್ಟು ಕುಟುಂಬಗಳಲ್ಲೂ ದಂಪತಿಗಳೊಳಗೆ ಪರಸ್ಪರ ಸಮಾನತೆಯ ಮೌಲ್ಯದ ಅಂಶಗಳನ್ನು ಗುರುತಿಸಬಹುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದ ಕೊರಗ ಬುಡಕಟ್ಟು ಮಹಿಳೆಯರ ಕುರಿತಾದ ಅಧ್ಯಯನದಲ್ಲಿ ಎ.ವಿ ನಾವಡ ಅವರು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಬುಡಕಟ್ಟು ಸಮಾಜಕ್ಕೆ ಸೇರಿದ ಕೊರಗರು ಮಾತೃ ಮೂಲೀಯರು. ಆದರೆ ಇತ್ತೀಚಿನ ದಿನಗಳಲ್ಲಿ ಜಾತಿ ಸಮಾಜಕ್ಕೆ ಅವರ ಕುಟುಂಬ ರಚನೆ ತಿರುಗುತ್ತಿದ್ದು ಪಿತೃ ಮೂಲೀಯ ಕುಟುಂಬದ ಎಲ್ಲ ಚಹರೆಗಳು ಕಾಣುತ್ತಿವೆ. ಆದರೂ ಮನೆಯಲ್ಲಿ ನಿರ್ಣಾಯಕ ಪಾತ್ರ ವಹಿಸುವವಳು ಹೆಣ್ಣು. ಕುಟುಂಬದಲ್ಲಿ ಹೆಣ್ಣಿನ ಮಾತಿಗೆ ಬೆಲೆ

ಸಲ್ಲುತ್ತದೆ. ಮನೆಯ ದೈನಂದಿನ ಕೆಲಸ ಕಾರ್ಯಗಳಲ್ಲಿ ಗಂಡಸರು ತಲೆಹಾಕುವುದಿಲ್ಲ. ಕುಟುಂಬದೊಳಗೆ ಸಮಸ್ಯೆ ಬಂದಾಗ ನಡೆಯುವ ಮಾತುಕತೆಗಳಲ್ಲಿ ಮಹಿಳೆಯರು ಮುಖ್ಯ ಪಾತ್ರವಹಿಸುತ್ತಾರೆ. ವ್ಯವಹಾರದಲ್ಲಿ ಕೊರಗ ಮಹಿಳೆಯರು ಹೆಚ್ಚು ದಿಟ್ಟೆಯಾಗಿರುತ್ತಾರೆ". (2013: ಪು.ಸಂ 312)

ಒಟ್ಟಿನಲ್ಲಿ ಕುಟುಂಬದಲ್ಲಿ ಮುಖ್ಯ ಚಟುವಟಿಕೆಗಳ ಕುರಿತು ನಿರ್ಧಾರಗಳನ್ನು ತೆಗೆದುಕೊಳ್ಳುವುದು ಕುಟುಂಬದ ಸಾಮಾಜಿಕ ಪರಿಸ್ಥಿತಿಯನ್ನು ಅವಲಂಬಿಸಿದೆ.

## ಕೋಷ್ಟಕ ಸಂಖ್ಯೆ 5.2

## ಸಾರ್ವಜನಿಕ ರಂಗದಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಕುರಿತು ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವ ಇಚ್ಛೆಯಿಂದ ಭಾಗವಹಿಸುವ ಸ್ವಾತಂತ್ರ್ಯ | 217 | 72.34 |
| 2 | ಸ್ವ ಇಚ್ಛೆಯಿಂದ ಭಾಗವಹಿಸಲು ಸ್ವಾತಂತ್ರ್ಯವಿಲ್ಲ | 83 | 27.66 |
|  | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 5.2 ರಲ್ಲಿ ಬುಡಕಟ್ಟು ಮಹಿಳೆಯರು ತಮ್ಮ ಹೊರಗಿನ ಚಟುವಟಿಕೆಯಲ್ಲಿ ತಮ್ಮ ಸ್ವ ಇಚ್ಛೆಯಿಂದ ಭಾಗವಹಿಸುತ್ತಾರೆಯೇ? ಎಂಬ ಅಂಶಕ್ಕೆ ಪ್ರತಿಕ್ರಯಿಸಿದ್ದಾರೆ.

ಒಟ್ಟು 300(100%) ಮಹಿಳೆಯರಲ್ಲಿ ಅತಿ ಹೆಚ್ಚಿನ ಅಂದರೆ 217 (72.34%) ಬುಡಕಟ್ಟು ಮಹಿಳೆಯರು ತಮ್ಮ ಹೊರಗಿನ ಚಟುವಟಿಕೆಗಳಿಗೆ ತಮ್ಮ ಪತಿಯಂದಿರ ಅನುಮತಿ ಬೇಕಾಗಿಲ್ಲ. ಎಂದರೆ 83(27.66%) ಮಹಿಳೆಯರು ತಾವು ಹೊರಗಿನ ಚಟುವಟಿಕೆಗಳಲ್ಲಿ ಭಾಗವಹಿಸಲು ಪತಿಯಂದಿರ ಅನುಮತಿ ಅಗತ್ಯವಿದೆ ಎಂದಿದ್ದಾರೆ.

ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚಿನವರು ಸ್ವಸಹಾಯ ಸಂಘಗಳಲ್ಲಿ ಸದಸ್ಯರಾಗಿದ್ದು ವಾರಕ್ಕೊಮ್ಮೆ ಅವುಗಳ ಸಭೆಗಳಲ್ಲಿ ಭಾಗವಹಿಸುತ್ತಾರೆ. ಇದರೊಂದಿಗೆ

ಪಂಚಾಯತ್‌ಗಳಿಗೆ ಭೇಟಿ ಕೊಡುವುದು, ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗಿಯಾಗುವುದು, ಮನೆಗೆ ಅಗತ್ಯವಿರುವ ವಸ್ತುಗಳನ್ನು ಖರೀದಿಸಲು ಹತ್ತಿರದ ಪೇಟೆಗೆ ಹೋಗುವುದು ಇತ್ಯಾದಿಗಳಲ್ಲಿ ತೊಡಗಿದ್ದಾರೆ. ಈ ಎಲ್ಲಾ ಸಂಚಾರಗಳಿಗೆ ತಮ್ಮ ಪತಿಯಂದಿರ ಅಪ್ಪಣೆ ಬೇಕಾಗಿಲ್ಲ ಎನ್ನುವುದು ಬುಡಕಟ್ಟು ಮಹಿಳೆಯರ ಅಭಿಮತವಾಗಿದೆ.

ಜೆ.ಎಚ್.ಹಟ್ಟನ್ (1921) ಡಿ.ಎನ್.ಮುಜಮ್‌ದಾರ್ (1973) ಮುಂತಾದವರ ಪ್ರಕಾರ ಮುಖ್ಯವಾಹಿನಿಯಲ್ಲಿರುವ ಇತರ ಮಹಿಳೆಯರಿಗಿಂತ ಸಾಮಾಜಿಕ ಚಟುವಟಿಕೆಗಳಲ್ಲಿ ಬುಡಕಟ್ಟು ಮಹಿಳೆಯರು ಹೆಚ್ಚು ಸ್ವತಂತ್ರರಾಗಿದ್ದಾರೆ ಎಂಬ ಅಂಶವನ್ನು ಇಲ್ಲಿ ಅವಲೋಕಿಸಬಹುದು.

ಮುಕ್ತ ಸಂಚಾರವು ಸಬಲೀಕರಣದ ಮಾನದಂಡಗಳಲ್ಲಿ ಬಹಳ ಮುಖ್ಯವಾದುದು. ಈ ಮಾನದಂಡವು ಬುಡಕಟ್ಟು ಮಹಿಳೆಯ ವೈಯಕ್ತಿಕ ಹಾಗೂ ಕುಟುಂಬಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಅತ್ಯಂತ ಹೆಚ್ಚು ಬುಡಕಟ್ಟು ಮಹಿಳೆಯರು ಈ ಮುಕ್ತ ಸಂಚಾರಕ್ಕೆ ತಮ್ಮ ಪತಿಯಂದಿರ ಅನುಮತಿ ಬೇಕಾಗಿಲ್ಲ ಎಂದಿರುವುದನ್ನು ವಿಶ್ಲೇಷಿಸಿದರೆ, ಬುಡಕಟ್ಟು ಕುಟುಂಬದಲ್ಲಿ ಸಮಾನತೆಯ ಮೌಲ್ಯವನ್ನು ಗಮನಿಸಬಹುದಾಗಿದೆ.

ಬುಡಕಟ್ಟು ಮಹಿಳೆಯು ಪುರುಷನೊಂದಿಗೆ ಸಮಾನವಾಗಿ ಎಲ್ಲಾ ಚಟುವಟಿಕೆಗಳಲ್ಲೂ ಪಾಲುದಾರಳಾಗಿದ್ದಾಳೆ. ಪುರುಷರಿಗೆ ಸಮಾನವಾದ ಘನತೆಯನ್ನು ಹೊಂದಿದ್ದರೂ ಒಟ್ಟಾರೆ ಬುಡಕಟ್ಟು ಮಹಿಳೆಯರ ಸ್ಥಾನಮಾನಗಳನ್ನು ಗುರುತಿಸಲು ಸಮುದಾಯದ ಜನಸಂಖ್ಯೆ, ಲಿಂಗಾನುಪಾತ, ಶಿಕ್ಷಣ, ಉದ್ಯೋಗ, ಆರೋಗ್ಯಮಟ್ಟ, ಅರಿವು, ಗಳಿಕೆಯ ಮೇಲಿರುವ ಹಕ್ಕು, ರಾಜಕೀಯ ಭಾಗವಹಿಸುವಿಕೆ ಮುಂತಾದ ಮಾನದಂಡಗಳ ವಿಶ್ಲೇಷಣೆಯೂ ಅಗತ್ಯವಾಗಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಬಹುದು. ಒಟ್ಟು ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿನ ಸ್ವತಂತ್ರತೆ ಕೇವಲ ಒಂದು ಅಂಶ ಮಾತ್ರ ಎಂದು ಗುರುತಿಸಬಹುದು.

ಕೋಷ್ಟಕ ಸಂಖ್ಯೆ 5.3ರಲ್ಲಿ ಬುಡಕಟ್ಟು ಮಹಿಳೆಯರು ಯಾವೆಲ್ಲ ಚಟುವಟಿಕೆಗಳಲ್ಲಿ ಸ್ವಇಚ್ಛೆಯಿಂದ ಭಾಗವಹಿಸುತ್ತಾರೆಂದು ತಿಳಿದುಕೊಳ್ಳಬಹುದಾಗಿದೆ.

## ಕೋಷ್ಟಕ ಸಂಖ್ಯೆ 5.3

## ಬುಡಕಟ್ಟು ಮಹಿಳೆಯರು ಸ್ವಇಚ್ಛೆಯಿಂದ ಭಾಗವಹಿಸುವ ವಿವಿಧ ಚಟುವಟಿಕೆಗಳ ವಿವರಗಳು

| ಕ್ರ.ಸಂ | ಚಟುವಟಿಕೆ | ಒಟ್ಟು | ಶೇಕಡವಾರು |
|---|---|---|---|
| 1 | ಸರ್ಕಾರಿ ಕಾರ್ಯಕ್ರಮಗಳು | 03 | 1.00 |
| 2 | ಪಂಚಾಯತ್ ಕಾರ್ಯಕ್ರಮಗಳು | 11 | 3.67 |
| 3 | ಸರ್ಕಾರಿ ಕಛೇರಿ ಭೇಟಿ | – | – |
| 4 | ಧಾರ್ಮಿಕ ಕಾರ್ಯಕ್ರಮಗಳು | 30 | 10.00 |
| 5 | ಸ್ವ ಸಹಾಯ ಸಭೆ | 149 | 49.67 |
| 6 | ಪೇಟೆ/ಪಟ್ಟಣ | 24 | 8.00 |
| 7 | ಅನ್ವಯಿಸುವುದಿಲ್ಲ | 83 | 27.66 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 5.3ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 217(72.34%) ಮಹಿಳೆಯರು ಅನೇಕ ಚಟುವಟಿಕೆಗಳಲ್ಲಿ ಸ್ವ ಇಚ್ಛೆಯಿಂದ ಭಾಗಹಿಸುತ್ತಿದ್ದು ಇದರಲ್ಲಿ ಮೂರು(1.00%) ಮಹಿಳೆಯರು ಸರ್ಕಾರಿ ಕಾರ್‍ಯಕ್ರಮಗಳಲ್ಲಿ, 11(3.67%) ಮಹಿಳೆಯರು ಪಂಚಾಯತ್ ಕಾರ್ಯಕ್ರಮಗಳಲ್ಲಿ, ಧಾರ್ಮಿಕ ಕಾರ್ಯಕ್ರಮಗಳಲ್ಲಿ 30(10.00%), ಮಹಿಳೆಯರು ಹಾಗೂ ಅತಿ ಹೆಚ್ಚಿನ 149(49.67%)ಮಹಿಳೆಯರು ಸ್ವ ಸಹಾಯ ಸಭೆಗಳಲ್ಲಿ ಭಾಗವಹಿಸಲು ತಮ್ಮ ಪತಿಯಂದಿರ ಅನುಮತಿ ಬೇಕಾಗಿಲ್ಲವೆಂದು ತಿಳಸಿದ್ದಾರೆ.

ಆದುದರಿಂದ ಬಹುತೇಕ ಮಹಿಳೆಯರು ವಿವಿಧ ಸಾಮಾಜಿಕ, ಧಾರ್ಮಿಕ, ರಾಜಕೀಯ ಚಟುವಟಿಕೆಗಳಲ್ಲಿ ಸ್ವ ಇಚ್ಛೆಯಿಂದ ಭಾಗವಹಿಸುವ ಅಂಶವು ಪ್ರಸ್ತುತ ಅಧ್ಯಯನದಲ್ಲಿ ದೃಢಪಟ್ಟಿದೆ.

ಒಟ್ಟು 300(100%) ರಲ್ಲಿ 226(75.34%) ಮಹಿಳೆಯರು ವಿವಿಧ ಸ್ವಸಹಾಯ ಗುಂಪುಗಳಲ್ಲಿ ಸದಸ್ಯೆಯರಾಗಿದ್ದು, ಅದರಲ್ಲಿ 149(49.67%) ಮಹಿಳೆಯರು ತಮ್ಮ ಸ್ವ ಇಚ್ಛೆಯಿಂದ ಸಭೆಗಳಲ್ಲಿ ಭಾಗವಹಿಸುವುದನ್ನು ಗಮನಿಸಿದರೆ ಮನೆಯ ಪುರುಷರಿಗೆ ಸ್ವಸಹಾಯ ಸಂಘಗಳ ಪ್ರಯೋಜನದ ಅರಿವಿದೆ ಎಂದು ಅರ್ಥೈಸಿಕೊಳ್ಳಬಹುದು. ಹಾಗೂ ಹೆಚ್ಚಿನ ಸ್ವಸಹಾಯ

ಸಂಘಗಳು ಮಹಿಳಾ ಸಬಲೀಕರಣದ ಉದ್ದೇಶದೊಂದಿಗೆ ಉದಯವಾಗಿರುವುದರಿಂದ ಇವುಗಳಲ್ಲಿ ಮಹಿಳೆಯರಿಗೆ ಮಾತ್ರ ಸದಸ್ಯತ್ವ ಹೊಂದುವ ಅವಕಾಶವಿದೆ ಎಂಬುವುದನ್ನು ಗಮನಿಸಬೇಕಾಗಿದೆ.

ಶೈಲಜಾ ಹಿರೇಮಠ ಅವರು ಬುಡಕಟ್ಟು ಮಹಿಳೆಯರ ಸಬಲೀಕರಣದ ಕುರಿತಾದ ತಮ್ಮ ಅಧ್ಯಯನದಲ್ಲಿ ಹೀಗೆ ಅಭಿಪ್ರಾಯ ಮಂಡಿಸಿದ್ದಾರೆ. "ಅನೇಕ ಮೇಲ್ಜಾತಿಯ ಮತ್ತು ಮಧ್ಯಮ ಜಾತಿಗೆ ಸೇರಿದ ಚಿಂತಕಿಯರೆಲ್ಲ ವಿಶೇಷವಾಗಿ ಗಾಯತ್ರಿ ನಾವಡ, ಸಂಧ್ಯಾ ರೆಡ್ಡಿ, ಆರ್ ಸುನಂದಮ್ಮ, ಶಾಲಿನಿ ರಘುನಾಥ, ಲೀಲಾ ಸಂಪಿಗೆ ಮೊದಲಾದವರು ಬುಡಕಟ್ಟು ಮಹಿಳೆಯರನ್ನು ಬಂಧನ ಮುಕ್ತರು, ಶೋಷಣಾ ರಹಿತರು ಎಂದೇ ಅರ್ಥೈಸುತ್ತಾರೆ. ಆಧುನಿಕ ಯುಗದಲ್ಲಿ ಉದ್ಯೋಗ ಮತ್ತಿತರ ಕಾರಣಗಳಿಂದ ಗೃಹದಿಂದ ಹೊರಪ್ರಪಂಚಕ್ಕೆ ಕಾಲಿಟ್ಟಿದ್ದಾರಾದರೂ ಇವರ ಜೊತೆಗೆ ಸೇರಿದ ಮಹಿಳೆಯರೆಲ್ಲ ಚರಿತ್ರೆ ಉದ್ದಕ್ಕೂ ಗೃಹಬಂಧನದಲ್ಲಿದ್ದವರು. ಹೀಗಾಗಿ ಮೇಲ್ಜಾತಿ, ಮೇಲ್ವರ್ಗದ ಮಹಿಳೆಯರಿಗೆಲ್ಲ ಹಾಗೂ ಮಧ್ಯಮವರ್ಗದ ಮಹಿಳೆಯರಿಗೆ ಮತ್ತು ಮಧ್ಯಮ ಜಾತಿಯ ಮಹಿಳೆಯರಿಗೆ ಮೊದಲಿನಿಂದಲೂ ಸಂಚಾರಿ ಜೀವನದ ಹಿನ್ನೆಲೆಯನ್ನು ಹೊಂದಿರುವ ಬುಡಕಟ್ಟು ಮಹಿಳೆಯರು ಸ್ವತಂತ್ರರು, ಸಬಲರು, ಎಂದೇ ತೋರಿರಬೇಕು. ಏನೂ ತಪ್ಪು ಮಾಡದ ಮಹಿಳೆ ಎನ್ನುವ ಕಾರಣಕ್ಕಾಗಿಯೇ ಗೃಹಬಂಧನಕ್ಕೊಳಗಾದ ಮೇಲ್ಜಾತಿ, ಮೇಲ್ವರ್ಗದ ಮಹಿಳೆಯರು, ಮಧ್ಯಮ ವರ್ಗದ ಮಹಿಳೆಯರು ಹೆಚ್ಚು ಶೋಷಿತರು ಎಂದು ತೋರಿರಬೇಕು.

ಇದಕ್ಕಾಗಿ ಗೃಹಬಂಧನದ ಕನ್ನಡಕವನ್ನು ತೆಗೆದು ಬುಡಕಟ್ಟು ಮಹಿಳೆಯರ ಜೊತೆ ಸಂಚರಿಸುತ್ತ ಅವರ ಬದುಕನ್ನು ಅವಲೋಕಿಸಿದಾಗ ಆಯಾ ಬುಡಕಟ್ಟುಗಳಲ್ಲಿನ ಲಿಂಗ ಸಂಬಂಧಿ ವ್ಯವಸ್ಥೆಗಳಲ್ಲಿನ ಶೋಷಣಾ ನೆಲೆಗಳು ಸ್ಪಷ್ಟಗೊಳ್ಳುತ್ತವೆ." (2008: ಪು.ಸಂ 272 ಮತ್ತು 273)

ಅಧ್ಯಯನದ ಆಧಾರದಿಂದ ಗಮನಿಸುವುದಾದರೆ ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಸ್ವ ಸಹಾಯ ಗುಂಪುಗಳಲ್ಲಿ ಮಾತ್ರವೇ ಸದಸ್ಯತ್ವವನ್ನು ಪಡೆದಿದ್ದಾರೆ. ಹಾಗೂ ಉಳಿದ ಚಟುವಟಿಕೆಗಳಲ್ಲಿ ಅವರ ಭಾಗವಹಿಸುವಿಕೆ ತೃಪ್ತಿಕರವಾಗಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಬಹುದಾಗಿದೆ.

ಈ ಮೇಲಿನ ವಿಶ್ಲೇಷಣೆಯಲ್ಲಿ, ಪರಿಸ್ಥಿತಿಯ ಒತ್ತಡಗಳು, ಸನ್ನಿವೇಶಗಳು, ಬುಡಕಟ್ಟು ಮಹಿಳೆಯರನ್ನು ಕೆಲವು ಅಂಶಗಳಲ್ಲಿ ಹೆಚ್ಚು ಸದೃಢ ಮತ್ತು ದುಡಿಯುವಂತೆ ಮಾಡಿವೆ ಎನ್ನುವುದನ್ನು ಅರಿತುಕೊಳ್ಳಬಹುದು.

## ಕೋಷ್ಟಕ ಸಂಖ್ಯೆ 5.4

## ಮನೆಯೊಳಗಿನ ಕೆಲಸ ನಿರ್ವಹಣೆಯ ಕುರಿತಾದ ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವತಃ | 87 | 29.00 |
| 2 | ಗಂಡ | – | – |
| 3 | ಮಹಿಳೆಯರು | 171 | 57.00 |
| 4 | ಹಿರಿಯ ಪುರುಷರು | – | – |
| 5 | ಎಲ್ಲರೂ ಹಂಚಿಕೊಂಡು | 42 | 14.00 |
| | ಒಟ್ಟು | 300 | 100 |

ಮೇಲಿನ ಕೋಷ್ಟಕ ಸಂಖ್ಯೆ 5.4 ರಲ್ಲಿ ಒಟ್ಟು 300 (100%) ಬುಡಕಟ್ಟು ಮಹಿಳೆಯರಲ್ಲಿ 87(29%) ಮಹಿಳೆಯರು ಮನೆಯೊಳಗಿನ ಎಲ್ಲಾ ಕೆಲಸವನ್ನು ತಾವೇ ಸ್ವತಃ ನಿಭಾಯಿಸುವುದೆಂದು, 171(57%) ಮಹಿಳೆಯರು ಮನೆಯೊಳಗಿನ ಎಲ್ಲಾ ಮಹಿಳೆಯರು ಸೇರಿ ಕೆಲಸ ನಿರ್ವಹಿಸುತ್ತೇವೆಂದು ಮತ್ತು 42(14%) ಮಹಿಳೆಯರು ತಾವೆಲ್ಲರೂ ಹಂಚಿಕೊಂಡು ಮನೆಕೆಲಸ ನಿರ್ವಹಿಸುವುದಾಗಿ ತಿಳಿಸಿದ್ದಾರೆ.

ಮೇಲಿನ ಕೋಷ್ಟಕದ ದತ್ತಾಂಶಗಳ ಆಧಾರದಿಂದ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರು ಮನೆಯೊಳಗಿನ ಕೆಲಸ ತಾವೇ ನಿರ್ವಹಿಸುತ್ತಾರೆ ಎಂದು ಅವಲೋಕಿಸಬಹುದು.

ಬುಡಕಟ್ಟು ಮನೆಯೊಳಗೆ ಸರಳ ಸಾಮಾನುಗಳು ಸಾಮಾಗ್ರಿಗಳಿವೆ. ಆಧುನೀಕರಣದ ಪ್ರಭಾವದಿಂದಾಗಿ ಅಲ್ಲಲ್ಲಿ ಕೆಲವು ಮನೆಗಳಲ್ಲಿ ಮಾತ್ರ ಅಡುಗೆಗೆ ಸಹಾಯಕವಾಗುವ ಗೃಹೋಪಯೋಗಿ ವಿದ್ಯುತ್ ಉಪಕರಣಗಳಾದ ಮಿಕ್ಸಿ, ಮತ್ತು ಅರೆಯುವ ಯಂತ್ರಗಳಿವೆ. ತೀರಾ ಕಡಿಮೆ ಸಂಖ್ಯೆಯ ಬುಡಕಟ್ಟು ಮನೆಗಳಲ್ಲಿ ಅಡುಗೆ ಅನಿಲ ಒಲೆಯನ್ನು ಅವಲಂಬಿಸಿದ್ದಾರೆ. ಉಳಿದಂತೆ ಬುಡಕಟ್ಟು ಮನೆಗಳಲ್ಲಿ ಹೆಚ್ಚಿನ ಸಾಮಾಗ್ರಿಗಳ ಶೇಖರಣೆ ಕಂಡುಬರುವುದಿಲ್ಲ. ಕಡಿಮೆ ಸಂಖ್ಯೆಯ ಪಾತ್ರೆ ಪರಿಕರಗಳು, ಅಗತ್ಯವಿರುವಷ್ಟೇ ಸರಳವಾದ ಕುಳಿತುಕೊಳ್ಳುವ ಆಸನಗಳು ಮಾತ್ರವೇ ಇವೆ. ಹೆಚ್ಚಿನ

ಬುಡಕಟ್ಟು ಮನೆಗಳಲ್ಲಿ ಕಡಿಮೆ ಸಂಖ್ಯೆಯ ಕೋಣೆಗಳಿರುವುದರಿಂದ ಬಟ್ಟೆಯನ್ನು ಜೋಡಿಸಿಡುವ ವ್ಯವಸ್ಥೆಯ ಕೊರತೆಯು ಕಂಡುಬಂದಿದೆ.

ಹೆಚ್ಚಿನ ಹಿಂದಿನ ಬುಡಕಟ್ಟು ಮನೆಗಳಲ್ಲಿ **'ದೆಂಗದ'** ವ್ಯವಸ್ಥೆಯಿದೆ. **'ದೆಂಗ'** ಎಂದರೆ ಹಿಂದಿನ ಕಾಲದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಮಣ್ಣಿನಿಂದಲೇ ಮನೆ ಕಟ್ಟುತ್ತಿದ್ದರು. ಹೆಚ್ಚಾಗಿ ಮನೆಗಳಿಗೆ ಹುಲ್ಲು (ಮುಳಿ ಹುಲ್ಲು) ಹೊಂದಿಸುತ್ತಿದ್ದರು. ಬೆರಳೆಣಿಕೆಯಷ್ಟು ಸ್ಥಿತಿವಂತರು ಮಾತ್ರ ಹಂಚಿನ ಮನೆ ಮಾಡುತ್ತಿದ್ದರು. ಗ್ರಾಮೀಣ ಪ್ರದೇಶದಲ್ಲಿ ಅಡಿಗೆಯನ್ನು ಮಾಡಲು ಕುಳಿತುಕೊಂಡೇ ಬೆಂಕಿಯುರಿಸುತ್ತಿದ್ದರು. ಜನರು ಹೆಚ್ಚಾಗಿ ಭತ್ತದ ಕೃಷಿಯನ್ನೆ ಅವಲಂಬಿಸಿಕೊಂಡಿದ್ದರು. ಒಂದು ಬೆಳೆಯಿಂದ ಮತ್ತೊಂದು ಬೆಳೆಗೆ ಅಥವಾ ಮತ್ತೊಂದು ವರ್ಷಕ್ಕೆ ಬೇಕಾಗುವ ಬೀಜವನ್ನು ಮುಡಿಕಟ್ಟಿ ಕಾಪಾಡುವುದು ಅಗತ್ಯವಾಗಿತ್ತು. ಸಾಕಷ್ಟು ಎತ್ತರದಲ್ಲಿ ಅಟ್ಟದ ಕೆಳಗಡೆ ಬಿದಿರು, ಅಡಿಕೆಯ ಸಲಕೆ, ಅಥವಾ ತೆಂಗಿನ ಅಡ್ಡಗಳಿಂದ ಗಟ್ಟಿಯಾದ ಅಟ್ಟಣಿಗೆಯನ್ನು ಮಾಡುತ್ತಿದ್ದರು.(ದೆಂಗ) ಇದಕ್ಕೆ ತುಳುವಿನಲ್ಲಿ 'ದೆಂಗ' ಎಂದು ಕರೆಯುತ್ತಿದ್ದರು.

ಇದಲ್ಲದೆ ಓಲೆಬೆಲ್ಲ ತಯಾರಿಸುವವರ ಬೆಲ್ಲದ ಕಟ್ಟುಗಳು ಎಲ್ಲವೂ ಇದರಲ್ಲಿ ಇಡಬಹುದಿತ್ತು. ಅಡಿಗೆಯ ಒಲೆಯ ಹೊಗೆ ಬೀಳುವುದರಿಂದ ವರ್ಷಗಟ್ಟಲೆ ಇವು ಹಾಳಾಗದೆ ಉಳಿಯುತ್ತಿದ್ದವು.

ಇದೇ ರೀತಿ ಜಾನುವಾರುಗಳ ಕೊಟ್ಟಿಗೆಯಲ್ಲಿಯೂ ಒಂದು ಕೋಣೆಯಲ್ಲಿ ಒಲೆ ರಚಿಸಿ ಮಳೆಗಾಲದಲ್ಲಿ ಬಿಸಿ ಮಾಡಿ ಜಾನುವಾರುಗಳಿಗೆ ಅಕ್ಕಚ್ಚು ಕೊಡುತ್ತಿದ್ದರು. ಇಲ್ಲಿಯೂ ದೆಂಗವನ್ನು ರಚಿಸಿ ಜಾನುವಾರುಗಳ ಆಹಾರ ಧಾನ್ಯಗಳನ್ನು ಹಾಳಾಗದಂತೆ ಕಾಪಾಡುತ್ತಿದ್ದರು.

ಈಗ ದೆಂಗಗಳು ಗ್ರಾಮೀಣ ಪ್ರದೇಶದಲ್ಲಿ ಮರೆಯಾಗುತ್ತಿವೆ. ಬಹುಸಂಖ್ಯಾತ ಬುಡಕಟ್ಟು ಮಹಿಳೆಯರು ಮನೆಯೊಳಗಿನ ಸ್ವಚ್ಛತೆಗೆ ಹೆಚ್ಚಿನ ಗಮನಕೊಟ್ಟಿರುವುದನ್ನು ಗಮನಿಸಲಾಗಿದೆ.

## ಕೋಷ್ಟಕ ಸಂಖ್ಯೆ 5.5

## ಮನೆಯೊಳಗಿನ ಅಡುಗೆ ಕೆಲಸದ ಕುರಿತಾಗಿ ಮಾಹಿತಿದಾರರ ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಅಡಿಗೆ ಕೆಲಸ ಒತ್ತಡವಿದೆ | 159 | 53.00 |
| 2 | ಅಡಿಗೆ ಕೆಲಸ ಒತ್ತಡವಿಲ್ಲ | 141 | 47.00 |
| | ಒಟ್ಟು | 300 | 100.00 |

ಒಟ್ಟು 300(100%) ಮಹಿಳೆಯರಲ್ಲಿ 159(53%) ಮಹಿಳೆಯರು ಅಡಿಗೆ ಕೆಲಸವನ್ನು ಸ್ವತಃ ಅವರೇ ಮಾಡಬೇಕು ಎನ್ನುವ ಒತ್ತಡವಿದೆ ಎಂದೂ, 141(47%) ಮಹಿಳೆಯರು ಅಡಿಗೆ ಕೆಲಸದ ಕುರಿತಂತೆ ತಮಗೆ ಒತ್ತಡವಿಲ್ಲ ಎಂದೂ ಪ್ರತಿಕ್ರಯಿಸಿದ್ದಾರೆ.

ಯಾವ ಕುಟುಂಬಗಳಲ್ಲಿ ಮಾಹಿತಿದಾರರೊಂದಿಗೆ ಗಂಡನ ಇತರ ಕುಟುಂಬ ಸದಸ್ಯರು ವಾಸಿಸುತ್ತಿದ್ದಾರೆಯೋ, ಅಂತಹ ಸಂದರ್ಭಗಳಲ್ಲಿ ಅಡಿಗೆ ಕೆಲಸ ಮಾಡುವಾಗ ಮಾಹಿತಿದಾರರೊಂದಿಗೆ ಇತರ ಸದಸ್ಯರು ಸಹಕರಿಸುವುದರಿಂದ ಹೆಚ್ಚಿನ ಒತ್ತಡಗಳಲ್ಲ ಎಂಬುವುದಾಗಿ ತಿಳಿಸಿದ್ದಾರೆ. ಆದರೆ ಆಧುನಿಕ ಸಣ್ಣ ಅಥವಾ ಪ್ರಾಥಮಿಕ ಕುಟುಂಬಗಳಲ್ಲಿ ಮಾಹಿತಿದಾರರೇ ಅಡಿಗೆ ಕೆಲಸ ಮಾಡಬೇಕಾಗಿರುವುದರಿಂದ ಅವರಿಗೆ ಹೆಚ್ಚಿನ ಒತ್ತಡವಿದೆ ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಸಮುದಾಯಗಳ ಈಗಿನ ಆಹಾರ ಪದ್ಧತಿಗೂ ನಾಗರಿಕತೆಯ ಪೂರ್ವದ ಅವರ ಜೀವನಕ್ಕೂ ಸಂಬಂಧಗಳಿರುವುದನ್ನು ಗಮನಿಸಬಹುದು. ಆದಿವಾಸಿಗಳು ಮೊದಲು ಬೆಟ್ಟ, ಗುಡ್ಡ, ಅರಣ್ಯ ಪ್ರದೇಶದಲ್ಲಿದ್ದುದರಿಂದ ಗೆಡ್ಡೆ ಗೆಣಸು ತಿನ್ನುತ್ತಿದ್ದು ನಾಗರಿಕತೆಯಿಂದಾಗಿ ಬೇಯಿಸಿದ ಆಹಾರ ತಿನ್ನುವುದು ರೂಢಿಯಾಗಿದ್ದು ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಆದಿವಾಸಿಗಳು ನಿಧಾನಕ್ಕೆ ಒಂದೇ ಕಡೆ ನೆಲೆ ನಿಂತು ಕೃಷಿ ಜೀವನದತ್ತ ವಾಲಿದರು.

ಕುಡುಬಿ ಸಮುದಾಯವು ಇತರ ಸಮುದಾಯಗಳಿಗಿಂತ ಭಿನ್ನವಾದ ಆಹಾರ ಪದ್ಧತಿಯನ್ನು ರೂಢಿಸಿಕೊಂಡಿದೆ. ಇವರು ಸಸ್ಯ ಹಾಗೂ ಮಾಂಸಾಹಾರಿ ಆಹಾರವನ್ನು ಸೇವಿಸಿದರೂ ಮಾಂಸಾಹಾರದಲ್ಲಿ ನಿಯಮವೊಂದನ್ನು ಪಾಲಿಸುತ್ತಾರೆ. ಕಾಡಿನಲ್ಲಿದ್ದುದರಿಂದ ಕಾಡಿನ ಪ್ರಾಣಿ, ಪಕ್ಷಿಗಳನ್ನು ಮಾತ್ರ ಆಹಾರ ರೂಪದಲ್ಲಿ ಉಪಯೋಗಿಸುತ್ತಾರೆ. ಸಾಕುಪ್ರಾಣಿಗಳ

ಮಾಂಸ ಇವರಿಗೆ ಇಂದಿಗೂ ನಿಷೇಧವಿದೆ. ಕಾಡುಹಂದಿ ಇವರ ಪ್ರಿಯವಾದ ಮಾಂಸಾಹಾರ. ಬೇಟೆಯಾಡಿದ ಕಾಡುಹಂದಿಯನ್ನು ಮಾಂಸಕ್ಕಾಗಿ ಉಪಯೋಗಿಸುವುದರೊಂದಿಗೆ ಇದನ್ನು ತಮ್ಮ ಆರಾಧನೆಯೊಂದಿಗೂ ಕುಡುಬಿಯರು ಜೋಡಿಸಿಕೊಂಡಿದ್ದಾರೆ. ಹೋಳಿ ಆಚರಣೆಯಲ್ಲಿ ಕುಡುಬಿ ಯುವಕರು ಕಾಡು ಹಂದಿ ಬೇಟೆಯಾಡಿ ವನ ಭೋಜನ ಎನ್ನುವ ಕಾರ್ಯಕ್ರಮದಲ್ಲಿ ಶ್ರೀದುರ್ಗಾ ಮಹಾಮ್ಮಾಯಿ ದೇವಿಗೆ ಹರಕೆ ಒಪ್ಪಿಸಿ ನಂತರ ಎಲ್ಲರೂ ಸೇರಿ ಮಾಂಸದೂಟ ಮಾಡುತ್ತಾರೆ. ಆದ್ದರಿಂದ ಇಲ್ಲಿ ಕಾಡುಹಂದಿ ಬೇಟೆಗೆ ಭಕ್ತಿಯ ಸ್ಪರ್ಶವಿದೆ. ಆದರೆ ಪ್ರಸ್ತುತ ಕುಡುಬಿ ಸಮುದಾಯದ ಮಕ್ಕಳು ಇತರ ಜಾತಿಯವರಂತೆ ಮೊಟ್ಟೆ ತಿನ್ನುವುದನ್ನು ರೂಡಿಸಿಕೊಂಡಿದ್ದಾರೆ.

ಮಲೆಕುಡಿಯರ ಆಹಾರ ಪದ್ಧತಿಯನ್ನು ಅವಲೋಕಿಸುವುದಾದರೆ ಮೂಲತಃ ಅವರು ಸಸ್ಯಾಹಾರಿಗಳು. ಆದರೆ ವಿಶೇಷ ದಿನಗಳಲ್ಲಿ ಬೇಟೆಯಾಡಿದ ಮಾಂಸ (ಕಾಡುಹಂದಿ, ಮುಳ್ಳುಹಂದಿ, ಜಿಂಕೆ, ಮೊಲ, ಕಡವೆ, ಕಾಡುಕುರಿಗಳು) ಮುಖ್ಯವಾದರೆ ಸಸ್ಯಾಹಾರದಲ್ಲಿ ಅಕ್ಕಿಯನ್ನು ಹಾಗೂ ತರಕಾರಿಯನ್ನು ಬಳಸುವುದುಂಟು. ರಾಗಿ, ಸಿಹಿಗೆಣಸು, ಮರಗೆಣಸು, ತುಪ್ಪಗೆಣಸು, ಸುವರ್ಣಗೆಡ್ಡೆಗಳು ಅವರ ಇತರ ಆಹಾರಗಳಾಗಿವೆ. ಕಾಡಿನಲ್ಲಿರುವ ವಿವಿಧ ಗೆಡ್ಡೆಗಳನ್ನು, ನರೆ, ಕಾರೊಳು, ಉಪಯೋಗಿಸುತ್ತಿದ್ದರು. ತೇರೆ ಕೊಡಿ, ಚಿಟ್ಟೆ ಗಿಡದ ಎಲೆ 'ತಜಂಕ್'/'ತೊಜಂಕ್' ತುಳು ಶಬ್ದ ಅಥವಾ (ತುಳು ಪದ 'ತಜಂಕ್'/'ತೊಜಂಕ್') ಮುಂತಾದವುಗಳನ್ನು ಅಡುಗೆ ಪದಾರ್ಥವಾಗಿ ಉಪಯೋಗಿಸುತ್ತಾರೆ.

ಮರಾಠಿ ನಾಯ್ಕರ ಆಹಾರ ಸೇವನೆಯು ವಿಶೇಷವಾಗಿಲ್ಲ. ಪರಿಸರದಲ್ಲಿ ಬೆಳೆದ ಅಥವಾ ಸಿಗುವ ಧಾನ್ಯ, ಮೀನು ಮಾಂಸಗಳು ಇವರ ಆಹಾರ ಸೇವನೆಯಲ್ಲಿ ಪ್ರಮುಖವಾದವುಗಳು. ಇವರೆಲ್ಲರಲ್ಲಿ ದಿನನಿತ್ಯ ಸೇವಿಸುವ ಪ್ರಧಾನ ಆಹಾರದಲ್ಲಿ ಕುಚ್ಚಿಗೆ ಅಕ್ಕಿಯು (Staple food) ಪ್ರಮುಖವಾಗಿದೆ.

ಕೊರಗರ ಸಮುದಾಯದ ಜನರು ಇತರ ಎಲ್ಲಾ ಬುಡಕಟ್ಟುಗಳಗಿಂತ ಆರ್ಥಿಕವಾಗಿ ತುಂಬಾ ಹಿಂದುಳದವರಾಗಿದ್ದಾರೆ. ಆಹಾರದ ಬಗ್ಗೆ ಇನ್ನೂ ಸ್ಪಷ್ಟ ಕಲ್ಪನೆಯಿಲ್ಲದ ಅದೆಷ್ಟೋ ಕುಟುಂಬಗಳು ಇದ್ದು, ಅಜಲು ವ್ಯವಸ್ಥೆಯಿಂದಾಗಿ ಇತ್ತೀಚಿನವರೆಗೆ ಎಂಜಲನ್ನ ತಿನ್ನುವ ಪ್ರವೃತ್ತಿಯಿದ್ದಿರುವುದನ್ನು ಗಮನಿಸಬಹುದು. ಈಗಲೂ ಅನೇಕ ಕುಟುಂಬಗಳಲ್ಲಿ ಆಹಾರದ ಕೊರತೆ ಇರುವುದು ಅಧ್ಯಯನದಿಂದ ತಿಳಿಯಲಾಗಿದೆ. ತೀರಾ ಬಡತನವಿದ್ದ ಕೊರಗ

ಕುಟುಂಬಗಳು ಹಿಂದೆ ಸತ್ತ ಎಮ್ಮೆಯ ಮಾಂಸವನ್ನು ತುಂಡರಿಸಿ ಒಣಗಿಸಿ, ಶೇಖರಿಸಿಡುವ ಪದ್ಧತಿ ಮತ್ತು ಮಳೆಗಾಲದಲ್ಲ ಅದನ್ನು ಉಪಯೋಗಿಸುವುದು ಸಾಮಾನ್ಯವಾಗಿತ್ತು.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯರು ಈಗ ಆಧುನಿಕ ಜೀವನದ ಆಹಾರ ಪದಾರ್ಥಗಳನ್ನು ಉಪಯೋಗಿಸಲು ಪ್ರಾರಂಭಿಸಿರುವುದು ಕ್ಷೇತ್ರ ಕಾರ್ಯದ ಮೂಲಕ ತಿಳಿದುಕೊಳ್ಳಲಾಗಿದೆ. ಹೆಚ್ಚಿನ ಬುಡಕಟ್ಟು ಮನೆಗಳಲ್ಲಿ ಹಾಲಿನ ಉಪಯೋಗ ಬರೇ ಚಹಾವನ್ನು ತಯಾರಿಸಲು ಮಾತ್ರವಾಗಿದ್ದು, ಆಹಾರ ಸಾಮಾಗ್ರಿಗಳ ಶೇಖರಣೆಯೂ ಬಹಳ ಅಲ್ಪ ಪ್ರಮಾಣದಲ್ಲಿ ಇದ್ದು, ಅಲ್ಪ ಪ್ರಮಾಣದ ಕುಟುಂಬಗಳಲ್ಲಿ ಮಾತ್ರ ಹಣ್ಣು ಹಂಪಲಿನ ಉಪಯೋಗವಿರುವುದು ಕಂಡುಬಂದಿದೆ.

## ಕೋಷ್ಟಕ ಸಂಖ್ಯೆ 5.6

## ಬುಡಕಟ್ಟು ಮಹಿಳೆಯರು ತಮ್ಮ ವೈಯಕ್ತಿಕ ಸಮಸ್ಯೆಯನ್ನು ಇತರರೊಂದಿಗೆ ಹಂಚಿಕೊಳ್ಳುವ ಕುರಿತು ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಪತಿಯೊಂದಿಗೆ ಹಂಚಿಕೊಳ್ಳುವುದು | 212 | 70.67 |
| 2 | ಇತರ ಸದಸ್ಯರಲ್ಲಿ /ನೆರೆ ಹೊರೆಯವರಲ್ಲಿ | 73 | 24.33 |
| 3 | ಮಹಿಳಾ ಗುಂಪುಗಳಲ್ಲಿ | 07 | 2.33 |
| 4 | ಯಾರಲ್ಲೂ ಚರ್ಚಿಸುವುದಿಲ್ಲ | 08 | 2.67 |
| | ಒಟ್ಟು | 300 | 100.00 |

ಕೋಷ್ಟಕ ಸಂಖ್ಯೆ 5.6 ರಲ್ಲಿ ಒಟ್ಟು 300(100%) ಬುಡಕಟ್ಟು ಮಹಿಳೆಯರಲ್ಲಿ ಬಹು ಸಂಖ್ಯಾತ 212(70.67%) ಮಹಿಳೆಯರು ತಮ್ಮ ವೈಯಕ್ತಿಕ ಸಮಸ್ಯೆಗಳನ್ನು ತಮ್ಮ ಗಂಡಂದಿರಲ್ಲಿ ಚರ್ಚಿಸುತ್ತಾರೆ. ಸುಮಾರು ಕಾಲು ಭಾಗದಷ್ಟು ಆದಿವಾಸಿ ಮಹಿಳೆಯರು ಎಂದರೆ 73(24.33%) ಮನೆಯ ಇತರರಲ್ಲಿ ಮತ್ತು ನೆರೆಹೊರೆಯವರಲ್ಲಿ, ಹಾಗೆಯೇ ಏಳು(2.33%) ಮಹಿಳೆಯರು ಸ್ವಸಹಾಯ ಗುಂಪುಗಳಲ್ಲಿ ಹಾಗೂ ಎಂಟು (2.67%) ಮಹಿಳೆಯರು ತಮ್ಮ ವೈಯಕ್ತಿಕ ಸಮಸ್ಯೆಗಳನ್ನು ಯಾರಲ್ಲೂ ಚರ್ಚಿಸುವುದಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

## ಕೋಷ್ಟಕ ಸಂಖ್ಯೆ 5.7

## ಬುಡಕಟ್ಟು ಮಹಿಳೆಯರು ಸಂಪಾದಿಸಿದ ಹಣದ ವಿನಿಯೋಗದ ಕ್ರಮಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವಂತ ಖರ್ಚಿಗೆ | 29 | 9.67 |
| 2 | ಪತಿಗೆ ನೀಡುತ್ತೇನೆ | 05 | 1.67 |
| 3 | ಅತ್ತೆಗೆ ನೀಡುತ್ತೇನೆ | – | – |
| 4 | ಮಾವನಿಗೆ ನೀಡುತ್ತೇನೆ | – | – |
| 5 | ಮನೆಯ ಇತರ ಸದಸ್ಯರಿಗೆ | – | – |
| 6 | ಮನೆ ಖರ್ಚಿಗೆ ನೀಡುತ್ತೇನೆ | 242 | 80.66 |
| 7 | ಅನ್ವಯಸುವುದಿಲ್ಲ | 24 | 8.00 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ(ಸಂಖ್ಯೆ 5.7) ಬುಡಕಟ್ಟು ಮಹಿಳೆಯರು ಸಂಪಾದಿಸಿದ ಹಣವನ್ನು ಯಾರಿಗೆ ನೀಡುತ್ತಾರೆ ಮತ್ತು ಹೇಗೆ ವಿನಿಯೋಗಿಸುತ್ತಾರೆ ಎಂಬುದನ್ನು ಸ್ಪಷ್ಟೀಕರಿಸುತ್ತದೆ.

ಒಟ್ಟು 300(100%) ಮಹಿಳೆಯರಲ್ಲಿ 29(9.67%) ಮಹಿಳೆಯರು, ದುಡಿಮೆಯ ಹಣವನ್ನು ಸ್ವಂತಕ್ಕಾಗಿ ಉಪಯೋಗಿಸುತ್ತಿದ್ದು ಐದು(1.67%) ಮಹಿಳೆಯರು ಸಂಪಾದನೆಯ ಹಣವನ್ನು ತಮ್ಮ ಗಂಡಂದಿರಿಗೆ ನೀಡುತ್ತೇವೆಂದು ತಿಳಿಸಿದ್ದಾರೆ. ಅತಿ ಹೆಚ್ಚಿನ 242(80.66%) ಮಹಿಳೆಯರು ತಮ್ಮ ಮನೆ ಖರ್ಚಿಗಾಗಿ ದುಡಿತದ ಹಣವನ್ನು ವಿನಿಯೋಗಿಸಿದರೆ, 24(8.00%) ಮಹಿಳೆಯರು ಗೃಹಕೃತ್ಯದಲ್ಲಿ ತೊಡಗಿರುವುದರಿಂದ ಈ ಪ್ರಶ್ನೆಯೇ ಅನ್ವಯಿಸುವುದಿಲ್ಲ.

ಬುಡಕಟ್ಟು ಸಮುದಾಯದಲ್ಲಿ ಮಹಿಳೆಯ ಪಾತ್ರ ಬಹಳ ಪ್ರಮುಖವಾದುದು. ಕುಟುಂಬದಲ್ಲಿ ಪುರುಷನಿಗಿಂತಲೂ ಮಹಿಳೆಯು ಹೆಚ್ಚಿನ ವ್ಯವಹಾರವನ್ನು ನಿಭಾಯಿಸುತ್ತಾಳೆ. ಮನೆಯೊಳಗಿನ ಅಡುಗೆ, ಲಾಲನೆ, ಪಾಲನೆಯೊಂದಿಗೆ ಹೆಚ್ಚಿನ ಮಹಿಳೆಯರು ಬೀಡಿ ಕಟ್ಟುವ

ಕೆಲಸವನ್ನು ಅವಲಂಬಿಸಿದ್ದಾರೆ. ಬರುವ ಆದಾಯದಿಂದ ಕುಟುಂಬಕ್ಕೆ ಒಂದಷ್ಟು ಸಹಕರಿಸಿ ಹಣಕಾಸಿನ ವ್ಯವಹಾರವನ್ನು ನಿಯಂತ್ರಿಸುತ್ತಾರೆ.

ಬಡತನದ ಕಾರಣದಿಂದಾಗಿ ಹೆಚ್ಚಿನ ಬುಡಕಟ್ಟು ಮಹಿಳೆಯರು ತನ್ನ ಸಂಪಾದನೆಯನ್ನು ಮನೆಯ ಖರ್ಚಿನ ನಿರ್ವಹಣೆಗಾಗಿ ನೀಡುತ್ತಾ, ತನ್ನ ವೈಯಕ್ತಿಕ ಬದುಕಿನ ಬಗೆಗೆ ಯೋಚನೆಯನ್ನೇ ಮಾಡುವುದಿಲ್ಲ. ಈ ರೀತಿಯ ಪರಿಸ್ಥಿತಿಗಳಲ್ಲಿ ಬುಡಕಟ್ಟು ಮಹಿಳೆಗೆ ದುಡಿಮೆ ಎಂಬುವುದು ಅನಿವಾರ್ಯವಾಗಿದೆ.

ಬ್ರೆಜಿಲ್‌ನ ಶಿಕ್ಷಣ ತಜ್ಞ ಪೌಲೋ ಪ್ರೇರಿಯವರು "ಬಡವರು ಅಧಿಕಾರ ರಚನೆಯನ್ನು ಪ್ರಶ್ನಿಸಿ ತಮ್ಮ ಜೀವನವನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳುವ ಪ್ರಕ್ರಿಯೆಯೇ ಸಶಕ್ತೀಕರಣ ಎಂದಿದ್ದಾರೆ. (2003: ಪುಟ ಸಂಖ್ಯೆ 9).

ದಿವ್ಯ ಪಾಂಡೆ ಅವರು "ಸಶಕ್ತೀಕರಣವು ವೈಯಕ್ತಿಕ ಮತ್ತು ಸಾಮುದಾಯಿಕ ಮಟ್ಟದಲ್ಲಿ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವನ್ನು ಬೆಳೆಸುವ, ಆತ್ಮ ವಿಶ್ವಾಸ ಹೊಂದುವ ಮತ್ತು ಉತ್ಪಾದನಾ ಸಂಪನ್ಮೂಲಗಳ ಮೇಲೆ ನಿಯಂತ್ರಣ ಪಡೆಯುವ ಪ್ರಕ್ರಿಯೆಯಾಗಿದೆ" ಎಂದಿದ್ದಾರೆ. (2003: ಪು.ಸಂ 10)

ಈ ದೃಷ್ಟಿಯಿಂದ ವಿಶ್ಲೇಷಣೆ ಮಾಡಿದಾಗ ಬುಡಕಟ್ಟು ಮಹಿಳೆಯು ಆರ್ಥಿಕವಾಗಿ ಸ್ವಾವಲಂಬಿ ಹೌದು. ಆದರೆ ತನ್ನ ಶ್ರಮ, ದುಡಿಮೆಯ ಪ್ರತಿಫಲವು ನ್ಯಾಯಸಮ್ಮತವಾಗಿದೆಯೇ?, ತನ್ನ ಕುಟುಂಬದ ಆರ್ಥಿಕ ಭದ್ರತೆ, ದುಡಿಮೆಗೂ ಮತ್ತು ಶಿಕ್ಷಣಕ್ಕಿರುವ ಸಂಬಂಧ, ತನ್ನ ಆರೋಗ್ಯ ಸ್ಥಿತಿಯ ಅರಿವು, ದುಡಿಮೆಯಿಂದ ತನ್ನ ವೈಯಕ್ತಿಕ ಮತ್ತು ಉದ್ಯೋಗ ಜೀವನದ ಮುಂದಿನ ಯೋಜನೆಯ ಕುರಿತಾದ ಸ್ಪಷ್ಟ ಯೋಚನೆಯ ಕೊರತೆ ಬುಡಕಟ್ಟು ಮಹಿಳೆಯರಲ್ಲಿದೆ.

ಆದ್ದರಿಂದ ಪ್ರಸ್ತುತ ಅಧ್ಯಯನದ ದತ್ತಾಂಶಗಳ ಆಧಾರದಲ್ಲಿ ಬುಡಕಟ್ಟು ಮಹಿಳೆಯು ಆರ್ಥಿಕವಾಗಿ ಸಶಕ್ತಳು ಹೌದು ಎನ್ನುವುದನ್ನು ಖಚಿತವಾಗಿ ಮತ್ತು ದೃಢವಾಗಿ ಹೇಳಲು ಸಾಧ್ಯವಿಲ್ಲ.

## ಕೋಷ್ಟಕ ಸಂಖ್ಯೆ 5.8

## ಬುಡಕಟ್ಟು ಮಹಿಳೆಯರ ಸಂಪಾದನೆಯ ಹಣದಿಂದ ತಮಗಿಷ್ಟದ ದುಬಾರಿ ವಸ್ತುವನ್ನು ಖರೀದಿಸುವ ಸ್ವಾತಂತ್ರ್ಯದ ಕುರಿತು ಅಭಿಪ್ರಾಯಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಖರೀದಿಸುವ ಸ್ವಾತಂತ್ರ್ಯವಿದೆ | 266 | 88.67 |
| 2 | ಖರೀದಿಸುವ ಸ್ವಾತಂತ್ರ್ಯವಿಲ್ಲ | 10 | 3.33 |
| 3 | ಅನ್ವಯಿಸುವುದಿಲ್ಲ | 24 | 8.00 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.8 ರ ಪ್ರಕಾರ ಒಟ್ಟು 300 ಮಹಿಳೆಯರಲ್ಲಿ 266(88.67%) ಮಹಿಳೆಯರು ತಮಗೆ ಬೇಕಾಗುವ ದೊಡ್ಡ ಮೊತ್ತದ ವಸ್ತುವನ್ನು ತಮ್ಮ ಸಂಪಾದನೆಯ ಹಣದಿಂದ ಖರೀದಿಸಲು ಏನೂ ಅಭ್ಯಂತರವಿಲ್ಲ ಎಂದರೆ 10(3.33%) ಮಹಿಳೆಯರು ಈ ರೀತಿಯ ಖರೀದಿಗೆ ಮನೆಯವರ ಸಮ್ಮತಿ ಬೇಕು ಎಂದು ಪ್ರತಿಕ್ರಯಿಸಿದ್ದಾರೆ. ಹಾಗೂ 24(8%) ಮಹಿಳೆಯರು ಗೃಹಕೃತ್ಯದಲ್ಲಿ ತೊಡಗಿರುವುದರಿಂದ ಈ ಪ್ರಶ್ನೆ ಅವರಿಗೆ ಅನ್ವಯಿಸುವುದಿಲ್ಲ.

ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಮೇಲಿನ ವಿಷಯದ ಕುರಿತು ಮಾತುಕತೆ ನಡೆಸುವಾಗ, ಬುಡಕಟ್ಟು ಮಹಿಳೆಯರು ಈ ರೀತಿ ಪ್ರತಿಕ್ರಯಿಸಿದ್ದಾರೆ. "ನಮ್ಮ ದುಡಿಮೆಯ ಆದಾಯವು ಮನೆ ಖರ್ಚಿಗೆ ಸಾಲುವುದಿಲ್ಲ. ಇನ್ನು ಯಾವ ರೀತಿಯಲ್ಲಿ ನಾವು ದೊಡ್ಡ ಮೊತ್ತದ ವಸ್ತುವನ್ನು ಖರೀದಿಸಲು ಸಾಧ್ಯ. ಹಾಗೆಯೇ ಮನೆಗೆ ಬೇಕಾಗುವ ವಸ್ತುವನ್ನು ತಾನೇ ನಾವು ಖರೀದಿಸುವುದು, ಹಾಗಾಗಿ ಮನೆಯಲ್ಲಿ ಪತಿಯಂದಿರು ವಸ್ತು ಖರೀದಿಗೆ ನಕಾರ ಸೂಚಿಸುವುದಿಲ್ಲ. ಅಲ್ಲದೇ ಖರೀದಿಸಿದ ವಸ್ತು ನಮ್ಮ ಮನೆಯ ಅನುಭೋಗಕ್ಕಾಗಿ ಇರುವುದು ಇನ್ನೊಂದು ಕಾರಣವಾಗಿದೆ." ಎನ್ನುತ್ತಾರೆ.

ಒಟ್ಟಿನಲ್ಲಿ ಬುಡಕಟ್ಟು ಮಹಿಳೆಯರಿಗೆ ತಮ್ಮ ದುಡಿಮೆಯ ಹಣದಿಂದ ತಮಗೆ ಬೇಕಾದ ವಸ್ತುಗಳ ಖರೀದಿಸುವ ಸ್ವಾತಂತ್ರ್ಯವಿದೆ. ಆದರೆ ದೊಡ್ಡ ಮಟ್ಟದ ಖರೀದಿಗೆ ಬೇಕಾಗುವ ಸಂಪಾದನೆ ಅವರಲ್ಲಿ ಇಲ್ಲ. ಮನೆಗೆ ಅಗತ್ಯವಿರುವ ಸರಳ ವಸ್ತುಗಳ ಖರೀದಿಯನ್ನು ಮಾತ್ರ

ಮಾಡಲು ಮನೆಯಲ್ಲಿ ಪತಿಯ ಮತ್ತು ಇತರ ಸದಸ್ಯರ ಒಪ್ಪಿಗೆ ಅವರಿಗೆ ಬೇಕಾಗಿಲ್ಲ ಎನ್ನುವುದು ಅಧ್ಯಯನದ ಆಧಾರದಿಂದ ತಿಳಿದುಬಂದಿದೆ.

## ಕೋಷ್ಟಕ ಸಂಖ್ಯೆ 5.9

## ಸ್ವಸಹಾಯ ಸಂಘಗಳಲ್ಲಿ ಬುಡಕಟ್ಟು ಮಹಿಳೆಯರು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಸ್ವ ಸಹಾಯ ಗುಂಪಿನಲ್ಲಿ ಸದಸ್ಯರು | 226 | 75.34 |
| 2 | ಸ್ವ ಸಹಾಯ ಗುಂಪಿನಲ್ಲಿ ಸದಸ್ಯರಲ್ಲ | 74 | 24.66 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.9ರ ಪ್ರಕಾರ 300(100%)ರಲ್ಲಿ 226(75.34%) ಮಹಿಳೆಯರು ಸ್ವ ಸಹಾಯ ಸಂಘದ ಸದಸ್ಯೆಯರಾಗಿದ್ದು ಮತ್ತು 74(24.66%) ಮಹಿಳೆಯರು ಸದಸ್ಯರಾಗಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಸಬಲೀಕರಣದ ಉದ್ದೇಶವನ್ನು ಮೂಲವಾಗಿಟ್ಟುಕೊಂಡು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ವತಿಯಿಂದ ಸ್ತ್ರೀಶಕ್ತಿ ಗುಂಪುಗಳು, ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆಯ ಸ್ವ ಸಹಾಯ ಗುಂಪುಗಳು ಹಾಗೂ ನವೋದಯ ಸ್ವ ಸಹಾಯ ಗುಂಪುಗಳು ಕಾರ್ಯ ನಿರ್ವಹಿಸುತ್ತಿವೆ. ಮಹಿಳೆಯರನ್ನು ಆರ್ಥಿಕವಾಗಿ ಸ್ವಾವಲಂಬಿಗಳನ್ನಾಗಿಸುವ ದೃಷ್ಟಿಯಲ್ಲಿ ಈ ಗುಂಪುಗಳು ಕೆಲಸ ಮಾಡುತ್ತಿದ್ದು ಅದೆಷ್ಟೋ ಮುಖ್ಯವಾಹಿನಿಯ ಬಡ ಮತ್ತು ಮಧ್ಯಮ ವರ್ಗದ ಮಹಿಳೆಯರು ಇದರಿಂದಾಗಿ ವಿವಿಧ ರೀತಿಯ ಪ್ರಯೋಜನ ಪಡಕೊಂಡಿರುತ್ತಾರೆ. ಅಂತೆಯೇ, ಜಿಲ್ಲೆಯ ಅನೇಕ ಬುಡಕಟ್ಟು ಮಹಿಳೆಯರು ಇದರಲ್ಲಿ ಸದಸ್ಯರಾಗಿದ್ದಾರೆ. ಕ್ಷೇತ್ರ ಕಾರ್ಯದ ಆಧಾರದಿಂದ 74(24.66%) ಮಹಿಳೆಯರು ಸ್ವ ಸಹಾಯ ಗುಂಪುಗಳಲ್ಲಿ ಯಾಕೆ ಸದಸ್ಯರಾಗಿಲ್ಲ ಎಂದು ಕೊಟ್ಟಿರುವ ಕಾರಣಗಳನ್ನು ಈ ಮುಂದಿನ ಕೋಷ್ಟಕ 5.10ರಲ್ಲಿ ಗಮನಿಸಬಹುದು.

ಸ್ವ ಸಹಾಯ ಸಂಘದಲ್ಲಿ ಸದಸ್ಯೆಯರಾಗಿರುವ 226 (75.34%) ಮಹಿಳೆಯರು ಸ್ವ ಸಹಾಯ ಸಂಘಗಳು ತುಂಬಾ ಪ್ರಯೋನಜಕಾರಿಯಾಗಿದೆ. ಇದರಿಂದ ತಮ್ಮ ಜೀವನದಲ್ಲಿ ಒಳಿತಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ಗುಂಪುಗಳು ಸಭೆಗಳಿಗೆ

ಸದಸ್ಯರ ಭಾಗವಹಿಸುವಿಕೆಯನ್ನು ಪ್ರತಿವಾರ ಕಡ್ಡಾಯ ಮಾಡಿದ್ದು ಎರಡು - ಮೂರು ಬಾರಿ ಗೈರುಹಾಜರಾದರೆ ಸರಳ ದಂಡವನ್ನು ವಿಧಿಸುವ ಕ್ರಮವೂ ಇದೆ.

## ಕೋಷ್ಟಕ ಸಂಖ್ಯೆ 5.10

## ಸ್ವ ಸಹಾಯ ಸಂಘಗಳಲ್ಲಿ ಸದಸ್ಯರಾಗದೇ ಇರಲು ನೀಡಿದ ಕಾರಣಗಳು

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಆಸಕ್ತಿಯಿಲ್ಲ | 38 | 12.67 |
| 2 | ಮಾಹಿತಿ ಇಲ್ಲ | 06 | 2.00 |
| 3 | ಪ್ರಯೋಜನವಿಲ್ಲ | 03 | 1.00 |
| 4 | ಮನೆಯ ಇತರರು ಸದಸ್ಯರಾಗಿದ್ದ ಬಗ್ಗೆ | 11 | 3.67 |
| 5 | ಮನೆಯಲ್ಲಿ ಬೇರೆ ಯಾರೂ ಇಲ್ಲ | 08 | 2.66 |
| 6 | ಆರೋಗ್ಯದ ಸಮಸ್ಯೆ | 01 | 0.33 |
| 7 | ವಿರಾಮದ ವೇಳೆ ಇಲ್ಲ | 07 | 2.33 |
| 8 | ಅನ್ವಯಿಸುವುದಿಲ್ಲ | 226 | 75.34 |
|  | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.10ರಲ್ಲಿ ಒಟ್ಟು 300(100%) ಮಹಿಳೆಯರಲ್ಲಿ 74(24.66%) ಮಹಿಳೆಯರು ಸದಸ್ಯರಾಗಿಲ್ಲದೆ ಇದ್ದು ಅದಕ್ಕೆ ಕಾರಣವಾಗಿ 38 (12.67%) ಮಹಿಳೆಯರು ತಮಗೆ ಸ್ವ ಸಹಾಯ ಗುಂಪುಗಳಲ್ಲಿ ಆಸಕ್ತಿಯಿಲ್ಲ ಎಂದಿದ್ದಾರೆ. ಆರು(2%) ಮಹಿಳೆಯರು ತಮಗೆ ಈ ಕುರಿತಾಗಿ ಮಾಹಿತಿ ಸಿಕ್ಕಿಲ್ಲ, ಎಂದಿದ್ದು ಮೂರು(1%) ಮಹಿಳೆಯರು ಇದರಿಂದ ಏನೂ ಪ್ರಯೋನಜವಿಲ್ಲ ಎಂದರೆ, 11(3.67%) ಮಹಿಳೆಯರು ಮನೆಯ ಇತರ ಕುಟುಂಬದ ಸದಸ್ಯರು ಸದಸ್ಯೆಯರಾಗಿರುವುದರಿಂದ ತಾವು ಸದಸ್ಯೆಯಾಗಿಲ್ಲ ಎಂದಿದ್ದಾರೆ. ಎಂಟು(2.66%) ಮಹಿಳೆಯರು ಮನೆಯಿಂದ ಹೋಗಿ ಸಭೆಯಲ್ಲಿ ಪಾಲ್ಗೊಳ್ಳಲು ಮನೆಯಲ್ಲಿ ತಾನೊಬ್ಬಳೇ ಇರುವುದರಿಂದ ತಾವು ಸದಸ್ಯೆಯರಾಗಿಲ್ಲ ಎಂದರೆ ಒಟ್ಟು ಒಂದು(0.33%) ಮಹಿಳೆ ತನ್ನ ಅನಾರೋಗ್ಯ ಸಮಸ್ಯೆಯ ಕಾರಣದಿಂದ ತಾನು ಸದಸ್ಯೆಯಾಗಿಲ್ಲ ಎಂದು ಹೇಳಿದ್ದಾರೆ. ಏಳು(2.33%) ಮಹಿಳೆಯರು ಸ್ವಸಹಾಯ ಗುಂಪಿನಲ್ಲಿ ಪಾಲ್ಗೊಳ್ಳಲು ವೇಳೆ ಇಲ್ಲ ಎನ್ನುವ ಕಾರಣವನ್ನು ನೀಡಿದ್ದಾರೆ. ಆಸಕ್ತಿಯಿಲ್ಲ ಎನ್ನುವ ಕಾರಣ ನೀಡಿದ 28 ಮಹಿಳೆಯರಲ್ಲಿ

ಹೆಚ್ಚಿನ ಮಹಿಳೆಯರು ಅಂದರೆ 18 ಮಹಿಳೆಯರು ಮಲೆಕುಡಿಯ ಸಮುದಾಯಕ್ಕೆ ಸೇರಿದ್ದು ಸಮುದಾಯದ ಮನೆಗಳು ಹೆಚ್ಚಾಗಿ ಕಾಡಿಗೆ ಹತ್ತಿರವಿದ್ದು ಮುಖ್ಯವಾಹಿನಿಯ ಜನರೊಂದಿಗೆ ಭೇಟಿಯು ಆಗಾಗ್ಗೆ ನಡೆಯದಿರುವುದು ಹಾಗೂ ಮಾತುಕತೆಗಳು ಕಡಿಮೆಯಾಗಿರುವುದು ಸಹ ಕಾರಣವಾಗಿರಬಹುದೆಂದು ಪ್ರಸ್ತುತ ಸಂಶೋಧನೆಯಿಂದ ಅವಲೋಕಿಸಲಾಗಿದೆ.

ಸ್ವ ಸಹಾಯ ಗುಂಪುಗಳು ಯಾವ ಕಾರಣಗಳಗೋಸ್ಕರ ಪರಿಣಾಮಕಾರಿಯಾಗಿವೆ ಎಂದು ಬುಡಕಟ್ಟು ಮಹಿಳೆಯರು ನೀಡಿದ ಕಾರಣಗಳನ್ನು ಮುಂದಿನ ಕೋಷ್ಟಕ ಸಂಖ್ಯೆ 5.11ರಲ್ಲಿ ಕಾಣಬಹುದಾಗಿದೆ.

## ಕೋಷ್ಟಕ ಸಂಖ್ಯೆ 5.11

## ಸ್ವಸಹಾಯ ಸಂಸ್ಥೆಗಳಂದ ಆಗುವ ಅನುಕೂಲಗಳ ವಿವರ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಹಣದ ಸಹಾಯಕ್ಕಾಗಿ | 195 | 65.00 |
| 2 | ವಿವಿಧ ರೀತಿಯ ಮಾಹಿತಿ ಮತ್ತು ಜಾಗೃತಿಗಾಗಿ | 15 | 5.00 |
| 3 | ಪರಸ್ಪರ ಮಾಹಿತಿ ಹಂಚಿಕೊಳ್ಳಲು | 16 | 5.34 |
| 4 | ತಿಳಿದಿಲ್ಲ | – | – |
| 5 | ಅನ್ವಯಿಸುವುದಿಲ್ಲ | 74 | 24.66 |
|  | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.11ರಲ್ಲಿ ಒಟ್ಟು 300 ರಲ್ಲಿ 226(75.34%) ಯಾವೆಲ್ಲ ಕಾರಣಗಳಗಾಗಿ ಮಹಿಳೆಯರು ಸ್ವಸಹಾಯ ಸಂಘಗಳು ಪ್ರಯೋಜನಕಾರಿ ಎಂದು ಪ್ರತಿಕ್ರಯಿಸಿದ್ದು, ಇದರಲ್ಲಿ 195(65%) ಮಹಿಳೆಯರು ಹಣದ (ಸಾಲದ) ಸಹಾಯಕ್ಕಾಗಿ ಸ್ವ ಸಹಾಯ ಸಂಘಗಳು ಪ್ರಯೋಜನಕಾರಿ ಎಂದಿದ್ದು, 15(5%) ಮಹಿಳೆಯರು ವಿವಿಧ ರೀತಿಯ ಮಾಹಿತಿಯಿಂದ ಜಾಗೃತರಾಗಲು, 16(5.34%) ಮಹಿಳೆಯರು ಪರಸ್ಪರ ಮಾಹಿತಿಗಳನ್ನು ಹಂಚಿಕೊಳ್ಳಲು ಸ್ವ ಸಹಾಯ ಸಂಘಗಳು ಪ್ರಯೋಜನಕಾರಿ ಎಂದಿದ್ದಾರೆ.

ಕ್ಷೇತ್ರ ಕಾರ್ಯದಲ್ಲಿ ಮಹಿಳೆಯರೊಂದಿಗೆ ಈ ಕುರಿತು ಮಾತುಕತೆ ನಡೆಸಿದಾಗ ಎಲ್ಲಾ ಹೆಚ್ಚಿನ ಮಹಿಳೆಯರು ಮೊತ್ತ ಮೊದಲಿಗೆ ತಮಗೆ ಸಾಲ ಲಭ್ಯತೆ, ಅದೂ ಕಡಿಮೆ ಪ್ರಮಾಣದ ಬಡ್ಡಿಗೆ ಸಿಗುವುದರಿಂದ ಸ್ವ ಸಹಾಯ ಸಂಘಗಳು ಪ್ರಯೋಜನಕಾರಿಯಾಗಿವೆ ಎಂದಿದ್ದಾರೆ. ಈ ಸೌಲಭ್ಯವು ಬುಡಕಟ್ಟು ಮಹಿಳೆಯರಿಗೆ ನೇರವಾಗಿ ಮತ್ತು ಪ್ರತ್ಯಕ್ಷವಾಗಿ ಸಿಗುವ ಆರ್ಥಿಕ ಸೌಲಭ್ಯವಾದುದರಿಂದ ಈ ಸಹಾಯವನ್ನು ಬಹಳ ಬೇಗನೆ ಎಲ್ಲಾ ಬುಡಕಟ್ಟು ಮಹಿಳೆಯರು ಗುರುತಿಸಿ ಉಪಯೋಗಿಸಿಕೊಳ್ಳುತ್ತಾರೆ. ಮದುವೆಯ ಕಾರಣಕ್ಕೆ, ಮನೆ ಕಟ್ಟುವ ಉದ್ದೇಶಗಳಿಗೆ ಹಾಗೂ ಇನ್ನಿತರ ಕಾರಣಗಳಿಗೆ ಹೆಚ್ಚಿನ ಎಲ್ಲಾ ಮಹಿಳೆಯರು ಸಾಲ ಪಡೆದಿದ್ದಾರೆ.

ವಿವಿಧ ರೀತಿಯ ಮಾಹಿತಿ ಮತ್ತು ಜಾಗೃತಿ ಮೂಡಿಸುವ ನಿಟ್ಟಿನಲ್ಲಿ ಅನೇಕ ಸ್ವ ಸಹಾಯ ಗುಂಪುಗಳಲ್ಲಿ ವಿಭಿನ್ನ ರೀತಿಯ ಚಟುವಟಿಕೆಗಳು ಅನುಷ್ಠಾನಗೊಳ್ಳುತ್ತವೆ. ಸಂಪನ್ಮೂಲ ವ್ಯಕ್ತಿಗಳಿಂದ ಮಾಹಿತಿ, ಪೌಷ್ಠಿಕ ಆಹಾರ ತಯಾರಿಸುವ ಸ್ಪರ್ಧೆ, ಶ್ರಮದಾನ, ಮನರಂಜನೆಗಾಗಿ ಸಾಂಸ್ಕೃತಿಕ ಸ್ಪರ್ಧೆಗಳು, ಹಾಗೂ ಸಣ್ಣ ಸಣ್ಣ ವಿಹಾರಗಳು ಇವೆಲ್ಲ ಹೆಚ್ಚಿನ ಗುಂಪುಗಳಲ್ಲಿ ನಡೆಯುತ್ತವೆ.

ಇದರ ಜೊತೆಯಲ್ಲಿ ಗುಂಪುಗಳಲ್ಲಿ ಪದಾಧಿಕಾರಿಗಳ ಆಯ್ಕೆ ಮತ್ತು ತರಬೇತಿ ನಡೆಯುತ್ತದೆ. ಇದರಿಂದಾಗಿ ಪದಾಧಿಕಾರಿಗಳಲ್ಲಿ ನಾಯಕತ್ವ ತರಬೇತಿ ಸ್ವಾಭಾವಿಕವಾಗಿಯೇ ಬೆಳೆಯುತ್ತದೆ. ಹಣಕಾಸಿನ ವ್ಯವಹಾರದಿಂದ ಬ್ಯಾಂಕ್‌ನ ಕಾರ್ಯಕ್ರಮಗಳ ಪರಿಚಯವಾಗುತ್ತದೆ. ಬ್ಯಾಂಕುಗಳಲ್ಲಿ ಹಣ ಸಂದಾಯ ಮಾಡುವ ಮತ್ತು ಖಾತೆಗೆ ಜಮಾ ಮಾಡುವ ಸರಳ ಜ್ಞಾನವೂ ಬೆಳೆಯುತ್ತಿರುವುದನ್ನು ಕಂಡುಕೊಳ್ಳಲಾಗಿದೆ.

ಕಿರಿಯ ಪ್ರಾಥಮಿಕ ವಿದ್ಯಾಭ್ಯಾಸ ಪಡೆದ ಅನೇಕ ಬುಡಕಟ್ಟು ಮಹಿಳೆಯರಲ್ಲಿ ಈ ರೀತಿಯ ಆರ್ಥಿಕ ವ್ಯವಹಾರಗಳನ್ನು ಲೆಕ್ಕಪತ್ರಗಳನ್ನು ಅಚ್ಚುಕಟ್ಟಾಗಿ ಇಡುವ ಕೌಶಲ್ಯಗಳು ಬೆಳೆದಿವೆ. ಅಂದರೆ ಸ್ವಸಹಾಯ ಸಂಘಗಳಿಂದ ಅನೇಕ ಬುಡಕಟ್ಟು ಮಹಿಳೆಯರು ಪ್ರಬುದ್ಧರಾಗುತ್ತಿದ್ದು, ಮಾನಸಿಕವಾಗಿ ಬದಲಾಗುತ್ತಿದ್ದಾರೆ. ಮತ್ತು ಅವರಲ್ಲಿ ಯೋಚನೆಗಳು ಬದಲಾವಣೆಯಾಗುತ್ತಿವೆ.

ಆದರೆ ತಮ್ಮೊಳಗೆ ಆದ ಈ ರೀತಿಯ ಬದಲಾವಣೆಗಳನ್ನು ಬುಡಕಟ್ಟು ಮಹಿಳೆಯರು ಗುರುತಿಸುವಲ್ಲಿ ಕೊರತೆಯಿದೆ. ಹಾಗೂ ಈ ರೀತಿಯ ಬದಲಾವಣೆಗಳನ್ನು ಅಭಿವ್ಯಕ್ತಪಡಿಸಲು ಶಕ್ತರಾಗಿಲ್ಲ ಎಂಬುದನ್ನು ಗಮನಿಸಲಾಗಿದೆ. ಯಾವಾಗ ಈ ರೀತಿಯ

ಬದಲಾವಣೆಗಳನ್ನು ಬುಡಕಟ್ಟು ಮಹಿಳೆಯರು ಗುರುತಿಸಲು ಶಕ್ತರಾಗುವರೋ ಆಗ ಅವರಲ್ಲಿನ ಆತ್ಮ ವಿಶ್ವಾಸದ ಮಟ್ಟ ಅಧಿಕವಾಗಬಹುದೆಂಬ ಅಂಶವನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಸ್ವ ಸಹಾಯ ಗುಂಪುಗಳಲ್ಲಿ ಸದಸ್ಯರಾದ ಬುಡಕಟ್ಟು ಮಹಿಳೆಯರ ಮಾತಿನಲ್ಲಿ ದೃಢತೆ, ಆತ್ಮವಿಶ್ವಾಸ ಮತ್ತು ಗಟ್ಟಿತನವಿರುವುದನ್ನು ಕೂಡಾ ಅಧ್ಯಯನದ ಮೂಲಕ ಗಮನಿಸಲಾಗಿದೆ.

## ಕೋಷ್ಟಕ ಸಂಖ್ಯೆ 5.12

## ಇತರ ಸಂಘ ಸಂಸ್ಥೆಗಳಲ್ಲಿ ಬುಡಕಟ್ಟು ಮಹಿಳೆಯರ ಸದಸ್ಯತ್ವ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಇತರ ಸಂಘ ಸಂಸ್ಥೆಗಳಲ್ಲಿ ಸದಸ್ಯರು | 39 | 13.00 |
| 2 | ಇತರ ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿಲ್ಲ | 261 | 87.00 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.12ರ ಪ್ರಕಾರ ಒಟ್ಟು 300(100%) ಮಹಿಳೆಯರಲ್ಲಿ 39(13%) ಮಹಿಳೆಯರು ಗ್ರಾಮದಲ್ಲಿರುವ ಇತರ ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿದ್ದು, ಅತಿ ಹೆಚ್ಚು ಬುಡಕಟ್ಟು ಮಹಿಳೆಯರು 261(87%) ಯಾವುದೇ ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವ ಪಡಕೊಂಡಿಲ್ಲ. ಗ್ರಾಮಮಟ್ಟದಲ್ಲಿ ಪಂಚಾಯತ್ ಸಂಸ್ಥೆ, ಸಹಕಾರಿ ಸಂಘ, ಮಹಿಳಾ ಗ್ರಾಹಕ ಸಂಘ, ಮಹಿಳಾ ಮಂಡಳ, ರಾಜಕೀಯ ಪಕ್ಷ, ಸಮುದಾಯ ಸಂಘ ಇತ್ಯಾದಿಗಳು ಸಮುದಾಯ ಪರ ಕೆಲಸಗಳಲ್ಲಿ ತೊಡಗಿದ್ದು ಒಟ್ಟು ಈ ಸಂಘ ಸಂಸ್ಥೆಗಳಲ್ಲಿ ಬುಡಕಟ್ಟು ಮಹಿಳೆಯರ ಸದಸ್ಯತ್ವಗಳು ಬಹಳ ಕಡಿಮೆ ಪ್ರಮಾಣದಲ್ಲಿವೆ.

ಗ್ರಾಮಮಟ್ಟದ ಸಂಘ ಸಂಸ್ಥೆಗಳನ್ನು ಅವುಗಳ ಕಾರ್ಯ ವೈಖರಿಗಳನ್ನು ತಿಳಿದುಕೊಂಡು ಅರಿವು ಗಳಿಸಿಕೊಳ್ಳುವಲ್ಲಿ ಬುಡಕಟ್ಟು ಮಹಿಳೆಯರಲ್ಲಿ ಕೊರತೆ ಇರುವುದನ್ನು ಅವಲೋಕಿಸಲಾಗಿದೆ.

ಒಟ್ಟು 39(13%) ಮಹಿಳೆಯರು ಯಾವ ರೀತಿಯ ಸಂಘ ಸಂಸ್ಥೆಗಳಲ್ಲಿ ಸದಸ್ಯರಾಗಿರುವರೆಂದು ಕೋಷ್ಟಕ ಸಂಖ್ಯೆ 5.13 ರಲ್ಲಿ ಗಮನಿಸಬಹುದು.

## ಕೋಷ್ಟಕ ಸಂಖ್ಯೆ 5.13

## ವಿವಿಧ ಸಂಘ ಸಂಸ್ಥೆಗಳಲ್ಲಿ ಸದಸ್ಯೆಯಾಗಿರುವ ಮಾಹಿತಿದಾರರ ಹಂಚಿಕೆ

| ಕ್ರ.ಸಂ | ಅಭಿಪ್ರಾಯ | ಒಟ್ಟು | ಶೇಕಡವಾರು |
|---|---|---|---|
| 1 | ಪಂಚಾಯತ್ | 12 | 4.00 |
| 2 | ಸಹಕಾರಿ ಸಂಘ | 01 | 0.34 |
| 3 | ಮಹಿಳಾ ಗ್ರಾಹಕ ಸಂಘ | – | – |
| 4 | ಮಹಿಳಾ ಮಂಡಳ | 12 | 4.00 |
| 5 | ರಾಜಕೀಯ | 02 | 0.66 |
| 6 | ಜಾತಿ ಸಂಘ | 12 | 4.00 |
| 7 | ಅನ್ವಯಿಸುವುದಿಲ್ಲ | 261 | 87.00 |
| | ಒಟ್ಟು | 300 | 100.00 |

ಮೇಲಿನ ಕೋಷ್ಟಕ ಸಂಖ್ಯೆ 5.13 ರ ಪ್ರಕಾರ ಒಟ್ಟು 300(100%) ಮಹಿಳೆಯರಲ್ಲಿ 39(13%) ಮಹಿಳೆಯರು ಮಾತ್ರವೇ ವಿವಿಧ ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವ ಹೊಂದಿದ್ದು, ಇದರಲ್ಲಿ 12(4%) ಮಹಿಳೆಯರು ಪಂಚಾಯತ್ ಸದಸ್ಯೆಯರು, ಸಹಕಾರಿ ಸಂಘದಲ್ಲಿ ಒಂದು (0.34%) ಮಹಿಳೆ, ಮಹಿಳಾ ಮಂಡಳಯಲ್ಲಿ, 12(4%) ಮಹಿಳೆಯರು, ರಾಜಕೀಯದಲ್ಲಿ ದುಡಿಯುವವರು ಎರಡು(0.66%) ಹಾಗೂ ಜಾತಿ ಸಂಘಗಳಲ್ಲಿ 12(4%) ಮಹಿಳೆಯರಿದ್ದಾರೆ.

ಭಾರತದಲ್ಲಿ 529 ವಿಧಾನಸಭಾ ಮತ್ತು 46 ಲೋಕಸಭಾ ಕ್ಷೇತ್ರಗಳನ್ನು ಬುಡಕಟ್ಟಿನ ಜನರಿಗಾಗಿ ಮೀಸಲಡಲಾಗಿದೆ. ಕರ್ನಾಟಕದಲ್ಲಿ ಕೇವಲ ಎರಡು ವಿಧಾನಸಭಾ ಕ್ಷೇತ್ರಗಳನ್ನು ಬುಡಕಟ್ಟು ಜನರಿಗಾಗಿ ಮೀಸಲಡಲಾಗಿದೆ. ಜನಸಂಖ್ಯೆಯ ಆಧಾರದ ಮೇಲೆ ಕನಿಷ್ಟ 22 ವಿಧಾನಸಭಾ ಕ್ಷೇತ್ರಗಳನ್ನಾದರೂ ಬುಡಕಟ್ಟಿನವರಿಗಾಗಿ ಮೀಸಲಿಡಬೇಕಾಗುವುದು. ಇತ್ತೀಚೆಗೆ ಗ್ರಾಮಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗಳಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿಯನ್ನು ಬುಡಕಟ್ಟು ಜನರಿಗಾಗಿ ಕಲ್ಪಿಸಿರುವುದು ಸ್ವಾಗತಾರ್ಹ.

ಪ್ರಸ್ತುತ ಪಂಚಾಯತ್ ವ್ಯವಸ್ಥೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ 33% ಮೀಸಲಾತಿಯ ವ್ಯವಸ್ಥೆಯಿರುವುದರಿಂದ 12(4%) ಮಹಿಳೆಯರು ಪಂಚಾಯತ್

ಸದಸ್ಯೆಯಾಗಿದ್ದಾರೆ. ಅಂದರೆ ಬುಡಕಟ್ಟು ಸಮುದಾಯಗಳು ಸಂವಿಧಾನಾತ್ಮಕ ಹಕ್ಕುಗಳ ಮೂಲಕ ಪಂಚಾಯತ್ ಸದಸ್ಯತನವನ್ನು ಗಳಿಸಿದ್ದು, ಇದು ಕೇವಲ ತಳಮಟ್ಟದ ರಾಜಕೀಯದಲ್ಲಿ ಪ್ರವೇಶಾತಿಯಾಗಿದೆ ಹೊರತು, ತಾಲೂಕು ಪಂಚಾಯತ್ ವ್ಯವಸ್ಥೆ, ಜಿಲ್ಲಾ ಪಂಚಾಯತ್ ವ್ಯವಸ್ಥೆಯಲ್ಲಿ ಸದಸ್ಯತನ ವಿರಳವಾಗಿರುವುದನ್ನು ಕಂಡುಕೊಳ್ಳಲಾಗಿದೆ.

ಉಳಿದ 12(4%) ಮಹಿಳೆಯರು ಮಹಿಳಾ ಮಂಡಲದ ಸದಸ್ಯೆಯರಾಗಿದ್ದು ಇಲ್ಲಿನ ಕಾರ್ಯಕ್ರಮ, ಉದ್ದೇಶಗಳು ಮತ್ತು ಪ್ರಯೋಜನಗಳ ಕುರಿತು ಸದಸ್ಯರುಗಳಲ್ಲಿ ಮಾಹಿತಿಯ ಕೊರತೆ ಕಂಡುಬರುತ್ತದೆ.

ಒಟ್ಟಿನಲ್ಲಿ ಸ್ವ ಸಹಾಯ ಗುಂಪುಗಳನ್ನು ಹೊರತುಪಡಿಸಿ ಉಳಿದ ಸಂಘ ಸಂಸ್ಥೆಗಳಲ್ಲಿ ಬುಡಕಟ್ಟು ಮಹಿಳೆಯ ಸದಸ್ಯತ್ವ ಮತ್ತು ಅವರ ಭಾಗವಹಿಸುವಿಕೆ ಬಹಳ ಕೆಳಮಟ್ಟದಲ್ಲಿದೆ ಎಂದು ಅರ್ಥೈಸಬಹುದು.

ಒಟ್ಟು 300(100%) ಮಾಹಿತಿದಾರರಲ್ಲಿ 39(13%) ಮಹಿಳೆಯರು ಮಾತ್ರವೇ ವಿವಿಧ ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವ ಹೊಂದಿದ್ದು ಅದರಲ್ಲಿ ಕೇವಲ 12(4%) ಮಹಿಳೆಯರು ಪಂಚಾಯತ್ ಸದಸ್ಯೆಯರಾಗಿದ್ದಾರೆಂದು ಈ ಹಿಂದಿನ ಕೋಷ್ಟಕ ಸಂಖ್ಯೆ 5.14ರಲ್ಲಿ ದೃಢಪಟ್ಟಿದೆ. 12(4%) ಮಹಿಳೆಯರಲ್ಲಿ 10(3.34%) ಮಹಿಳೆಯರು ಎಲ್ಲಾ ಪಂಚಾಯತ್ ಸಭೆಯಲ್ಲಿ ತಾವು ಭಾಗವಹಿಸುತ್ತೇವೆಂದು ಅಭಿಪ್ರಾಯಪಟ್ಟಿದ್ದು ಎರಡು(0.66%) ಮಹಿಳೆಯರು ತಾವು ಎಲ್ಲಾ ಪಂಚಾಯತ್ ಸಭೆಯಲ್ಲಿ ಭಾಗವಹಿಸುವುದಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದುದನ್ನು ಗಮನಿಸಲಾಗಿದೆ.

ಆಸಕ್ತಿ ಇಲ್ಲದೇ ಇರುವುದು ಮತ್ತು ಭಾಗವಹಿಸುವಿಕೆ ಉಪಯುಕ್ತವೆಂದು ಅನ್ನಿಸುವುದಿಲ್ಲ ಎನ್ನುವ ಕಾರಣಗಳಿಂದ ಎರಡು(0.66%) ಮಹಿಳೆಯರು ತಾವು ಪಂಚಾಯತ್ ಸಭೆಯಲ್ಲಿ ಭಾಗವಹಿಸುವುದಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ.

10(3.34%) ಮಹಿಳೆಯರು ಪಂಚಾಯತ್ ಸಬೆಯಲ್ಲಿ ತಮ್ಮ ವಾರ್ಡ್‌ಗೆ ಸಂಬಂಧಿಸಿ ಯಾವುದೇ ಸಲಹೆಗಳನ್ನು ನೀಡಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮೂರು(1%) ಮಹಿಳೆಯರು ತಮಗೆ ಏನು ಚರ್ಚಿಸಬೇಕು ಏನು ಸಲಹೆ ನೀಡಬೇಕು ಎನ್ನುವುದು ತಿಳಿಯುವುದಿಲ್ಲ ಈ ಕುರಿತಾಗಿ ಏನೂ ಜ್ಞಾನವಿಲ್ಲ ಎಂದು ಪ್ರತಿಕ್ರಿಯಿಸಿದ್ದಾರೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನದಿಂದ ತಿಳಿದು ಬರುವ ಮಾಹಿತಿಯೇನೆಂದರೆ ಸಹಕಾರಿ ಸಂಘ, ಮಹಿಳಾ ಗ್ರಾಹಕ ಸಂಘ, ಮಹಿಳಾ ಮಂಡಳ ಹಾಗೂ ವಿಶೇಷವಾಗಿ ಪಂಚಾಯತ್ ಸಂಸ್ಥೆಗಳಲ್ಲಿ ಬುಡಕಟ್ಟು ಮಹಿಳೆಯರ ಭಾಗವಹಿಸುವಿಕೆ ತೃಪ್ತಿಕರವಾಗಿಲ್ಲ. ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವ ಮತ್ತು ಭಾಗವಹಿಸುವಿಕೆ, ಅಲ್ಲಿನ ಆಡಳಿತಾತ್ಮಕ ರಚನೆಗಳು, ಉದ್ದೇಶಗಳು ಹಾಗೂ ಜನಪರ ಕಾರ್ಯಕ್ರಮಗಳ ಕುರಿತಂತೆ ಜ್ಞಾನವನ್ನು ಒದಗಿಸುತ್ತದೆ. ಜೊತೆಗೆ ಸದಸ್ಯತನವಿದ್ದಾಗ ವೈಯಕ್ತಿಕವಾಗಿ ವಿವಿಧ ರೀತಿಯ ಕೌಶಲ್ಯಗಳಾದ ಸಂವಹನ, ನಾಯಕತ್ವ ಹಾಗೂ ಸಮಸ್ಯೆಗಳನ್ನು ಪರಿಹರಿಸುವುದು, ಒಟ್ಟು ಸೇರಿ ನಿರ್ಧಾರಗಳನ್ನು ತೆಗೆದುಕೊಳ್ಳುವುದು ಇತ್ಯಾದಿಗಳ ಜೊತೆಗೆ ಗುಂಪಿನ ಚಲನಾತ್ಮಕ ಅಂಶಗಳ ಕುರಿತು ಜ್ಞಾನವನ್ನು ವೃದ್ಧಿಸಿಕೊಳ್ಳಲು ಸಹಾಯವಾಗುತ್ತದೆ.

ಆದರೆ ಬುಡಕಟ್ಟು ಮಹಿಳೆಯರು ರಾಜಕೀಯವಾಗಿ ಸಾಮಾನ್ಯ ಮಹಿಳೆಯರಿಗಿಂತ ಬಹಳ ಹಿಂದುಳಿದಿದ್ದಾರೆ. ಜ್ಞಾನದ ಕೊರತೆ, ಶಿಕ್ಷಣದ ಕೊರತೆ, ಸೂಕ್ತ ಪ್ರೇರೇಪಣೆ ಅಥವಾ ಮಾರ್ಗದರ್ಶನದ ಕೊರತೆಯು ಇದಕ್ಕೆ ಕಾರಣವಾಗಿರುವುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದು.

ವೈ ।ರವೀಂದ್ರನಾಥ್‌ರಾವ್ ಅವರು ತಮ್ಮ ಅಧ್ಯಯನದಲ್ಲಿ (2003) ಕುಡುಬಿ ಜನಾಂಗದ ಪುರುಷರ ರಾಜಕೀಯ ಅರಿವು ಮತ್ತು ಭಾಗವಹಿಸುವಿಕೆಯ ಕುರಿತು ಪ್ರಸ್ತಾಪಿಸುತ್ತ ಕುಡುಬಿ ಜನಾಂಗದವರು ರಾಜಕೀಯವಾಗಿ ಪ್ರಜ್ಞಾವಂತರಾಗುತ್ತಿದ್ದಾರೆ. ಅವರಿಗೆ ಮತದಾನದ ಹಕ್ಕಿನ ತಿಳಿವು ಇದೆ. ಆದರೆ ಒಟ್ಟು 210 ಮಾಹಿತಿದಾರರಲ್ಲಿ 11(5.24%) ಮಾಹಿತಿದಾರರು ಆಗಿನ ಮಂಡಲ ಪಂಚಾಯತ್ ವ್ಯವಸ್ಥೆಯಲ್ಲಿ ಸದಸ್ಯರಾಗಿದ್ದು ಅವರ ಭಾಗವಹಿಸುವಿಕೆಯ ಕೊರತೆಯನ್ನು ಅವಲೋಕಿಸಿದ್ದಾರೆ.

ಕೊರಗ ಅಭಿವೃದ್ಧಿ ಸಂಘಗಳ ಒಕ್ಕೂಟದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಗೋಕುಲ್ ದಾಸ್ ಅವರು ಕೊರಗ ಸಮುದಾಯದ ಪ್ರಸ್ತುತ ರಾಜಕೀಯ ಸ್ಥಿತಿಯ ಕುರಿತಾದ ತಮ್ಮ ಅಧ್ಯಯನದಲ್ಲಿ ಹೀಗೆ ಅನಿಸಿಕೆ ವ್ಯಕ್ತಪಡಿಸಿದ್ದಾರೆ. "ನಮ್ಮ ಸ್ಥಳೀಯ ಆಡಳಿತ ವ್ಯವಸ್ಥೆಯಲ್ಲಿ ನಮ್ಮ ಜನಾಂಗದಿಂದ ಎಂತಹ ಪ್ರತಿನಿಧಿಗಳನ್ನು ಆಯ್ಕೆಮಾಡುತ್ತಾರೆಂದರೆ

ಸಮುದಾಯದ ಒಳತಿನ ಪ್ರಜ್ಞೆ ಇಲ್ಲದವರನ್ನು, ಹೆಬ್ಬೆಟ್ಟಿನವರನ್ನು. ಆದರೆ ಸಮುದಾಯದ ಸಮಸ್ಯೆ ತಿಳಿದಿರುವ ಪ್ರಜ್ಞಾವಂತ ಕೊರಗರನ್ನು ಪ್ರಬಲ ಪಾರ್ಟಿಗಳು ತಮ್ಮೊಳಗೆ ಸೇರಿಸಿಕೊಳ್ಳುವುದಿಲ್ಲ. ಸಂಘಟನೆಗಳಲ್ಲಿ ಸಕ್ರಿಯರಾಗಿರುವವರಿಗೆ ಟಿಕೇಟ್ ನೀಡುವುದಿಲ್ಲ. ಕೊಕ್ಕರ್ಣೆಯಲ್ಲಿ ಐದು ಮಂದಿ ವಿದ್ಯಾವಂತ ಕೊರಗ ಹೆಣ್ಣುಮಕ್ಕಳು ಚುನಾವಣೆ ಸ್ಪರ್ಧಿಸಲು ಮುಂದೆ ಬಂದರು. ಆದರೆ ಪಕ್ಷ ಅವರಿಗೆ ಟಿಕೇಟ್ ನೀಡಲಿಲ್ಲ" ಎಂಬ ಅವರ ಅಭಿಪ್ರಾಯಗಳಲ್ಲಿ ಒಟ್ಟು ಸಮಾಜದಿಂದ ರಾಜಕೀಯ ಬೆಂಬಲವೂ ಕೊರಗ ಸಮುದಾಯಕ್ಕೆ ಇಲ್ಲದಿರುವುದು ಸ್ಪಷ್ಟವಾಗುತ್ತದೆ. (2008: ಪು.ಸಂ 393)

ಸರ್ಕಾರವು ತಳಮಟ್ಟದ ರಾಜಕಾರಣದಲ್ಲಿ ಬುಡಕಟ್ಟು ಮಹಿಳೆಗೆ ನೀಡಿರುವ 33% ಮೀಸಲಾತಿಯು ರಾಜಕೀಯವಾಗಿ ಪ್ರವೇಶಾತಿ ಪಡೆಯಲು ಇರುವ ಒಂದು ಅವಕಾಶವಾಗಿದೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯ ಆಯ್ಕೆಯಾದ ಎಷ್ಟು ಬುಡಕಟ್ಟು ಮಹಿಳೆಯರು ನಿರ್ಭಯದಿಂದ ಒಟ್ಟು ಬುಡಕಟ್ಟು ಪರ ಅಭಿವೃದ್ಧಿಗೋಸ್ಕರ ತಮ್ಮ ಅಧಿಕಾರವನ್ನು ಚಲಾಯಿಸಿದ್ದಾರೆ ಎನ್ನುವುದನ್ನು ಮುಂದಿನ ಅಧ್ಯಯನಗಳಿಂದ ತಿಳಿದುಕೊಳ್ಳಬೇಕಾಗಿದೆ.

ಕೌಟುಂಬಿಕ ಹೊಣೆಗಾರಿಕೆ, ಮತ್ತು ದುಡಿಮೆ, ಅಪೌಷ್ಠಿಕತೆ, ಬಡತನ ಮತ್ತು ಅನಕ್ಷರತೆ, ವಿದ್ಯಾಭ್ಯಾಸದ ಕೊರತೆ, ರಾಜಕೀಯ ಮಾಹಿತಿ ಮತ್ತು ಬೆಂಬಲದ ಕೊರತೆ ಇವೆಲ್ಲವೂ ಬುಡಕಟ್ಟು ಮಹಿಳೆಯರ ರಾಜಕೀಯ ಮತ್ತು ಇತರ ಭಾಗವಹಿಸುವಿಕೆಗೆ ಅಡ್ಡಿಯಾಗಿವೆ.

ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಬುಡಕಟ್ಟು ಸಮುದಾಯಗಳ ಕುರಿತಾದ ತಮ್ಮ ಅಧ್ಯಯನದಲ್ಲಿ ಡಿ.ಮೀನಾಕ್ಷಿ ಅವರು ಚುನಾಯಿತ ಬುಡಕಟ್ಟು ಮಹಿಳೆಯರಿಗೆ, ರಾಜಕೀಯ ಸಶಕ್ತೀಕರಣ, ಸಬಲೀಕರಣ, ಗ್ರಹಿಕೆಗೆ ಬಾರದ ಪದಗಳಾಗಿರುವುದರಲ್ಲಿ ಅಚ್ಚರಿ ಇಲ್ಲ. ಸಂವಿಧಾನವು ಎಷ್ಟೇ ಸ್ಥಾನಮಾನ ಮತ್ತು ಹಕ್ಕು ಸೌಲಭ್ಯಗಳನ್ನು ನೀಡಿದರೂ ಇವುಗಳ ಉಪಯೋಗ ಪಡೆಯುವ ಧಾರಣ ಶಕ್ತಿಯು ಬುಡಕಟ್ಟು ಮಹಿಳೆಯರಿಗಿಲ್ಲ. ಈ ಹಿನ್ನೆಲೆಯಲ್ಲಿ ಸಾಮಾನ್ಯ ಹಾಗೂ ಗ್ರಾಮೀಣ ಮಹಿಳೆಯರಿಗೂ ಬುಡಕಟ್ಟು ಮಹಿಳೆಯರಿಗೂ ಮಹತ್ವದ ವ್ಯತ್ಯಾಸಗಳು ಗೋಚರಿಸುವುದಿಲ್ಲ.

ಮುಖ್ಯವಾಗಿ ಬುಡಕಟ್ಟು ಮಹಿಳೆಗೆ ಆರ್ಥಿಕ ಸ್ಥಿರತೆಯ ಕೊರತೆ ಕಾಣುತ್ತದೆ. ರಾಜಕೀಯ ಭಾಗವಹಿಸುವಿಕೆಯನ್ನು ಅರ್ಥಮಾಡಿಕೊಳ್ಳಲು ಶಿಕ್ಷಣದ ಅಗತ್ಯವಿದೆ.

ಅರ್ಥಶಾಸ್ತ್ರಜ್ಞ ಅಮರ್ತ್ಯಸೇನ್‌ರವರು **"ಧಾರಣ ಶಕ್ತಿಯ ದುಃಸ್ಥಿತಿಯೇ ಬಡತನ"** ಎಂದಿದ್ದಾರೆ. ಪ್ರವಾಹದೋಪಾದಿಯಲ್ಲಿ ಹರಿಯುತ್ತಿರುವ ಪ್ರಯೋಜನ ಹಾಗೂ ಅನುಕೂಲ ಮೈಗೂಡಿಸಬಲ್ಲ ಸಾಮರ್ಥ್ಯವನ್ನೇ ಧಾರಣ ಶಕ್ತಿ ಎಂದು ಕರೆಯಬಹುದಾಗಿದೆ. ಧಾರಣಶಕ್ತಿಯು ಶಿಕ್ಷಣದಿಂದ ಪ್ರಾಪ್ತವಾಗುತ್ತದೆ. ಧಾರಣ ಶಕ್ತಿಯನ್ನು ನಿರ್ಧರಿಸುವಲ್ಲಿ ಶಿಕ್ಷಣವೂ ಒಂದು. ಬುಡಕಟ್ಟು ಮಹಿಳೆಯರ ರಾಜಕೀಯ ಧಾರಣಶಕ್ತಿಯ ಕೊರತೆಯ ಕುಸಿತಕ್ಕೆ ಸಾಕ್ಷರತೆಯ ಕೊರತೆಯೂ ಕಾರಣ ಎಂದು ಗುರುತಿಸಬಹುದಾಗಿದೆ, ಎಂದ ಲೇಖಕರು ಬುಡಕಟ್ಟು ಮಹಿಳೆಯರನ್ನು ರಾಜಕೀಯ ಶಿಸ್ತಿನಲ್ಲಿ ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದ್ದು, ಬುಡಕಟ್ಟು ಮಹಿಳೆಯರನ್ನು ರಾಜಕೀಯವಾಗಿ ಸಶಕ್ತಗೊಳಿಸಲು ಪ್ರಯತ್ನಿಸಿದಾಗ ರಾಜಕೀಯ ಬಡತನ ದೂರ ಸರಿಯುಬಹುದು ಎಂದಿದ್ದಾರೆ. (2010: ಪು.ಸಂ 17)

ಬುಡಕಟ್ಟು ಸಂಘಟನೆಗಳಲ್ಲಿ ಹಾಗೂ ಒಟ್ಟು ಸ್ವ ಸಹಾಯ ಗುಂಪುಗಳ ಸಭೆಗಳಲ್ಲಿ ರಾಜಕೀಯ ಪ್ರವೇಶ ಮತ್ತು ಸಕ್ರಿಯ ಭಾಗವಹಿಸುವಿಕೆಯಿಂದ ಏನೆಲ್ಲಾ ಅನುಕೂಲತೆಗಳಿವೆ, ಆಥಿಕ ಅಭಿವೃದ್ಧಿ, ರಾಜಕೀಯ ಕ್ಷೇತ್ರಕ್ಕೆ ಇರುವ ಸಂಬಂಧಗಳು, ರಾಜಕೀಯದಲ್ಲಿ ಮಹಿಳೆ ಭಾಗವಹಿಸುವಿಕೆ ಹೇಗೆ ಒಟ್ಟು ಸಮುದಾಯಕ್ಕೆ ಒಳಿತು ತರುತ್ತದೆ. ಎನ್ನುವ ಚರ್ಚೆಗಳು ಆಗಾಗ್ಗೆ ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ಮಹಿಳಾ ಸಭೆಗಳಲ್ಲಿ ರಾಜಕೀಯ ಕುರಿತಾದ ಚರ್ಚೆಗಳ ಹಾಗೂ ಮಾತುಕತೆಗಳ ಕೊರತೆ ಇರುವುದನ್ನು ಗಮನಿಸಬಹುದಾಗಿದೆ.

ಹೇಮಲತಾ ಹೆಚ್. ಎಂ ಅವರು ತನ್ನ ಮಹಿಳಾ ಸಬಲೀಕರಣ ಎಂಬ ತಮ್ಮ ಅಧ್ಯಯನದಲ್ಲಿ ಬಡ ಮತ್ತು ಕೆಳಜಾತಿ ಕೆಳವರ್ಗದ ಸಶಕ್ತೀಕರಣ ತಾವಾಗಿಯೇ ಆಗುವಂತಹುದಲ್ಲ. ಅಂದರೆ ಈ ಗುಂಪಿನ ಮಹಿಳೆಯರು ತಾವಾಗಿಯೇ ಸಶಕ್ತರಾಗಲು ಸಾಧ್ಯವಿಲ್ಲ. ಹೊರಗಿನಿಂದ ಸರ್ಕಾರ ಅಥವಾ ಸರ್ಕಾರೇತರ ಸಂಸ್ಥೆಗಳ ಮಧ್ಯಪ್ರವೇಶದ ಅಗತ್ಯವಿದೆ. ಎಂದು ಅಭಿಪ್ರಾಯಪಟ್ಟಿದ್ದಾರೆ.(2003: ಪು.ಸಂ. 37)

ಮಹಿಳೆಯರು ಸಬಲೀಕರಣಗೊಳ್ಳಬೇಕಾದರೆ ಅವರಿಗೆ ಅವಶ್ಯಕ ಅಧಿಕಾರ ಮತ್ತು ಸಂಪನ್ಮೂಲಗಳು ಅಗತ್ಯ. ಹಕ್ಕು ಬಾಧ್ಯತೆಗಳನ್ನು ಅರಿತು ಸಬಲೀಕರಣಕ್ಕಾಗಿ ಹೋರಾಟ ನಡೆಸಿದಾಗ ಮಾತ್ರ ಸಬಲೀಕರಣ ಸಾಧ್ಯ. ಲಿಂಗಸಂಬಂಧಿ ಪಾತ್ರಗಳು ಬದಲಾಗಿ ಲಿಂಗಸಮಾನತೆ ಸಮಾಜದಲ್ಲಿ ಸೃಷ್ಟಿಯಾಗಬೇಕು. ಮಹಿಳಾ ಸಬಲೀಕರಣಕ್ಕಾಗಿ, ವರ್ಗಾತೀತವಾಗಿ ಮತ್ತು ಜಾತ್ಯಾತೀತವಾಗಿ ಅವಕಾಶ ವಂಚಿತ ಹಾಗೂ ದಮನಕ್ಕೆ ಒಳಗಾದ

ಮಹಿಳೆಯರೆಲ್ಲರ ಸಾಮಾಜಿಕ ಪರಿವರ್ತನೆ, ಆರ್ಥಿಕ ಸುಧಾರಣೆ, ರಾಜಕೀಯ ಪಾಲ್ಗೊಳ್ಳುವಿಕೆ ಮತ್ತು ಸಾಂಸ್ಕೃತಿಕ ಉತ್ತಮೀಕರಣ ಮುಂತಾದುವುಗಳನ್ನು ಮೂಲಭೂತವಾಗಿ ಒಳಗೊಂಡಿದೆ.

ಮಹಿಳೆಯರಿಗೆ ಕುಟುಂಬದ ಒಳಗಡೆ ಮತ್ತು ಹೊರಗಡೆ ಸಬಲೀಕರಣಕ್ಕೆ ಪೂರಕವಾದ ಸ್ವಾತಂತ್ರ್ಯ, ಸಮಾನತೆ, ಅವಕಾಶ, ಅಧಿಕಾರ ಮತ್ತು ಸಂಪನ್ಮೂಲಗಳು ಲಭಿಸಿದಾಗ ಮಾತ್ರ ಸಬಲೀಕರಣ ಪ್ರಕ್ರಿಯೆ ಉತ್ತಮಗೊಳ್ಳುತ್ತದೆ.

ಮಹಿಳಾ ಅಭಿವೃದ್ಧಿ ತಜ್ಞರು 21ನೇ ಶತಮಾನವನ್ನು ಮಹಿಳಾ ಸಬಲೀಕರಣದ ಶತಮಾನವೆಂದು ಗುರುತಿಸಿದ್ದಾರೆ. ಮಹಿಳಾ ಸಬಲೀಕರಣ ಬಹುಮುಖಿ ಆಂದೋಲನವಾಗಿದ್ದು ವಿವಿಧ ಆಯಾಮಗಳಿವೆ.

ಅವುಗಳೆಂದರೆ **ಭೌತಿಕ ಸಬಲೀಕರಣ** (ಆರೋಗ್ಯ, ಪೌಷ್ಠಿಕತೆ, ಆಹಾರ, ಬೆಳವಣಿಗೆ ಮತ್ತು ಜೀವಿತಾವಧಿ) **ಮಾನಸಿಕ ಸಬಲೀಕರಣ** (ಸಾಕ್ಷರತೆ, ಆತ್ಮವಿಶ್ವಾಸ, ವೃತ್ತಿಪರ ಕೌಶಲ್ಯತೆ, ಉದ್ಯಮಶೀಲತೆ ಮತ್ತು ತರಬೇತಿ) **ಸಾಮಾಜಿಕ ಸಬಲೀಕರಣ** (ಆಸ್ತಿಯಲ್ಲಿ ಹಕ್ಕು, ವಿವಾಹ ಅಂತಸ್ತು, ಕುಟುಂಬ ಯೋಜನೆ, ಕುಟುಂಬ ಕಲ್ಯಾಣ, ಸಮಾನತೆ, ಸ್ವಾತಂತ್ರ್ಯ ಇತ್ಯಾದಿ) **ಆರ್ಥಿಕ ಸಬಲೀಕರಣ** (ಆಸ್ತಿ ಹಕ್ಕು, ಉದ್ಯೋಗಾವಕಾಶ, ಸಂಪನ್ಮೂಲಗಳ ನಿಯಂತ್ರಣ ಮತ್ತು ಜೀವನ ಮಟ್ಟದಲ್ಲಿ ಸುಧಾರಣೆ) **ಶಾಸನಾತ್ಮಕ ಸಬಲೀಕರಣ** (ಮೂಲಭೂತ ಹಕ್ಕುಗಳು, ಸಂವಿಧಾನಾತ್ಮಕ ರಕ್ಷಣೆ, ಲಿಂಗತಾರತಮ್ಯದ ವಿರುದ್ಧ ರಕ್ಷಣೆ ಮತ್ತು ಮಹಿಳಾ ಕಲ್ಯಾಣಕ್ಕೆ ಕಾನೂನಿನ ರಕ್ಷಣೆ) **ರಾಜಕೀಯ ಸಬಲೀಕರಣ** (ಸಂಸತ್ತು, ಶಾಸನ ಸಭೆ ಮತ್ತು ಪಂಚಾಯತ್ ರಾಜ್ ಸಂಸ್ಥೆಯಲ್ಲಿ ಮೀಸಲಾತಿ, ಅಧಿಕಾರ, ಅವಕಾಶ ಇತ್ಯಾದಿ) ಮತ್ತು **ಧಾರ್ಮಿಕ ಸಬಲೀಕರಣ** (ಧಾರ್ಮಿಕ ಕಟ್ಟುಪಾಡು ಮತ್ತು ಕಂದಾಚಾರಗಳಿಂದ ವಿಮೋಚನೆ, ಧಾರ್ಮಿಕ ಸ್ವಾತಂತ್ರ್ಯ ಇತ್ಯಾದಿ).

ಶಕುಂತಲಾ ನರಸಿಂಹನ್ ಅವರು ಮಹಿಳಾ ಸಶಕ್ತೀಕರಣದ ತಮ್ಮ ಅಧ್ಯಯನದಲ್ಲಿ ಹೀಗೆ ಅಭಿಪ್ರಾಯಪಡುತ್ತಾರೆ. "ಬಹಳಷ್ಟು ಮಹಿಳಾ ಕಾರ್ಯಕ್ರಮಗಳು ಮಾಹಿತಿ ಕೊರತೆ, ಸೇವಾ ಜಾಲದ ಕೊರತೆ, ಸಮುದಾಯ ಸಹಭಾಗಿತ್ವದ ಕೊರತೆ ಮತ್ತು ವೈಜ್ಞಾನಿಕ ಮೌಲ್ಯಮಾಪನಗಳ ಕೊರತೆಯಿಂದ, ಸೂಕ್ತ ರೀತಿಯಲ್ಲಿ ಅನುಷ್ಠಾನಗೊಂಡಿಲ್ಲ. ಮಹಿಳಾ ಸಬಲೀಕರಣ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ಕ್ರಿಯಾಶೀಲ ಸಹಭಾಗಿಗಳೆಂದು ಪರಿಗಣಿಸದೇ ಇರುವುದರಿಂದ ಮಹಿಳೆಯರನ್ನು ಸಾಮಾಜಿಕ ಆರ್ಥಿಕ ಬದುಕಿನ ಮುಖ್ಯವಾಹಿನಿಯಲ್ಲಿ ಸಕ್ರಿಯವಾಗಿ ತೊಡಗಿಸಲು ಈ ಕಾರ್ಯಕ್ರಮಗಳಿಂದ ಸಾಧ್ಯವಾಗಿಲ್ಲದೇ

ಇರುವುದು ಶೋಚನೀಯ ಸಂಗತಿಯಾಗಿದೆ. ಬಹಳಷ್ಟು ಸರಕಾರಿ ಮಹಿಳಾ ಪುನರ್ವಸತಿ ಕಾರ್ಯಕ್ರಮಗಳು ಮಾನವೀಯ ಸ್ಪರ್ಶವನ್ನು ಕಳಕೊಂಡಿವೆ". (1999 ಪು.ಸಂ 35 ಮತ್ತು 52)

ದಕ್ಷಿಣ ಕನ್ನಡದ ಬುಡಕಟ್ಟುಗಳ ಕುಟುಂಬದಲ್ಲಿ ಮಹಿಳೆಯರ ದುಡಿಮೆ ಅನಿವಾರ್ಯವಾಗಿದೆ. ಆರ್ಥಿಕವಾಗಿ ಕುಟುಂಬಗಳು ನೆಮ್ಮದಿಯಿಂದ ಇರಬೇಕಾದರೆ ಮಹಿಳೆಯರ ದುಡಿಮೆ ಅನಿವಾರ್ಯವಾಗಿದೆ. ಈ ದೃಷ್ಟಿಯಿಂದ ಬುಡಕಟ್ಟು ಮಹಿಳೆ ಸ್ವಾವಲಂಬಿಯಾದರೂ, ಮನೆಗೆ ಸಂಬಂಧಿಸಿದ ಆರ್ಥಿಕ ನಿರ್ಧಾರಗಳಲ್ಲಿ ಪುರುಷರನ್ನು ಅವಲಂಬಿಸಿದ್ದಾರೆ. ಬುಡಕಟ್ಟು ಮಹಿಳೆ ಈ ದೃಷ್ಟಿಯಿಂದ ಆರ್ಥಿಕವಾಗಿ ಸಬಲಳು ಎಂದು ಒಪ್ಪಿಕೊಳ್ಳಲಾಗುವುದಿಲ್ಲ.

ಸಾಮಾಜಿಕ ಒಡನಾಟ ಮತ್ತು ಮನೆಯೊಳಗಿನ ದೌರ್ಜನ್ಯ, ಹಿಂಸೆಗಳು ಮುಖ್ಯವಾಹಿನಿಗಿಂತ ಕಡಿಮೆ ಇರುವ ದೃಷ್ಟಿಯಲ್ಲಿ ಬುಡಕಟ್ಟು ಮಹಿಳೆಗೆ ಕುಟುಂಬದಲ್ಲಿ ಗೌರವವಿದೆ ಎಂದು ಒಪ್ಪಿಕೊಳ್ಳಬಹುದು. ಹಾಗೆಯೇ ಕುಟುಂಬದಲ್ಲಿ ಪರಸ್ಪರ ಸಮಾನತೆಯ ಮೌಲ್ಯಗಳನ್ನು ಗಮನಿಸಬಹುದು. ಆದರೆ ಬುಡಕಟ್ಟು ಮಹಿಳೆಯರಲ್ಲಿರುವ ಕೀಳರಿಮೆ, ಒಟ್ಟು ಸಮಾಜದಲ್ಲಿ ಬುಡಕಟ್ಟು ಮಹಿಳೆಗಿರುವ ಸ್ಥಾನಮಾನ, ರಾಜಕೀಯ ಭಾಗವಹಿಸುವಿಕೆ, ಶಿಕ್ಷಣ ಮಟ್ಟ, ಆರೋಗ್ಯ ಸ್ಥಿತಿ ಮತ್ತು ಸಂಘಸಂಸ್ಥೆಗಳಲ್ಲಿ ಭಾಗವಹಿಸುವಿಕೆ ಇತ್ಯಾದಿಗಳನ್ನು ಮಾನದಂಡವಾಗಿ ಬಳಸಿಕೊಂಡು ವಿಶ್ಲೇಷಿಸಿದಾಗ ಬುಡಕಟ್ಟು ಮಹಿಳೆ ಸಶಕ್ತಳಾಗಲು ಇನ್ನೂ ಸಮಯಾವಕಾಶದ ಅನಿವಾರ್ಯತೆ ಇದೆ ಎಂದು ಅಭಿಪ್ರಾಯ ವ್ಯಕ್ತಪಡಿಸಬಹುದಾಗಿದೆ.

ಬುಡಕಟ್ಟು ಮಹಿಳೆಯರ ಒಟ್ಟು ಸಬಲೀಕರಣಕ್ಕೆ ಸರ್ಕಾರದ ಮತ್ತು ಸರ್ಕಾರೇತರ ಸಂಸ್ಥೆಗಳ ಪ್ರಯತ್ನದ ಅನಿವಾರ್ಯತೆಯನ್ನು ಪ್ರಸ್ತುತ ಅಧ್ಯಯನ ಸ್ಪಷ್ಟಪಡಿಸುತ್ತದೆ. ಅಧ್ಯಯನಕ್ಕೆ ಸಂಬಂಧಿಸಿದ ಇತರ ಒಟ್ಟು ಸಾರಾಂಶವನ್ನು ಮುಂದಿನ ಅಧ್ಯಯನದಲ್ಲಿ ಕಾಣಬಹುದಾಗಿದೆ.

# ಅಧ್ಯಾಯ – ಆರು

# ಅಧ್ಯಯನದ ಸಾರಾಂಶ ಮತ್ತು ಉಪಸಂಹಾರ

ದಕ್ಷಿಣ ಕನ್ನಡದ ಮುಖ್ಯ ಬುಡಕಟ್ಟುಗಳಾದ ಕೊರಗ, ಮಲೆಕುಡಿಯ, ಮರಾಠಿನಾಯ್ಕ, ಹಾಗೂ ಕುಡುಬಿ, ಬುಡಕಟ್ಟುಗಳ ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ-ಗತಿಗಳ ಮತ್ತು ಸಬಲೀಕರಣ ಪ್ರಕ್ರಿಯೆಯನ್ನು ಪರಿಶೀಲಿಸುವ ಹಾಗೂ ಮೌಲೀಕರಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಜಿಲ್ಲೆಯ ಮಂಗಳೂರು, ಬಂಟ್ವಾಳ, ಪುತ್ತೂರು, ಬೆಳ್ತಂಗಡಿ ಮತ್ತು ಸುಳ್ಯ ತಾಲೂಕುಗಳಿಂದ ಒಟ್ಟು 300 ಬುಡಕಟ್ಟು ಮಹಿಳೆಯರನ್ನು ಅಧ್ಯಯನಕ್ಕೆ ಮಾಹಿತಿದಾರರನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಆದಿವಾಸಿಗಳು ಅಥವಾ ಬುಡಕಟ್ಟು ಸಮುದಾಯ ಆಧುನಿಕ ನಾಗರಿಕತೆಯ ಪ್ರಭಾವಕ್ಕೊಳಗಾಗದೆ ತಮ್ಮದೇ ಆದ ಸಂಪ್ರದಾಯ, ಸಂಸ್ಕೃತಿ, ಜೀವನ ಕ್ರಮ ಹಾಗೂ ತಮ್ಮದೇ ನ್ಯಾಯ ವ್ಯವಸ್ಥೆಯೊಂದಿಗೆ ನೈಸರ್ಗಿಕ ಸಂಪನ್ಮೂಲಗಳಾದ ನೆಲ, ಜಲ ಮತ್ತು ಅರಣ್ಯಗಳನ್ನು ಅವಲಂಬಿಸಿ ಅವುಗಳನ್ನು ರಕ್ಷಿಸುತ್ತ, ಯಾವುದೇ ಆಸ್ತಿ ಕಲ್ಪನೆಗಳಿಲ್ಲದೆ ಸಾಮುದಾಯಿಕ ಒಡೆತನವನ್ನು ಗೌರವಿಸುತ್ತಾ, ನಿಸರ್ಗವನ್ನು ಸಂರಕ್ಷಿಸಿ ಮುಂದಿನ ತಲೆಮಾರಿಗೆ ನೀಡುತ್ತ ಬದುಕಿದವರು. ಭೂಮಿ ಮತ್ತು ಜೀವಸೃಷ್ಠಿಯ ಬಗ್ಗೆ ಭಾವನಾತ್ಮಕ ಬಂಧವನ್ನು ಬೆಳೆಸಿಕೊಂಡು, ಸುತ್ತಲ ಪರಿಸರವನ್ನು ಸುಸ್ಥಿರವಾಗಿ ಇಟ್ಟುಕೊಂಡು ಬಾಳಿದ ಸಮುದಾಯವಾಗಿದೆ.

ಕರ್ನಾಟಕದಲ್ಲಿ 49 ಬುಡಕಟ್ಟುಗಳನ್ನು ಗುರುತಿಸಲಾಗಿದ್ದು ಇದರ ಜನಸಂಖ್ಯೆ 3,463,986(6.6%) ಎಂದು ಅಂದಾಜಿಸಿದ್ದು, ಇದರಲ್ಲಿ ಸುಮಾರು ಅರ್ಧದಷ್ಟು ಬುಡಕಟ್ಟು ಮಹಿಳೆಯರಿದ್ದಾರೆ. ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಾಮಾಜಿಕ ಸ್ಥಿತಿ ಗತಿಯನ್ನು ತಿಳಿದುಕೊಳ್ಳಲು ಮಹಿಳೆಯರ ಕೌಟುಂಬಿಕ ವಿವರಗಳು, ಮಹಿಳೆಯರ ಇತರ ಸಮುದಾಯದೊಂದಿಗೆ ಸಾಮಾಜಿಕ ಸಂಬಂಧಗಳು, ಬುಡಕಟ್ಟು ಮಹಿಳೆಯರ ಬಿಡುವಿನ ವೇಳೆಯ ಚಟುವಟಿಕೆಗಳು, ಮಕ್ಕಳ ಶಿಕ್ಷಣದ ಕುರಿತಾದ ಅವರ ನಿಲುವುಗಳು, ಲಿಂಗ ಸಮಾನತೆಯ ಅಭಿಪ್ರಾಯಗಳು, ಹೆಣ್ಣು ಮಕ್ಕಳು ಋತುಮತಿಯಾಗುವ ಕುರಿತಾದ ತಿಳುವಳಿಕೆಗಳು, ಕುಟುಂಬ ಕಲ್ಯಾಣ ಯೋಜನೆಯ ನಿರ್ಧಾರಗಳ ಕುರಿತಾದ ಅಭಿಪ್ರಾಯಗಳನ್ನು ಅಧ್ಯಯನ ಮಾಡಲಾಗಿದೆ.

ಅಧ್ಯಯನಕ್ಕಾಗಿ 100 ಕುಡುಬಿ ಮಹಿಳೆಯರು, 100 ಮರಾಠಿ ನಾಯ್ಕ ಮಹಿಳೆಯರು, 60 ಮಲೆಕುಡಿಯ ಮಹಿಳೆಯರು ಹಾಗೂ 40 ಕೊರಗ ಮಹಿಳೆಯರು ಹೀಗೆ ಒಟ್ಟು 300 ಮಹಿಳೆಯರನ್ನು ಆಯ್ಕೆ ಮಾಡಲಾಗಿದೆ. ಮಾಹಿತಿದಾರರ ಸರಾಸರಿ ವಯಸ್ಸು 40-46 ಆಗಿದೆ. ಹೆಚ್ಚಿನ ಮಹಿಳೆಯರು 94(31%) 28 ವಯಸ್ಸಿನಿಂದ 38 ವಯಸ್ಸಿನ ಒಳಗಿದ್ದು ಈ ಅವಧಿಯನ್ನು ಎಳೆಯ ವಯಸ್ಕರು ಎನ್ನಬಹುದಾಗಿದ್ದು ರಾಜ್ಯದ ಇತರೇ ಮುಖ್ಯವಾಹಿನಿಯ ಸ್ತರದಲ್ಲೂ ಈ ವಯಸ್ಸಿನವರು ಹೆಚ್ಚಿನ ಸಂಖ್ಯೆಯಲ್ಲಿದ್ದು ಒಟ್ಟು 20 ರಿಂದ 35 ರ ಒಳಗೆ ಅತೀ ಹೆಚ್ಚು ಎಂದರೆ ಸುಮಾರು 1.81 ಕೋಟಿ ಜನರು ಇರುವರೆಂದು 2011ರ ವರದಿಗಳು ತಿಳಿಸುತ್ತವೆ. (ವಿಜಯ ಕರ್ನಾಟಕ ದೈನಿಕ ಅಕ್ಟೋಬರ್ 15, 2013)

ಅಧ್ಯಯನದ ಮಾಹಿತಿಗಾಗಿ ಆಯ್ಕೆ ಮಾಡಿಕೊಂಡ 300 ವಿವಿಧ ಬುಡಕಟ್ಟು ಮಹಿಳೆಯರಲ್ಲಿ 88.33% ಮಹಿಳೆಯರು ವಿವಾಹಿತರಾಗಿದ್ದು, ಕುಟುಂಬದಲ್ಲಿ ಸಾಮಾಜಿಕ ಸ್ಥಿತಿಗತಿ, ಆರ್ಥಿಕ ಪರಿಸ್ಥಿತಿ ಮತ್ತು ಸಬಲೀಕರಣ ಪ್ರಕ್ರಿಯೆಯ ಕುರಿತಂತೆ ಕೌಟುಂಬಿಕ ಹಾಗೂ ಸಾಮುದಾಯಿಕ ಜೀವನದ ಅನುಭವ ಅಧಿಕವಾಗಿರುತ್ತದೆ ಎನ್ನುವ ಅನಿಸಿಕೆಯಿಂದ ಹೆಚ್ಚಿನ ವಿವಾಹಿತ ಮಹಿಳೆಯರಿಂದಲೇ ಮಾಹಿತಿ ಸಂಗ್ರಹಿಸಲಾಗಿದೆ. ಆದಾಯಕ್ಕೆ ಮತ್ತು ಚಿನ್ನದ ಆಭರಣಗಳಿಗೆ ಸಂಬಂಧಪಟ್ಟ ಮಾಹಿತಿಯ ಹೊರತಾಗಿ ಉಳಿದೆಲ್ಲಾ ವಿಷಯಗಳಿಗೆ ಸಂಬಂಧಿಸಿದಂತೆ ನೇರ ಮಾಹಿತಿ ಸಂಗ್ರಹಿಸಲಾಗಿದೆ.

ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚಿನವರು ಅನಕ್ಷರಸ್ಥರಾಗಿದ್ದು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. 32.67% ಮಹಿಳೆಯರು ಅನಕ್ಷರಸ್ಥರಾಗಿದ್ದು 30.33% ಮಹಿಳೆಯರು ಕಿರಿಯ ಪ್ರಾಥಮಿಕ ಶಾಲೆಯ ಶಿಕ್ಷಣ ಪಡೆದಿದ್ದು 17% ಮಹಿಳೆಯರು ಪ್ರೌಢಶಾಲೆಯ ಶಿಕ್ಷಣ ಹಾಗೂ 10% ಮಹಿಳೆಯರು ಮಾತ್ರವೇ ಪದವಿ ಹಂತದ ಶಿಕ್ಷಣ ಪಡೆದಿದ್ದಾರೆ.

ಕಾಡಿನ ನಡುವಿನಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ಬುಡಕಟ್ಟು ಸಮುದಾಯಕ್ಕೆ ಶಿಕ್ಷಣದ ಪರಿಕಲ್ಪನೆ ಆಧುನಿಕ ಸಮಾಜದಿಂದ ಹೇರಲ್ಪಟ್ಟ ವ್ಯವಸ್ಥೆಯಾಗಿದೆ. ಸರ್ಕಾರವು ಗಿರಿಜನರ ಮಕ್ಕಳ ಶಿಕ್ಷಣಕ್ಕೆ ವಿವಿಧ ಕಡೆಗಳಲ್ಲಿ ಗಿರಿಜನರ ಆಶ್ರಮ ಶಾಲೆ ಪ್ರಾರಂಭಿಸಿದೆ. ಐ.ಟಿ.ಡಿ.ಪಿ (Integrated Tribal Development Programme) ಯೋಜನೆಯ ಅಡಿಯಲ್ಲಿ ಪ್ರಾರಂಭವಾಗಿರುವ ಈ ಶಾಲೆಗಳಲ್ಲಿ ಅನೇಕ ಸಮಸ್ಯೆಗಳಿರುವುದನ್ನು ಗಮನಿಸಲಾಗಿದೆ. ಮುಖ್ಯ ಶಿಕ್ಷಕರೇ ನಿಲಯ ಪಾಲಕರ ಹೊಣೆ ಹೊತ್ತುಕೊಳ್ಳುವುದು, ಸ್ವಚ್ಛತೆ

ಕಾಪಾಡಲು ಸಿಬ್ಬಂದಿಗಳ ಕೊರತೆ, ಸ್ವಚ್ಛ ಕುಡಿವ ನೀರಿನ ಸಮಸ್ಯೆ, ಶೌಚಾಲಯಕ್ಕೆ ನಳ್ಳಿ ನೀರಿನ ವ್ಯವಸ್ಥೆಯ ಕೊರತೆ ಇತ್ಯಾದಿಗಳನ್ನು ಕಂಡುಕೊಳ್ಳಲಾಗಿದೆ.

ಕೊಡಗು ಜಿಲ್ಲೆಯ ಪಿರಿಯಾಪಟ್ಟಣ ತಾಲೂಕಿನ ಮಾರೂರು ಗಿರಿಜನ ಆಶ್ರಮ ಶಾಲೆಯ ಕುರಿತು ಕ್ಷೇತ್ರ ಅಧ್ಯಯನ ನಡೆಸಲಾಗಿದೆ. ಈ ಕ್ಷೇತ್ರ ಅಧ್ಯಯನದಲ್ಲಿ ಕಂಡುಕೊಂಡಂತೆ ಮೇಲೆ ಉಲ್ಲೇಖಿಸಿದ ಸಮಸ್ಯೆಗಳಲ್ಲದೆ, ಸುಮಾರು 6–7 ವರುಷದ ಪುಟ್ಟ ಮಕ್ಕಳು ತಮ್ಮ ಬಟ್ಟೆಯನ್ನು ಸ್ವಚ್ಛವಾಗಿಲ್ಲದ ನೀರಿನಲ್ಲಿ ಒಗೆಯುತ್ತಿದ್ದುದು, ಸ್ವಚ್ಛವಾಗಿಲ್ಲದ ಸಮವಸ್ತ್ರ ಧರಿಸುತ್ತಿದ್ದುದು, ಒಟ್ಟು ಆಶ್ರಮ ಶಾಲೆಯ ವಾತಾವರಣವೇ ಶಿಕ್ಷಣ ಪೂರಕವಾಗಿಲ್ಲದೇ ಇರುವುದನ್ನು ಗಮನಿಸಲಾಗಿದೆ.

ಈ ಆಶ್ರಮ ಶಾಲೆಗಳಿಗೆ ಹೋಲಿಸಿದರೆ ದಕ್ಷಿಣ ಕನ್ನಡದ ಗಿರಿಜನ ಆಶ್ರಮ ಶಾಲೆಗಳ ಸ್ಥಿತಿಗತಿ ಆಶಾದಾಯಕವಾಗಿದ್ದರೂ, ಗಿರಿಜನ ಸಂಸ್ಕೃತಿಯ ಪರಿಚಯವಿರದ ಉಪಾಧ್ಯಾಯರುಗಳ ನೇಮಕ ಈ ಶಾಲೆಗಳಲ್ಲಿರುವುದು ಹಾಗೂ ವಯಸ್ಸಿಗೆ, ತರಗತಿಗೆ ಅನುಗುಣವಾಗಿ ವಿದ್ಯಾರ್ಥಿ ಶೈಕ್ಷಣಿಕವಾಗಿ ಮುಂದುವರಿಯದೇ ಇರುವ ಕೊರತೆಯು ಕಂಡುಬಂದಿದೆ. ಭಾರತದಲ್ಲಿ ಒಟ್ಟು ಸಾಕ್ಷರತೆ 64.8% ಇದ್ದು ಪರಿಶಿಷ್ಟ ಪಂಗಡದ ಸಾಕ್ಷರತೆ 47.1% ಆಗಿದ್ದು ಕರ್ನಾಟಕದ ಒಟ್ಟು ಸಾಕ್ಷರತೆ 66.6%. (2001ರಲ್ಲಿ) ಇದ್ದು ಪರಿಶಿಷ್ಟ ಪಂಗಡದ ಸಾಕ್ಷರತೆ 48.3%ರಷ್ಟು ಮಾತ್ರವೇ ಏರಿಕೆ ಕಂಡುಬಂದಿರುವುದು ಒಟ್ಟು ಬುಡಕಟ್ಟು ಜನಾಂಗದ ಶೈಕ್ಷಣಿಕ ಪರಿಸ್ಥಿತಿಯನ್ನು ಬಿಂಬಿಸುತ್ತದೆ.

ಒಟ್ಟಿನಲ್ಲಿ ಬುಡಕಟ್ಟು ಪೂರಕವಲ್ಲದ ಶಿಕ್ಷಣದ ಕೊರತೆಯೊಂದಿಗೆ ಬಡತನ, ಮೂಢನಂಬಿಕೆ, ಅರಿವಿನ ಕೊರತೆ, ಶಿಕ್ಷಣಕ್ಕೆ ಪ್ರೋತ್ಸಾಹದ ಕೊರತೆ ಇವೆಲ್ಲವೂ ಬುಡಕಟ್ಟು ಜನಾಂಗಕ್ಕೆ ಔಪಚಾರಿಕ ಶಿಕ್ಷಣಕ್ಕಿರುವ ಅಡ್ಡಿಗಳಾಗಿವೆ.

ಬುಡಕಟ್ಟು ಜನರ ಶಿಕ್ಷಣಕ್ಕೂ ಅವರ ಉದ್ಯೋಗಕ್ಕೂ ಸಂಬಂಧವಿದೆ. ಅಥವಾ ತೊಡಗಿಸಿಕೊಂಡಿರುವ ಉದ್ಯೋಗವು ಪಡಕೊಂಡಿರುವ ಶಿಕ್ಷಣದ ಮೇಲೆ ಅವಲಂಬಿತವಾಗಿದೆ. ಆದಿವಾಸಿಗಳಿಗೆ ಕೃಷಿಯ ನಂತರ ಅರಣ್ಯದ ಕೆಲಸವೇ ಅತಿ ಮುಖ್ಯ ಕಾರ್ಯ ಚಟುವಟಿಕೆಯಾದರೂ, ಅರಣ್ಯಗಳನ್ನು ರಾಜ್ಯಗಳ ಆಸ್ತಿಯೆಂದು ಘೋಷಿಸಿದ್ದರಿಂದ, ಆದಿವಾಸಿ ಜೀವನಾಧಾರವನ್ನೇ ವಂಚಿಸಿದಂತಾಗಿದೆ. ಸಾಂಪ್ರದಾಯಿಕವಾಗಿ ಅರಣ್ಯದಲ್ಲಿ ಬೇಟೆಯಾಡುವುದಕ್ಕೆ, ಅರಣ್ಯ ಸಂಪನ್ಮೂಲಗಳನ್ನು ಸಂಗ್ರಹಿಸಲು ಹಾಗೂ ಅರಣ್ಯದ ಗೆಡ್ಡೆ

ಗೆಣಸುಗಳನ್ನು ಪಡೆಯಲು ಸರಕಾರ ಅವಕಾಶ ಕೊಡುತ್ತಿಲ್ಲ. ಹೀಗೆ ಆದಿವಾಸಿಗಳು ಅರಣ್ಯ ಗುತ್ತಿಗೆದಾರರ ಆಳುಗಳಾದರು. ಆದರೆ ಈ ಉದ್ಯೋಗ ಸುಗ್ಗಿ ಕಾಲದಲ್ಲಿ ಮಾತ್ರ ಇದ್ದು, ಹಾಗೂ ದೀರ್ಘಕಾಲದವರೆಗೆ ಯಾವುದೇ ಜೀವನಾಧಾರವಿಲ್ಲದೆ, ಇರುವುದು ಅರಣ್ಯ ಗುತ್ತಿಗೆದಾರರ ಶೋಷಣೆಗೆ ಒಳಗಾದರು. ಈ ಎಲ್ಲಾ ಕಾರಣಗಳಿಂದ ಬುಡಕಟ್ಟುಗಳು ಅನಿವಾರ್ಯವಾಗಿ ಕಸುಬಿನಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಗಿ ಬಂತು.

ಅಧ್ಯಯನದಲ್ಲಿ ಕಂಡುಕೊಂಡಂತೆ ದಕ್ಷಿಣ ಕನ್ನಡದಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ 58% ಮಹಿಳೆಯರು ಬೀಡಿಯ ಕಸುಬನ್ನು ಅವಲಂಬಿಸಿದ್ದಾರೆ. ಹಾಗೂ 2.33% ಮಹಿಳೆಯರು ಕುಲಕಸುಬನ್ನು ಅವಲಂಬಿಸಿದ್ದಾರೆ. ಹಾಗೂ ಕ್ರಮವಾಗಿ ಕೂಲಿಯಲ್ಲಿ 15.00% ಮಹಿಳೆಯರು, ಸ್ವಂತ ಬೇಸಾಯದಲ್ಲಿ 05.00% ಮಹಿಳೆಯರು, ಖಾಸಗಿ ಉದ್ಯೋಗದಲ್ಲಿ 10.34% ಮಹಿಳೆಯರು ಮತ್ತು 1.33% ಮಹಿಳೆಯರು ಸಣ್ಣ ಪುಟ್ಟ ಸರಕಾರಿ ಉದ್ಯೋಗದಲ್ಲಿದ್ದಾರೆ.

ಸಿ.ಪಾರ್ವತಮ್ಮ ಮತ್ತು ಜಿ.ಎಸ್.ರಾಜೇಗೌಡ ಅವರ ಆದಿವಾಸಿ ಕುರಿತಾದ ಅಧ್ಯಯನದಲ್ಲಿ ಹೀಗೆ ಉಲ್ಲೇಖವಿದೆ. "ಮಹಾತ್ಮ ಗಾಂಧೀಜಿಯವರ ಪರಿಷ್ಕೃತ 'ಟ್ರಸ್ಟೀ ಶಿಪ್ ತತ್ವ'ದ ಪ್ರಕಾರ ವೈಯಕ್ತಿಕ ಆಸ್ತಿ ಆದಾಯ ಅಗತ್ಯವಿರುವಷ್ಟು ಇರಲಿ. ಉಳಿದದ್ದು ಸಮುದಾಯದ ಆಸ್ತಿಯಾಗಲಿ. ಅಲ್ಲಿರುವವರು ಪರಸ್ಪರ ಸಹಕಾರ ಮತ್ತು ಅನ್ಯೋನ್ಯತೆಯಿಂದ ವೃದ್ಧಿಗೊಳಿಸಿ ಅನುಭವಿಸಲಿ. ಇದು ಯಾವುದೇ ಸಮಸ್ಯೆಗೆ ಈಡು ಮಾಡುವುದಿಲ್ಲ. ಇದನ್ನೇ ಸಾವಿರಾರು ವರ್ಷಗಳಿಂದ ಬುಡಕಟ್ಟು ಜನರು ಮಾಡುತ್ತ. ಅನುಭವಿಸುತ್ತ, ಹಾಗೂ ಉಳಿಸುತ್ತ ಬಂದಿದ್ದಾರೆ. ಪ್ರತಿಯೊಬ್ಬರಿಗೂ ಕನಿಷ್ಟ ಉದ್ಯೋಗ ಮತ್ತು ಕನಿಷ್ಟ ಆದಾಯ ಇರಬೇಕು ಎನ್ನುವ ತತ್ವಗಳಲ್ಲಿ ಮಹಾತ್ಮಗಾಂಧೀಜಿಯವರಿಗೆ ಬುಡಕಟ್ಟು ಜನರ ಕುರಿತಾದ ಕಳಕಳ ವ್ಯಕ್ತವಾಗುತ್ತದೆ". (2005: ಪು.ಸಂ 13)

ದಕ್ಷಿಣ ಕನ್ನಡದಲ್ಲಿ ಪೂರಕ ಶಿಕ್ಷಣವಿಲ್ಲದೆ ಇರುವುದರಿಂದ ಬುಡಕಟ್ಟು ಮಹಿಳೆಯರ ಆರ್ಥಿಕ ಸ್ವಾವಲಂಬನೆಗೆ ಸಮರ್ಪಕ ಉದ್ಯೋಗದ ಕೊರತೆಯನ್ನು ಕಾಣಬಹುದಾಗಿದೆ. ಬುಡಕಟ್ಟು ಮಹಿಳೆಯರಿಗೆ ತಮ್ಮ ಸಮುದಾಯದ ಕುರಿತಾದ ಅನಿಸಿಕೆಯನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಹೆಚ್ಚಿನ ಎಲ್ಲಾ ಬುಡಕಟ್ಟು ಮಹಿಳೆಯರು ತಮ್ಮ ಜನಾಂಗದ ಕುರಿತು ಹೆಮ್ಮೆಯಿದೆ ಎಂದಿದ್ದಾರೆ. ಆದರೆ ಕೊರಗ ಬುಡಕಟ್ಟು ಮಹಿಳೆಯರು ತಾವು ತಮ್ಮ ಜನಾಂಗದ ಬಗ್ಗೆ ಹೆಮ್ಮೆ ಪಡುತ್ತೇವೆ ಎಂದರೂ ಮುಖಭಾವನೆಯಲ್ಲಿ ಅದು

ವ್ಯಕ್ತವಾಗಿಲ್ಲದೇ ಇದ್ದುದನ್ನು ಗಮನಿಸಲಾಗಿದೆ. ಒಟ್ಟು 93.33% ಮಹಿಳೆಯರು ತಮ್ಮ ಸುತ್ತಲಿರುವ ಇತರ ಬುಡಕಟ್ಟೇತರ ಮಹಿಳೆಯರೊಂದಿಗೆ ಉತ್ತಮ ಸಾಮರಸ್ಯವಿರುವುದಾಗಿ ಅಭಿಪ್ರಾಯಪಟ್ಟಿದ್ದಾರೆ. ಹಾಗೂ ತಮ್ಮ ಮನೆಯಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಅವರನ್ನು ಆಹ್ವಾನಿಸಿ ಅವರು ಭಾಗವಹಿಸಿದಾಗ ನಮಗೂ ಸಂತೋಷವಾಗುತ್ತದೆ ಎಂದು ಪ್ರತಿಕ್ರಯಿಸಿದ್ದು ಅಲ್ಪ ಸಂಖ್ಯಾತ ಬುಡಕಟ್ಟು ಮಹಿಳೆಯರು ಸರಳ ಕಾರಣಗಳಿಗೋಸ್ಕರ ಬುಡಕಟ್ಟೇತರ ನೆರೆಹೊರೆಯವರೊಡನೆ ಭಿನ್ನಾಭಿಪ್ರಾಯವಾಗಿರುವುದನ್ನು ವ್ಯಕ್ತಪಡಿಸಿದ್ದಾರೆ.

ಮೂಲತಃ ಬುಡಕಟ್ಟು ಸಮುದಾಯವು ಸ್ವತಃ ಜಗಳವಿಲ್ಲದ, ಗುಂಪುಗಾರಿಕೆ ಇಲ್ಲದೆ, ಕಷ್ಟದಲ್ಲಿ ಎಲ್ಲರೊಡನೆ ಭಾಗಿಯಾಗಿ ಜೀವನ ನಡೆಸುವ ಗುಂಪಾಗಿದೆ. ಇದಕ್ಕೆ ಕಾರಣ ತಮ್ಮ ಹಿರಿಯರಲ್ಲಿದ್ದ ಒಳ್ಳೆಯ ಗುಣಗಳೆಂದು ಮಹಿಳೆಯರು ಸ್ಮರಿಸಿಕೊಳ್ಳುತ್ತಾರೆ. ಇಂದು ಅಲ್ಲೊಂದು ಇಲ್ಲೊಂದು ಸಮುದಾಯದಲ್ಲಿ ಬಿರುಕು ಮೂಡಲು, ಹೊರಜಗತ್ತಿನ ನಾಗರಿಕ ಪ್ರಪಂಚದ ಪರಿಚಯವೇ ಕಾರಣ ಎಂದು ಅಭಿಪ್ರಾಯಪಡುತ್ತಾರೆ.

ಮೃದು ಸ್ವಭಾವದ, ಸಮಾನತೆಯ ಗುಣವುಳ್ಳ, ಸಹಕಾರದ, ಹಂಚಿಕೊಳ್ಳುವ, ತಾರತಮ್ಯವಿರದ, ಸಾಮೂಹಿಕ ಆಸ್ತಿಯಲ್ಲಿ ನಂಬಿಕೆಯಿರುವ, ಬುಡಕಟ್ಟು ಸಮುದಾಯ ಇಂದಿಗೂ ತಮ್ಮೊಳಗಿನ ಭಿನ್ನಾಭಿಪ್ರಾಯಗಳನ್ನು ತಾವೇ ಪರಿಹರಿಸಿಕೊಳ್ಳುವುದು ಸ್ವಾವಲಂಬನೆಗೊಂದು ಉತ್ತಮ ಉದಾಹರಣೆಯಾಗಿದೆ.

ಬುಡಕಟ್ಟು ಮಹಿಳೆಯರು ಅವಿರತ ದುಡಿಯುವವರಾದುದರಿಂದ ಬಿಡುವಿನ ವೇಳೆಯು ಅವರಿಗಿಲ್ಲ. ಆದಾಗ್ಯೂ ವಿರಾಮ ವೇಳೆ ಅಥವಾ ಬಿಡುವಿನ ವೇಳೆ ಆಧುನಿಕ ಯುಗದಲ್ಲಿ ಜನರು ಎಡೆ-ಬಿಡದೆ ದುಡಿಯುವ ಪರಿಣಾಮವಾಗಿ ಉದ್ಭವಿಸಿದ ಪರಿಕಲ್ಪನೆಯಾಗಿರುವುದರಿಂದ ಬುಡಕಟ್ಟು ಸಮುದಾಯಕ್ಕೆ ವೃತ್ತಿ ಮತ್ತು ಪ್ರವೃತ್ತಿಯ ಯೋಚನೆಗಳು ಅಷ್ಟಾಗಿ ಹೊಂದುವುದಿಲ್ಲ. ಸ್ವಾಭಾವಿಕವಾಗಿ ಮನರಂಜನೆ ಪಡೆಯುತ್ತಿದ್ದ ಬುಡಕಟ್ಟು ಸಮುದಾಯಗಳು ಹೊರಜಗತ್ತಿನ ಸಂಪರ್ಕದಿಂದಾಗಿ ಇಂದು ಮನರಂಜನೆಗಾಗಿ ದೂರದರ್ಶನವನ್ನು ಅವಲಂಬಿಸಿರುವುದು ಅವರ ಸಾಂಸ್ಕೃತಿಕ ಕ್ಷೇತ್ರದಲ್ಲಾದ ಸ್ಥಿತ್ಯಂತರವನ್ನು ಬಿಂಬಿಸುತ್ತದೆ.

ಪತ್ರಿಕೆ ಓದುವ ಹವ್ಯಾಸವು 2.53% ಮಹಿಳೆಯರಲ್ಲಿ ಮಾತ್ರವೇ ಇರುವುದನ್ನು ಗಮನಿಸಲಾಗಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಡುಬಿ ಜನಾಂಗದಲ್ಲಿ ವಯಸ್ಕರು

ಶಿಕ್ಷಣವನ್ನು ಪಡೆಯುತ್ತಿದ್ದುದನ್ನು ತಮ್ಮ ಅಧ್ಯಯನದಲ್ಲಿ ವೈ. ರವೀಂದ್ರನಾಥ ಅವರು ಉಲ್ಲೇಖಿಸಿ ಕೇವಲ 5.24ಶೇ ಕುಡುಬಿ ಮಾಹಿತಿದಾರರು ಮನೆಗೆ ಪತ್ರಿಕೆ ತರಿಸುತ್ತಿದ್ದರು(2003) ಎಂದು ಅಭಿಪ್ರಾಯಪಟ್ಟಿರುವುದನ್ನು ಪ್ರಸ್ತುತ ದ.ಕನ್ನಡದ ಬುಡಕಟ್ಟು ಸಮುದಾಯಕ್ಕೂ ಈ ವಿಷಯ ಅನ್ವಯಿಸುವುದನ್ನು ಗಮನಿಸಬಹುದಾಗಿದೆ.

ಬುಡಕಟ್ಟು ಮಹಿಳೆಯರು ತಮ್ಮ ವಿರಾಮದ ವೇಳೆಯಲ್ಲಿ ತೊಡಗಿಸಿಕೊಂಡಿರುವ ಚಟುವಟಿಕೆಗಳಲ್ಲಿ ವ್ಯತ್ಯಯಗಳಾಗಿ ಟಿ.ವಿ.ವೀಕ್ಷಣೆ, ಪತ್ರಿಕೆ ಓದುವುದು, ರೇಡಿಯೋ ಆಲಿಸುವಿಕೆ, ಹರಟೆ, ಇತರ ಮನೆಗಳಿಗೆ ಭೇಟಿ ನೀಡುವುದು, ಪತ್ರಿಕೆ ಓದುವುದು, ಗುಡಿಕೈಗಾರಿಕೆ, ಮನೆಕೆಲಸ ಇತ್ಯಾದಿಗಳನ್ನು ತೆಗೆದುಕೊಂಡಿದ್ದು ಅತ್ಯಂತ ಹೆಚ್ಚಿನ ಅಂದರೆ 46.67% ಮಹಿಳೆಯರು "ನಮಗೆ ಬಿಡುವಿನ ವೇಳೆಯೇ ಇಲ್ಲ, ಹಾಗೊಂದು ವೇಳೆ ಇದ್ದರೆ ನಾವು ಮನೆಗೆಲಸದಲ್ಲೇ ತೊಡಗಿಸಿಕೊಳ್ಳುತ್ತೇವೆ ಎಂದು ಪ್ರತಿಕ್ರಯಿಸಿದ್ದಾರೆ". ಒಟ್ಟು 53.33% ಮಹಿಳೆಯರು ಮೇಲೆ ಪ್ರಸ್ತಾಪಿಸಿದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದು ಇದರಲ್ಲಿ ಅತ್ಯಂತ ಹೆಚ್ಚಿನ ಎಂದರೆ 31.67% ಮಹಿಳೆಯರು ವಿರಾಮದ ವೇಳೆಯಲ್ಲಿ ದೂರದರ್ಶನ ವೀಕ್ಷಿಸುತ್ತಾರೆ. ದೂರದರ್ಶನದ ವೀಕ್ಷಣೆಯಲ್ಲಿ ಹೆಚ್ಚಿನ ಮಹಿಳೆಯರು ಧಾರವಾಹಿ ಮತ್ತು ಸಿನಿಮಾಗಳತ್ತ ಹೆಚ್ಚು ಆಸಕ್ತಿ ವಹಿಸುವುದನ್ನು ಅಧ್ಯಯನ ಸ್ಪಷ್ಟಪಡಿಸುತ್ತದೆ.

ಅಧ್ಯಯನದಲ್ಲಿ ಕಂಡುಕೊಂಡಂತೆ ಲಿಂಗಸಮಾನತೆಯ ಕುರಿತಾದ ಬುಡಕಟ್ಟು ಮಹಿಳೆಯರ ಅಭಿಪ್ರಾಯವು ಗಂಡು ಮತ್ತು ಹೆಣ್ಣು ಸಮಾನರು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಮಹಿಳೆಯರು ಪ್ರಕೃತಿಯಲ್ಲಿ ಗಂಡು ಮತ್ತು ಹೆಣ್ಣು ಸಮಾನರು ಎಂದು ಪ್ರತಿಕ್ರಯಿಸಿದ್ದು ಕೆಲವೊಂದು ಬುಡಕಟ್ಟುಗಳನ್ನು ಹೊರತು ಪಡಿಸಿದರೆ (ಜೇನುಕುರುಬ, ಮರಾಠಿ ನಾಯ್ಕ, ಕುಡುಬಿ) ಹೆಚ್ಚಿನ ಬುಡಕಟ್ಟುಗಳ ಸಮುದಾಯದಲ್ಲಿ ಮಾತೃ ಪ್ರಧಾನತೆ ಇದೆ.

ಸಿ. ಪಾರ್ವತಮ್ಮ ಮತ್ತು ಜಿ.ಎಸ್. ರಾಜೇಗೌಡ ಅವರು ಜೇನುಕುರುಬರಿಗೆ ಸಂಬಂಧಿಸಿದ ಅಧ್ಯಯನದಲ್ಲಿ ಹೀಗೆ ಪ್ರತಿಕ್ರಯಿಸಿದ್ದಾರೆ. "ಬುಡಕಟ್ಟುಗಳಲ್ಲಿ ಪಿತೃ ಪ್ರಧಾನ ವ್ಯವಸ್ಥೆಯಿದ್ದರೂ, ಹಿಂದು ಜಾತಿ ಸಮಾಜದ ಪಿತೃ ಪ್ರಧಾನ ವ್ಯವಸ್ಥೆಗೂ ಆದಿವಾಸಿ ಪಿತೃಪ್ರಧಾನ ವ್ಯವಸ್ಥೆಗೂ ವ್ಯತ್ಯಾಸಗಳಿರುತ್ತವೆ. ಇಲ್ಲಿ ಹೆಣ್ಣು ಗಂಡಿನ ನಡುವೆ ಸಮಾನತೆಯಿದೆ. ಸ್ವಾತಂತ್ರ್ಯವಿದೆ. ಇಬ್ಬರೂ ಸಮಾನರು. ಇಬ್ಬರೂ ಶ್ರಮಜೀವಿಗಳು, ಸಹಕಾರದ, ಹಂಚಿಕೊಳ್ಳುವ, ವ್ಯಕ್ತಿಗೌರವವುಳ್ಳ, ಸಾಮೂಹಿಕ ಆಸ್ತಿಯಲ್ಲಿ ನಂಬಿಕೆ ಇರುವ, ಸಹಮತಕ್ಕೆ ಬೆಲೆ ಇರುವ, ವಿಧವಾ

ವಿವಾಹಕ್ಕೆ ಮಾನ್ಯತೆ ಇರುವ, ಹೆಣ್ಣಿನ ಮೇಲೆ ಹೆಚ್ಚಿನ ಕಟ್ಟಳೆಗಳನ್ನು ಹೇರದ ವ್ಯವಸ್ಥೆ ಬುಡಕಟ್ಟುಗಳಲ್ಲಿದೆ.

ಗಂಡ-ಹೆಂಡತಿ ಪರಸ್ಪರ ಏಕವಚನದಲ್ಲಿ ಸಂಬೋಧಿಸಿ ಮಾತನಾಡಿದರೂ ಪ್ರೀತಿ ಗೌರವದಿಂದಿರುತ್ತಾರೆ. ತಾಳಿ ಅನಿವಾರ್ಯವಲ್ಲ. ಪರಸ್ಪರ ಒಪ್ಪಿಗೆ ಮುಖ್ಯ. ಕಾಡಿಗೆ ಹೋಗುವುದಾದರೂ ಸಂಸಾರ ಸಮೇತವಾಗಿ ಹೋಗುತ್ತಾರೆ. ಯಾರೂ ಯಾರನ್ನೂ ಹೀಯಾಳಿಸುವಂತಿಲ್ಲ. ಹಾಗೇನಾದರೂ ದಂಪತಿಗಳ ನಡುವೆ ಸಮಸ್ಯೆ ಬಂದಾಗ ಯಜಮಾನನ ಮುಂದಿರಿಸಿ ಅನಿವಾರ್ಯವಾದಾಗ ಬೇರ್ಪಡುತ್ತಾರೆ. ಅವರಿಗೆ ಸೇರಿದ ಮಕ್ಕಳು ಅಪ್ಪ ಅಮ್ಮ ಯಾರ ಬಳಿಯಲ್ಲಾದರೂ ಇರಬಹುದು. ಸಣ್ಣ ಮಗು ಇದ್ದರೆ ತಾಯಿಯ ಬಳಿಯಲ್ಲಿರುತ್ತದೆ.(2005: ಪು.ಸಂ 2 ಮತ್ತು 3) ಎನ್ನುವ ಈ ಬರಹಗಳಲ್ಲಿ ಬುಡಕಟ್ಟು ಸಮುದಾಯದಲ್ಲಿ ಗಂಡು ಹೆಣ್ಣುಗಳಿಬ್ಬರೂ ಸಮಾನರು ಎನ್ನುವ ಮೌಲ್ಯವನ್ನು ಕಾಣಬಹುದಾಗಿದೆ.

"ಪುರುಷ ಮತ್ತು ಸ್ತ್ರೀಯರಲ್ಲಿನ ವರ್ತನೆಗಳು ಜೈವಿಕವಾದುದಲ್ಲ. ಇವುಗಳು ಸಮಾಜದ ಸಂಸ್ಕೃತಿಗಳಿಂದ ನಿರ್ಧರಿಸಲ್ಪಡುತ್ತವೆ" ಎಂದು ಮಹಿಳಾ ಚಿಂತಕರಾದ ರಾಬರ್ಟ್ ಸ್ಟೂಲರ್ (1968) ಮತ್ತು ಆನ್ ಓಕ್ಲೆ(1972) ವಾದಿಸುತ್ತಾರೆ. (ಹರ್‌ಲಾಂಬಸ್ ಮತ್ತು ಹಾಲ್ ಬರ್ನ್ : 2000: ಪು.ಸಂ 127 ಮತ್ತು 128)

ಹಾಗೆಯೆ ಬುಡಕಟ್ಟು ಕುಟುಂಬಗಳಲ್ಲಿ ದಂಪತಿಗಳಲ್ಲಿ ಸಮಾನತೆ, ಪರಸ್ಪರ ಗೌರವ ಇರುವುದು ವಾಸ್ತವವಾದರೂ, ಮುಖ್ಯ ವಾಹಿನಿಯ ಜನರ ಪ್ರಭಾವದಿಂದ ಹಾಗೂ ಪಿತೃ ಪ್ರಧಾನ ಮೌಲ್ಯಗಳ ಪರಿಣಾಮದಿಂದ ಬುಡಕಟ್ಟು ಜನರು ಸಹ ಕುಡಿತಕ್ಕೆ ಮೊರೆ ಹೋಗಿ ಕೌಟುಂಬಿಕ ಲೈಂಗಿಕ ದೌರ್ಜನ್ಯಗಳಾಗಿವೆ. ಎಂದು ಪದ್ಮ ವೇಣೂರು ಅವರು ಅಭಿಪ್ರಾಯ ವ್ಯಕ್ತಪಡಿಸಿದುದನ್ನು ಇಲ್ಲಿ ಸಮರ್ಥಿಸಿಕೊಳ್ಳಬಹುದಾಗಿದೆ.(2012: ಪು.ಸಂ 71 ಮತ್ತು 72)

97.37% ಮಹಿಳೆಯರು ಗಂಡು ಮತ್ತು ಹೆಣ್ಣು ಮಕ್ಕಳಿಗೆ ಸಮಾನವಾದ ಶಿಕ್ಷಣ ದೊರೆಯಬೇಕು ಎಂದೂ ಅಭಿಪ್ರಾಯಪಟ್ಟಿದ್ದಾರೆ. ಹೆಚ್ಚಿನ ಬುಡಕಟ್ಟು ಮಹಿಳೆಯರು (32.67%) ಅನಕ್ಷರಸ್ಥರಾಗಿದ್ದರೂ ತಮ್ಮ ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಆಸಕ್ತಿಯ ಮಾತುಗಳನ್ನು ಅರುಹಿದ್ದಾರೆ.

ಸ್ವಾತಂತ್ರ್ಯಾನಂತರ ಭಾರತ ಸರ್ಕಾರವು ಬುಡಕಟ್ಟು ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಲು ಅವರು ವಾಸಿಸುವಲ್ಲಿ ಆಶ್ರಮ ಶಾಲೆಗಳನ್ನು ತೆರೆದು ಮಕ್ಕಳಿಗೆ ಉಚಿತ ಊಟ, ಬಟ್ಟೆ

ಪಠ್ಯಪುಸ್ತಕ, ಲೇಖನ ಸಾಮಾಗ್ರಿಗಳು ಹಾಗೂ ವಿದ್ಯಾರ್ಥಿವೇತನದ ವ್ಯವಸ್ಥೆಯನ್ನು ಮಾಡಿದೆ. ಆದರೂ ಮಕ್ಕಳ ಗೈರುಹಾಜರಿ ಮತ್ತು ಶಾಲೆ ಬಿಡುವ ಪ್ರಮಾಣ ಕಡಿಮೆಯಾಗಿಲ್ಲ. ಬುಡಕಟ್ಟು ಸಮುದಾಯದ ಬಡತನ, ಕಡಿಮೆ ಸಂಪಾದನೆ, ಶಿಕ್ಷಣದ ಮಹತ್ವದ ಅರಿವಿಲ್ಲದೇ ಇರುವುದು, ಮನೆಯಲ್ಲಿ ಹೆತ್ತವರ ಮದ್ಯಪಾನದ ಚಟ, ಬುಡಕಟ್ಟು ಮಕ್ಕಳ ಪರಿಸರ, ಸಂಸ್ಕೃತಿ ಭಾಷೆಯಿಂದ ದೂರವಿರುವ ಪಠ್ಯಕ್ರಮ, ಇವೆಲ್ಲವೂ ಬುಡಕಟ್ಟು ಮಕ್ಕಳ ಶಿಕ್ಷಣದ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿವೆ. ಇತರ ಮಕ್ಕಳ ಕಲಿಕೆಗೆ ಹೋಲಿಸಿದಾಗ ಬುಡಕಟ್ಟು ಮಕ್ಕಳ ಕಲಿಕೆಯ ಪ್ರಗತಿ ಬಹಳ ಕೆಳಮಟ್ಟದಲ್ಲಿದೆ. ಆದುದರಿಂದ ಬುಡಕಟ್ಟು ಮಕ್ಕಳ ಶಿಕ್ಷಣ ವ್ಯವಸ್ಥೆಯಲ್ಲಿ ಬದಲಾವಣೆಗಳು, ಮತ್ತು ಸುಧಾರಣೆಗಳು ನಿಧಾನ ಗತಿಯಲ್ಲಿರುವುದು ಕಂಡುಬಂದಿದೆ.

ಬುಡಕಟ್ಟು ಜನರು ಕಾಡಿನಲ್ಲಿ ವಾಸಿಸುತ್ತಿದ್ದಾಗ ಕಾಡಿನಲ್ಲಿ ಸಿಗುವ ಹಣ್ಣುಗಳನ್ನು ಉಪಯೋಗಿಸಿ ಮದ್ಯವನ್ನು ತಯಾರಿಸಿ ಕೇವಲ ವಿಶೇಷ ಸಂದರ್ಭಗಳಲ್ಲಿ (ದೈವಾರಾಧನೆ ಇತ್ಯಾದಿ) ಮಾತ್ರ ಉಪಯೋಗಿಸುತ್ತಿದ್ದರು. ಆದರೆ ಈಗ ಮುಖ್ಯವಾಹಿನಿಯ ಜನರನ್ನು ಅನುಸರಿಸಿ ಮದ್ಯದಂಗಡಿಗಳಲ್ಲಿ ಮದ್ಯಪಾನ ಮಾಡುವ ಚಟ ಬೆಳೆಸಿಕೊಂಡಿರುವುದು ಹಾಗೂ ಗಂಡಸರ ದುಡಿತ ಹೆಚ್ಚಿನ ಪಾಲು ದುರಾಭ್ಯಾಸಗಳಿಗೆ ವ್ಯಯವಾಗುವುದನ್ನು ಅಧ್ಯಯನ ಸ್ಪಷ್ಟಪಡಿಸುತ್ತದೆ.

ಬುಡಕಟ್ಟು ಮಹಿಳೆಯರಲ್ಲಿ ಶಿಕ್ಷಣದ ಉದ್ದೇಶಗಳ ಕುರಿತು ಅಭಿಪ್ರಾಯ ಸಂಗ್ರಹಿಸುವರೇ ವಿದ್ಯಾವಂತರಾಗಲು, ಉದ್ಯೋಗ ಹಿಡಿಯಲು, ಸ್ವಾವಲಂಬಿಯಾಗಲು, ಒಳ್ಳೆಯ ನಾಗರಿಕರಾಗಲು, ಒಳ್ಳೆ ತಾಯಿ/ತಂದೆ/ಪತ್ನಿ/ಪತಿಯರಾಗಲು ಎಂಬ ವ್ಯತ್ಯಯಗಳನ್ನು ಇಟ್ಟುಕೊಂಡಿದ್ದು, 39.00% ಮಹಿಳೆಯರು ಉದ್ಯೋಗಕ್ಕಾಗಿ ಶಿಕ್ಷಣ ಅಗತ್ಯ ಎಂದರೆ, 35.33% ಮಹಿಳೆಯರು ವಿದ್ಯಾವಂತರಾಗಲು ಶಿಕ್ಷಣ ಅಗತ್ಯವಿದೆ. ಎಂದು ಪ್ರತಿಕ್ರಯಿಸಿದ್ದಾರೆ. ಹಾಗೂ ಅತೀ ಹೆಚ್ಚಿನ ಬುಡಕಟ್ಟು ಮಹಿಳೆಯರು ಅಂದರೆ 32.33% ಮಹಿಳೆಯರಿಗೆ ಶಿಕ್ಷಣವು ತಮ್ಮ ಗಂಡು ಹೆಣ್ಣು ಮಕ್ಕಳನ್ನು ಉದ್ಯೋಗದ ದಾರಿಯಲ್ಲಿ ನಡೆಸಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಹೆಚ್ಚಿನ ಬುಡಕಟ್ಟು ತಾಯಂದಿರು ಎಂದರೆ 46% ಪ್ರಾಥಮಿಕ ಹಂತ ಶಿಕ್ಷಣ ಪಡೆದಿದ್ದು ಮತ್ತು 32.67% ಮಹಿಳೆಯರು ಅನಕ್ಷರಸ್ಥರಾಗಿದ್ದರೂ, ತಮ್ಮ ಮಕ್ಕಳ ಶೈಕ್ಷಣಿಕ ಭವಿಷ್ಯದ ಕುರಿತು ಬಹಳ ನಿರೀಕ್ಷೆಗಳನ್ನಿಟ್ಟುಕೊಂಡಿರುವುದು ಅಧ್ಯಯನದಿಂದ ಗಮನಿಸಬಹುದಾಗಿದೆ. ಆದರೆ ಬುಡಕಟ್ಟು ಮಕ್ಕಳ ಶಿಕ್ಷಣಕ್ಕೆ ಪ್ರಸ್ತುತ ಸಮಾಜದಲ್ಲಿ ಅನೇಕ

ಸಮಸ್ಯೆಗಳಿವೆ. ದಕ್ಷಿಣ ಕನ್ನಡದ ಮೂಲನಿವಾಸಿಗಳಾದ ಮತ್ತು ಪ್ರಾಚೀನ ಆದಿವಾಸಿ (Primitive Tribal Group) ಸಮುದಾಯವಾಗಿ, ಒಂದು ಸಾಮಾಜಿಕ ಅಸ್ಪೃಶ್ಯತೆಯ ಚೌಕಟ್ಟಿನೊಳಗೆ ಬಂಧಿಯಾಗಿ, ಮಾನವಿಕ ಹಕ್ಕುಗಳಿಂದ ವಂಚಿತವಾದ ಕೊರಗ ಸಮುದಾಯದ ಶೈಕ್ಷಣಿಕ ಸಮಸ್ಯೆಗಳನ್ನು, ಕೊರಗ ಸಮುದಾಯದಲ್ಲಿ ಶಿಕ್ಷಣದ ಕುರಿತಾದ ಅಧ್ಯಯನದಲ್ಲಿ ಸಂಜು ಅವರು ಕೊರಗ ಮಕ್ಕಳ ರಕ್ಷಕರಿಂದ/ಹೆತ್ತವರಿಂದ ಮತ್ತು ಶಾಲೆಯ ಅಧ್ಯಾಪಕರುಗಳಿಂದ ಶೈಕ್ಷಣಿಕ ಸಂಬಂಧಿತ ಮಾಹಿತಿ ಸಂಗ್ರಹಿಸಿದ್ದು, ಶೈಕ್ಷಣಿಕವಾಗಿ ಕೊರಗ ಸಮುದಾಯದ ಸಮಸ್ಯೆಗಳನ್ನು ಪಟ್ಟಿ ಮಾಡಿದ್ದಾರೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ

- ✓ ಮಕ್ಕಳನ್ನು ಪೂರ್ವ ಪ್ರಾಥಮಿಕ ಶಾಲೆಗಳಿಗೆ ಸೇರಿಸದೆ ಇರುವುದು.
- ✓ ಸಾರ್ವಜನಿಕ ಕಾರ್ಯಕ್ರಮದಲ್ಲಿ ಡೋಲು ಬಡಿತಕ್ಕೆ ಶಾಲಾ ಮಕ್ಕಳನ್ನು ತೊಡಗಿಸಿಕೊಳ್ಳುವುದು
- ✓ ಕಲಿಕಾ ವಾತಾವರಣಕ್ಕೆ ಪೂರಕವಾದ ಸೌಕರ್ಯ, ಸೌಲಭ್ಯಗಳು ಸಮುದಾಯದ ಹಾಡಿಗಳಲ್ಲಿ ಇಲ್ಲದಿರುವುದು.
- ✓ ಮಕ್ಕಳು ಮತ್ತು ರಕ್ಷಕರಿಗೆ ಮಾಹಿತಿಯ ಕೊರತೆ,
- ✓ ಅಸ್ಪೃಶ್ಯತೆಯ ತೊಂದರೆ
- ✓ ಪ್ರಾಥಮಿಕ ಹಂತಗಳಲ್ಲಿ ಸಾಮಾನ್ಯವಾಗಿರುವ ಗೈರುಹಾಜರಿ ಹಾಗೂ ಕಲಿಕಾ ಸಾಮರ್ಥ್ಯದ ಹಿನ್ನಡೆ
- ✓ ಮಕ್ಕಳ ಸಹಜ ಪ್ರತಿಭೆಗಳು ಬೆಳಕಿಗೆ ಬಾರದಿರುವುದು. ಸಮುದಾಯದಲ್ಲಿ ದಟ್ಟವಾಗಿರುವ ಕೀಳರಿಮೆಯಿಂದಾಗಿ ಪರೀಕ್ಷಾಭಯ
- ✓ ಕೊರಗ ಮಕ್ಕಳ ಕಲಿಕೆಯ ಬಗ್ಗೆ ಶಿಕ್ಷಕರು ಪ್ರತ್ಯೇಕ ನಿಗಾ ವಹಿಸದಿರುವುದು.
- ✓ ಶಿಕ್ಷಣಕ್ಕೆ ತೊಡಕಾಗಿರುವ ಸಮುದಾಯದ ನಂಬಿಕೆ ನಿಯಮಗಳು
- ✓ ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತದಲ್ಲಿ ಶಾಲೆ ಬಿಡುವ (ಡ್ರಾಪ್ ಔಟ್) ಸಮಸ್ಯೆ
- ✓ ಸಮುದಾಯದಲ್ಲಿ ಕೊರಗ ಮಕ್ಕಳಿಗೆ ಸ್ಫೂರ್ತಿ ತುಂಬಿಸಲು ಬೇಕಾದ ಕೊರಗ ಶಿಕ್ಷಕರ ಕೊರತೆ

ಈ ಮೇಲಿನ ಸಮಸ್ಯೆಗಳಿಗೆ ಪೂರಕವಾಗಿ ಪರಿಹಾರಗಳನ್ನು ಕಂಡುಕೊಳ್ಳಲು ಸರ್ವಶಿಕ್ಷಾ ಅಭಿಯಾನವು ಪ್ರಯತ್ನಿಸುತ್ತಿದೆ ಎಂದೂ ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ. ಹಾಗೂ ಇತರ ಸಮುದಾಯಗಳಲ್ಲಿ ತಮ್ಮ ಮಕ್ಕಳ ಶಿಕ್ಷಣ ಜೀವನದ ಗುರಿಯ ಬಗ್ಗೆ ಸ್ಪಷ್ಟ ಕಲ್ಪನೆಯಿದ್ದರೆ ಅದು ಕೊರಗ ಸಮುದಾಯದಲ್ಲಿ ಕ್ಷೀಣವಾಗಿದೆ ಎಂದೂ ಪ್ರತಿಕ್ರಯಿಸಿದ್ದಾರೆ. (2008: ಪು ಸಂ 35,36)

ಒಟ್ಟಿನಲ್ಲಿ ಬುಡಕಟ್ಟು ಸಮುದಾಯ ಶೈಕ್ಷಣಿಕವಾಗಿ ಮುಂದುವರಿಯುವಲ್ಲಿ ಸಮುದಾಯದ ,ಸಮಾಜದ, ಸರಕಾರದ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ ಒಮ್ಮತದ ಪ್ರಯತ್ನದ ಅನಿವಾರ್ಯತೆ ಇದೆ.

ಹೆತ್ತವರು ಅಥವಾ ರಕ್ಷಕರು ತಮ್ಮ ಜವಾಬ್ದಾರಿಗಳನ್ನು ತಿಳಿದು ಮಕ್ಕಳ ಶೈಕ್ಷಣಿಕ ಪ್ರಗತಿಯ ಕುರಿತು ಮನೆಯಲ್ಲಿ ಮಾತುಕತೆ ನಡೆಸುವಲ್ಲಿ, ಮಕ್ಕಳು ಸಾಮಾನ್ಯವಾಗಿ ಶಿಕ್ಷಣದ ಕುರಿತು ಆಸಕ್ತಿ ವಹಿಸುವುದು ಸಹಜ. 43.67% ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣದ ಕುರಿತಾಗಿ ಮನೆಯಲ್ಲಿ ಚರ್ಚೆ ನಡೆಸುತ್ತೇವೆ ಎಂದು ಪ್ರತಿಕ್ರಯಿಸಿದ್ದು, 12.66% ಮಹಿಳೆಯರು ಮನೆಯಲ್ಲಿ ಶಿಕ್ಷಣದ ಕುರಿತಾದ ಮಾತುಕತೆ ನಡೆಸುವುದಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. 61.33% ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣದ ಸಲುವಾಗಿ ಶಾಲೆಗೆ ಭೇಟಿ ನೀಡುವ ಪರಿಪಾಠವನ್ನು ಬೆಳೆಸಿಕೊಂಡಿದ್ದಾರೆ. ಹಾಗೂ ಹೆಚ್ಚಿನ ಮಹಿಳೆಯರು ತಮ್ಮ ಮಕ್ಕಳು ಕಲಿಯುವ ಶಾಲೆಯ ಶಿಕ್ಷಕರ ಪರಿಚಯವಿರುವುದೆಂದು ಪ್ರತಿಕ್ರಯಿಸಿದ್ದಾರೆ.

45.67% ಮಹಿಳೆಯರು ತಮ್ಮ ಮಕ್ಕಳ ಶೈಕ್ಷಣಿಕ ಅಭಿವೃದ್ಧಿ ವರದಿಯನ್ನು ಗಮನಿಸುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದು, ಅನಕ್ಷರತೆಯ ಕಾರಣದಿಂದಾಗಿ ಅನೇಕ ಮಹಿಳೆಯರು ಮಕ್ಕಳ ಅಭಿವೃದ್ಧಿ ವರದಿಯನ್ನು ಗಮನಿಸುವುದಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಸಮುದಾಯದ ಬಡತನ, ಕಡಿಮೆ ಆದಾಯ, ಮೂಢನಂಬಿಕೆಗಳು, ಶಿಕ್ಷಣದ ಮಹತ್ವದ ಅರಿವಿನ ಕೊರತೆ, ಹೆತ್ತವರ ಅನಕ್ಷರತೆ ಈ ಎಲ್ಲಾ ಕಾರಣಗಳಿಂದಾಗಿ ಬುಡಕಟ್ಟು ಸಮುದಾಯಗಳ ಶೈಕ್ಷಣಿಕ ಪ್ರಗತಿ ನಿರೀಕ್ಷಿತ ಮಟ್ಟದಲ್ಲಿ ಸಾಗುತ್ತಿಲ್ಲ. ಬಹುಪಾಲು ಬುಡಕಟ್ಟು ಸಮುದಾಯದ ಹೆತ್ತವರಿಗೆ/ಪೋಷಕರಿಗೆ ಕುಟುಂಬದಲ್ಲಿನ ಕಷ್ಟಗಳೊಂದಿಗೆ ಮಕ್ಕಳ ಶಿಕ್ಷಣವೆನ್ನುವುದು ಹೊರೆ ಎನಿಸುತ್ತದೆ. ಇನ್ನು ಕೆಲವು ಹೆತ್ತವರಿಗೆ ಈಗಾಗಲೇ ಓದಿರುವ ಅನೇಕರು ಕೆಲಸ ಇಲ್ಲದೆ, ಕೂಲಿ ಮಾಡುತ್ತಿರುವುದರಿಂದ ಶಿಕ್ಷಣದ ಬಗ್ಗೆ ನಿರಾಶಾದಾಯಕ ಅಭಿಪ್ರಾಯವಿದೆ.

2001ರ ಸರ್ವ ಶಿಕ್ಷಣ ಅಭಿಯಾನ (ಎಸ್.ಎಸ್.ಎ) ಮಾಹಿತಿಯಂತೆ ದೇಶದಲ್ಲಿ 6 ರಿಂದ 14 ವಯೋಮಾನದ 20.24 ದಶಲಕ್ಷ ಪರಿಶಿಷ್ಟ ವರ್ಗದ ಮಕ್ಕಳಿದ್ದು ಇದರಲ್ಲಿ 14 ದಶಲಕ್ಷ ಮಕ್ಕಳು ಮಾತ್ರ ಪ್ರಾಥಮಿಕ ಶಾಲೆಗೆ ದಾಖಲಾಗಿದ್ದಾರೆ. ಹೀಗೆ ದಾಖಲಾದ ಮಕ್ಕಳಲ್ಲೂ 69% ಮಕ್ಕಳು ಮಾಧ್ಯಮಿಕ ಹಂತದಲ್ಲಿ ಶಾಲೆ ಬಿಡುವುದಾಗಿ ತಿಳಿಸಿದರೆ, ಬುಡಕಟ್ಟು

ಮಕ್ಕಳು ತಮ್ಮ ಪರಿಸರದಿಂದ ಶಾಲಾ ವ್ಯವಸ್ಥೆಗೆ ಹೊಂದಿಕೊಳ್ಳಲಾಗದೆ ಇರುವುದು, ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಭಿನ್ನತೆಯಿರುವುದು, ಬುಡಕಟ್ಟು ಪರಿಸರದ ಸಮೀಪ ಶಾಲೆಗಳ ಲಭ್ಯತೆಯಿಲ್ಲದಿರುವುದರ ಕೊರತೆಯಿಂದ ಶಾಲೆ ಬಿಡುತ್ತಾರೆ. (ಬುಡಕಟ್ಟು ಅಭಿವೃದ್ಧಿ ಯೋಜನೆ 2007)

ಅತ್ಯಂತ ಹೆಚ್ಚಿನ (43.67%) ಬುಡಕಟ್ಟು ಮಹಿಳೆಯರು ಮಕ್ಕಳ ಶಿಕ್ಷಣದ ಕುರಿತಾದ ಮಾತುಕತೆ ನಡೆಸುತ್ತೇವೆ ಎಂದರೂ, ಮಕ್ಕಳನ್ನು ಓದು ಎಂದು ಪ್ರೇರೇಪಿಸುತ್ತಾರೆಯೇ ವಿನಃ ಏನು ಓದಬೇಕು, ಹೇಗೆ ಓದಬೇಕು, ಎಷ್ಟು ಓದಬೇಕು, ಶಾಲೆಯಲ್ಲಿ ಏನು ಕಲಿಸಲಾಗಿದೆ ಎನ್ನುವ ಚರ್ಚೆಗಳು ನಡೆಯುವುದು ಬಹಳ ವಿರಳ. ಹೆತ್ತವರಲ್ಲಿ ಸಾಕ್ಷರತೆಯ ಮಟ್ಟ ಕಡಿಮೆ ಇರುವುದರಿಂದಲೂ, ಮಕ್ಕಳ ಶಿಕ್ಷಣದಲ್ಲಿ ಪರಿಣಾಮಕಾರಿಯಾದ ಮಾರ್ಗದರ್ಶಕರಾಗಿ ಸಲಹೆ ನೀಡುವಲ್ಲಿ ಹೆತ್ತವರಿಗೆ ಕೊರತೆ ಇರುವುದು ಇದಕ್ಕೆ ಕಾರಣವಾಗಿದೆ.

ಹಿಂದೆ ಸ್ಪಷ್ಟಪಡಿಸಿದಂತೆ ಅನೇಕ ಮಹಿಳೆಯರು ಶಾಲೆಗೆ ಭೇಟಿಕೊಟ್ಟರೂ ಮಕ್ಕಳಿಗೆ ಸಿಗುವ ಸೌಲಭ್ಯಗಳ ಕುರಿತು ತಿಳಿಯಲು, ಶಿಕ್ಷಕರು ಹೇಳಿ ಕಳಿಸಿದಾಗ ಮಾತುಕತೆಯಾಡಲು, ಮಕ್ಕಳ ಕ್ರೀಡೆ, ಆಟೋಟ ಸ್ಪರ್ಧೆಗಳನ್ನು ಗಮನಿಸುವುದು ಅವರ ಮುಖ್ಯ ಉದ್ದೇಶವಾಗಿರುತ್ತದೆ. ಶಿಕ್ಷಕ ರಕ್ಷಕ ಸಭೆಗಳಲ್ಲಿ ಪೋಷಕರ/ಹೆತ್ತವರ ಹಾಜರಾತಿಯನ್ನು ಕಡ್ಡಾಯಗೊಳಿಸಿರುವುದರಿಂದ ಭಾಗವಹಿಸುತ್ತಾರೆಯೇ ವಿನಹ ಶಿಕ್ಷಕ –ರಕ್ಷಕ ಸಭೆಯ ಒಟ್ಟು ಉದ್ದೇಶ ಹಾಗೂ ಹೆತ್ತವರ ಭಾಗವಹಿಸುವಿಕೆಯ ಮಹತ್ವವೇನು ಎನ್ನುವುದರ ಕುರಿತಾದ ಅರಿವಿನ ಕೊರತೆ ಬುಡಕಟ್ಟು ಮಹಿಳೆಯರಲ್ಲಿರುವುದು ಗಮನಿಸಬಹುದಾಗಿದೆ. ಸಮುದಾಯದಲ್ಲಿ ಶಿಕ್ಷಣಕ್ಕೆ ಮಾದರಿ ಇಲ್ಲದಿರುವುದು ಕೂಡ (ವಿಶೇಷವಾಗಿ ಕೊರಗ ಸಮುದಾಯದಲ್ಲಿ) ಶಿಕ್ಷಣದ ಕುರಿತಾಗಿರುವ ನಿರ್ಲಿಪ್ತತೆಗೆ ಕಾರಣವಾಗುತ್ತದೆ.

ವೈ ರವೀಂದ್ರನಾಥ ರಾವ್ ಅವರು ಕುಡುಬಿಯರ ಕುರಿತಾದ ತಮ್ಮ ಅಧ್ಯಯನದಲ್ಲಿ, ಕುಡುಬಿ ಜನರಿಗೆ ತಮ್ಮ ಮಕ್ಕಳ ವಿದ್ಯಾಭ್ಯಾಸದ ಕುರಿತಾಗಿ ಹೆಚ್ಚಿನ ನಿರೀಕ್ಷೆಗಳಿಲ್ಲ ಎಂದಿರುವ (2003: ಪು. ಸಂ 52) ಅಭಿಪ್ರಾಯವನ್ನು ಇಲ್ಲಿ ದೃಢೀಕರಿಸಬಹುದು.

ಶಿಕ್ಷಣದ ಮೂಲಕ ಒಟ್ಟು ಸಮುದಾಯದ ಅಭಿವೃದ್ಧಿ ಸಾಧ್ಯ ಎನ್ನುವ ಅರಿವು ಬುಡಕಟ್ಟು ಮಹಿಳೆಯರಲ್ಲಿ ಮೂಡಿದಾಗ ಮಾತ್ರ ಬುಡಕಟ್ಟು ಸಮಾಜದಲ್ಲಿ ಬದಲಾವಣೆ

ಸಾಧ್ಯವಾಗಬಹುದು. ಅತ್ಯಂತ ಹೆಚ್ಚಿನ ಅಂದರೆ 87.33% ಬುಡಕಟ್ಟು ಮಹಿಳೆಯರಿಗೆ ವಿದ್ಯಾರ್ಥಿಗಳಿಗೆ ಸರಕಾರದಿಂದ ಸಿಗುವ ಶೈಕ್ಷಣಿಕ ಯೋಜನೆಗಳ ಕುರಿತಾದ ಮಾಹಿತಿ ಇರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಮತ್ತು ಹೆಚ್ಚಿನ ಒಟ್ಟು 93.67% ಮಹಿಳೆಯರು ತಮ್ಮ ಮಕ್ಕಳಿಗೆ ಯಾವುದೇ ಶೈಕ್ಷಣಿಕ ಸಮಸ್ಯೆಗಳಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ.

ಬುಡಕಟ್ಟು ಸಮುದಾಯದಲ್ಲಿ ಒಟ್ಟು ಕುಟುಂಬದ ವಾತಾವರಣವು ಮಕ್ಕಳ ಶೈಕ್ಷಣಿಕ ಪ್ರಗತಿಗೆ ಅಡ್ಡಿಯಾಗುತ್ತಿರುವುದನ್ನು ಸಮಸ್ಯೆ ಎಂದು ತಿಳಿದು ಅದನ್ನು ಒಟ್ಟು ವ್ಯವಸ್ಥೆಗೆ ಮಹಿಳೆಯರು ಹೊಂದಿಸಿಕೊಳ್ಳಲಾಗದೇ ಇರುವ ಅಂಶವನ್ನು ಅಧ್ಯಯನವು ಸಾಬೀತುಪಡಿಸುತ್ತದೆ. ದಕ್ಷಿಣ ಕನ್ನಡದಲ್ಲಿ ಶೈಕ್ಷಣಿಕ ಸಮಸ್ಯೆಗಳ ಪ್ರಸ್ತಾವನೆಯಲ್ಲಿ ಭೌತಿಕ ಸೌಲಭ್ಯಗಳನ್ನಷ್ಟೇ ಬುಡಕಟ್ಟು ಮಹಿಳೆಯರು ಯೋಚಿಸುವುದರಿಂದ ಒಟ್ಟು ಮಕ್ಕಳ ಜೀವನ ವಿಧಾನಕ್ಕೂ ಮತ್ತು ಶಿಕ್ಷಣಕ್ಕೂ ಪರಸ್ಪರ ಸಂಬಂಧವಿದೆ ಎನ್ನುವುದನ್ನು ಮಹಿಳೆಯರು ಅರಿಯುವಲ್ಲಿ ಕೊರತೆ ಇದೆ.

ಮಕ್ಕಳ ಸರ್ವತೋಮುಖ ಅಭಿವೃದ್ಧಿಯಲ್ಲಿ ಮತ್ತು ಮಕ್ಕಳನ್ನು ಭವಿಷ್ಯದ ಸಮಾಜದ ಉತ್ತಮ ನಾಗರಿಕರನ್ನಾಗಿ ಬೆಳೆಸುವಲ್ಲಿ ತಂದೆ-ತಾಯಿ ಇಬ್ಬರ ಪಾತ್ರವೂ ಬಹಳ ಮುಖ್ಯವಾಗಿದೆ. ಬುಡಕಟ್ಟು ಮಹಿಳೆಯರಲ್ಲಿ ಈ ಕುರಿತಾದ ಮಾತುಕತೆಯಲ್ಲಿ, ತಂದೆ, ತಾಯಿ ಇಬ್ಬರೂ ಮಕ್ಕಳ ಒಟ್ಟು ಸಮಾಜ ಪೂರಕ ಬೆಳವಣಿಗೆಯಲ್ಲಿ ಸಮಾನ ಪಾತ್ರ ಮತ್ತು ಜವಾಬ್ದಾರಿ ವಹಿಸಿಕೊಳ್ಳಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಅವರ ಜೀವನ ವಿಧಾನದಲ್ಲಿ ಲಿಂಗಸಮಾನತೆ, ಸಹಜವಾಗಿಯೇ ಅಡಕವಾಗಿದೆ. ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ಪಿತೃ ಪ್ರಧಾನವಾಗಿದ್ದರೂ ಗಂಡು ಮೇಲು ಹೆಣ್ಣು ಕೀಳು ಎನ್ನುವ ಅಂತರವಿಲ್ಲ. ಇಬ್ಬರೂ ಸಮಾನರು ಗಂಡು ಹೆಣ್ಣು ಒಟ್ಟಾಗಿ ದುಡಿಯುತ್ತಾರೆ. ಲಿಂಗ ಭೇದವಿಲ್ಲದ ಬುಡಕಟ್ಟು ಜೀವನ ಶೈಲಿಯ ಕೊರತೆ ಇಂದು ನಾವು ನಾಗರಿಕ ಸಮಾಜದಲ್ಲಿ ಕಾಣುತ್ತಿದ್ದೇವೆ.

ಆದರೆ ಮಕ್ಕಳ ವಿದ್ಯಾಭ್ಯಾಸದ ಕುರಿತು ಸ್ಪಷ್ಟ ಯೋಚನೆ ಮಾಡುವಲ್ಲಿ ಬುಡಕಟ್ಟು ಸಮುದಾಯದ ಹೆತ್ತವರಲ್ಲಿ, ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಹಾಗೂ ಸೂಕ್ತ ಮಾರ್ಗದರ್ಶನದ ಕೊರತೆಯನ್ನು ಅಧ್ಯಯನ ಸಾಬೀತುಪಡಿಸುತ್ತದೆ.

ಹಿಂದಿನ ದಿನಗಳಲ್ಲಿ ಬುಡಕಟ್ಟು ಸಮಾಜದಲ್ಲಿ ಹೆಣ್ಣು ಋತುಮತಿಯಾದ ಕೂಡಲೇ ಮದುವೆ ಮಾಡುವ ಸಂಪ್ರದಾಯವಿತ್ತು. ಇತರ ಸಮುದಾಯದೊಂದಿಗಿನ ಸಂಪರ್ಕ

ಹೆಚ್ಚಿದಂತೆಲ್ಲಾ ಹಾಗೂ ಸ್ವಸಹಾಯ ಸಂಘಗಳಲ್ಲಿ ಸಭೆಗಳನ್ನು ನಡೆಸುವುದರ ಫಲವಾಗಿ, ಅರಿವಿನ ಮಟ್ಟ ಹೆಚ್ಚಿದಂತೆಲ್ಲಾ ಬುಡಕಟ್ಟು ಮಹಿಳೆಯರಿಗೆ ವಿವಾಹ ಯೋಗ್ಯ ವಯಸ್ಸಿನ ಕುರಿತಾದ ಅರಿವು ಮೂಡಿದೆ. 95.67% ಮಹಿಳೆಯರು ಹೆಣ್ಣು ಮಕ್ಕಳಿಗೆ 20ರ ವಯಸ್ಸಿನ ಮೇಲೆ ಮದುವೆ ನಿಶ್ಚಯಿಸುವುದು ಸೂಕ್ತ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಋತುಮತಿಯಾಗುವ ಪ್ರಕ್ರಿಯೆಯಲ್ಲಿ ಹೆಣ್ಣು ಅಸ್ಪೃಶ್ಯಳು ಎಂದು 78.67% ಮಹಿಳೆಯರು ಪ್ರತಿಕ್ರಯಿಸಿದ್ದಾರೆ. ಮೈನೆರೆದ ಸೂತಕವನ್ನು ಮೈಲಿಗೆ ಎಂದು ಭಾವಿಸುವ ಬುಡಕಟ್ಟು ಜನರು ಮುತ್ತೈದೆಯರಿಂದ ಮೈಲಿಗೆ ತೆಗೆಸಿದ ನಂತರ ಹೆಣ್ಣು ಶುದ್ಧವಾಗುತ್ತಾಳೆ ಎನ್ನುವ ನಂಬಿಕೆ ಮುಖ್ಯವಾಗಿ ಮಲೆಕುಡಿಯರಲ್ಲಿದೆ. ಕೊರಗರಲ್ಲಿ ಮೈ ನೆರೆಯುವುದನ್ನು "ನೆರೆದ ಸೂತಕ" ಎನ್ನುತ್ತಾರೆ. ಏಳು ದಿನಗಳ ನಂತರ ಬೆಳಗಿನ ಜಾವ ಸೂರ್ಯ ನಮಸ್ಕಾರ ಮಾಡಿಸಿ ಮನೆಯೊಳಗಿನ ಎಲ್ಲಾ ವಸ್ತುಗಳನ್ನು ಮುಟ್ಟುವ ಮೂಲಕ ಮೈಲಿಗೆ ಕಳೆಯುತ್ತದೆ.

ಕೊಡಗು ಜಿಲ್ಲೆಯ ಪಿರಿಯಾಪಟ್ಟಣ ತಾಲೂಕಿನ ಜೇನುಕುರುಬರಲ್ಲಿ ಋತುಮತಿ ಯಾಗುವುದನ್ನು **'ನೀರ ಮದುವೆ'** ಎನ್ನುತ್ತಾರೆ. ಋತುಮತಿಯಾಗಿ ಒಂದು ತಿಂಗಳು ಹೆಣ್ಣನ್ನು ಮನೆ ಒಳಗೆ ಇರಿಸಿಕೊಂಡು, ಹೊರಹೋಗುವ ಸಂದರ್ಭಗಳಲ್ಲಿ ತಲೆಗೆ ಬಟ್ಟೆ ಕಟ್ಟಿಕೊಂಡು ಹೋಗುವುದು ವಾಡಿಕೆಯಲ್ಲಿದೆ. ಒಂದು ತಿಂಗಳಲ್ಲಿ ಹೆಚ್ಚು ಪೌಷ್ಠಿಕಾಂಶ ಇರುವ ಆಹಾರಗಳಾದ ಕಡ್ಲೆ, ಬೆಲ್ಲ, ಅವಲಕ್ಕಿಯನ್ನು ಕೊಡುತ್ತಾರೆ. ಗಂಗೆ ಪೂಜೆಯ ನಂತರ ಹೆಣ್ಣು ಶುದ್ಧವಾದಳು ಎಂದು ನಂಬುತ್ತಾರೆ. ತಿಂಗಳಾದ ಬಳಿಕ ಹೆಣ್ಣಿನ ಸೋದರ ಮಾವ ಹೆಣ್ಣನ್ನು ಎತ್ತಿಕೊಂಡು ಬಂದು **'ನೀರಮದುವೆ'** ಶಾಸ್ತ್ರ ಮಾಡುವಲ್ಲಿ ತಂದು ಕೂರಿಸುವ ಸಂಪ್ರದಾಯ ಈಗಲೂ ಇದೆ.

ಜೀನ್ ಹಾಲ್ಮ್ (1994) ಅವರ ಪ್ರಕಾರ ಎಲ್ಲಾ ಧರ್ಮದ ಶಾಸ್ತ್ರೀಯ ಭೋದನೆಯು ಪುರುಷ ಮತ್ತು ಮಹಿಳೆಯರ ಸಮಾನತೆಯ ಬಗ್ಗೆ ಒತ್ತು ನೀಡಿದ್ದರೂ, ವಾಸ್ತವವಾಗಿ ಕಾರ್ಯರೂಪದಲ್ಲಿ ಅವರ ಮಧ್ಯೆ ಅಸಮಾನತೆ ಇದೆ ಎಂದು ಪ್ರತಿಪಾದಿಸಿದ್ದಾರೆ. ಹರ್ ಲಾಂಬಸ್ ಮತ್ತು ಹಾಲ್‌ಬರ್ನ್, (2000: ಪು.ಸಂ 441)

ಹೆಣ್ಣು ಮಕ್ಕಳು ಋತುಮತಿಯಾಗುವ ಈ ಸಂದರ್ಭಗಳಲ್ಲಿ ಒಂದು ತಿಂಗಳು ಒಳಗೆ ಕುಳ್ಳಿರಿಸುವ ಸಂಪ್ರದಾಯವಿರುವುದರಿಂದ ಹೆಚ್ಚಿನ ಹೆಣ್ಣು ಮಕ್ಕಳು ಇದೇ ಕಾರಣದಿಂದ ಶಾಲೆಯನ್ನು ಅರ್ಧದಲ್ಲಿ ಬಿಡುವುದು ಸಾಮಾನ್ಯವಾಗಿದೆ ಎಂದು 'ಕವನ' ಎನ್ನುವ ಸರ್ಕಾರೇತರ

ಸಂಸ್ಥೆಯಲ್ಲಿ (ಪಿರಿಯಾಪಟ್ಟಣ) ಆದಿವಾಸಿಗಳೊಂದಿಗೆ ಕೆಲಸ ನಿರ್ವಹಿಸುತ್ತಿರುವ ಸ್ವತಃ ಜೇನುಕುರುಬ ಬುಡಕಟ್ಟಿಗೆ ಸೇರಿದ ಶ್ರೀಮತಿ ಇಂದಿರಾ ಅವರು ಅಭಿಪ್ರಾಯ ಪಡುತ್ತಾರೆ.

ದೈವ/ದೇವರುಗಳು ಮನೆಯೊಳಗಡೆ ಇರುವುದರಿಂದ ಋತುಮತಿಯಾಗುವ ಹೆಣ್ಣು ಅಸ್ಪೃಶ್ಯಳು ಎಂದು ಅಸ್ಪೃಶ್ಯತೆಗೆ ಕಾರಣಗಳನ್ನು ಬುಡಕಟ್ಟು ಮಹಿಳೆಯರು ಕೊಡುವುದನ್ನು ಅಧ್ಯಯನ ಸ್ಪಷ್ಟ ಪಡಿಸಿದ್ದು, ಋತುಮತಿಯಾದಾಗ ಹೆಣ್ಣು ಅಸ್ಪೃಶ್ಯಳಲ್ಲ ಎಂದ ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚಿನವರು ಕೊರಗ ಬುಡಕಟ್ಟಿಗೆ ಸೇರಿದವರು. ಕೊರಗ ಮಹಿಳೆಯರು ಕೊರಗ ಸಂಘಟನೆಗಳಲ್ಲಿ ಸಕ್ರಿಯ ತೊಡಗಿಸಿಕೊಂಡು ವಿವಿಧ ವಿಷಯಗಳ ಕುರಿತಾದ ಜ್ಞಾನವನ್ನು ಸಂಗ್ರಹಿಸಿರುವ ಕುರಿತು ಅಧ್ಯಯನ ಸ್ಪಷ್ಟಪಡಿಸುತ್ತದೆ. ಮಹಿಳೆಯರಿಗೆ ಋತುಮತಿಯಾಗುವುದರ ಕುರಿತು ವೈಜ್ಞಾನಿಕವಾದ ಜ್ಞಾನವಿದೆ. ಇದರಲ್ಲೂ ಹೆಚ್ಚಿನ ಮಹಿಳೆಯರು ಕೊರಗ ಸಮುದಾಯಕ್ಕೆ ಸೇರಿದವರು ಎಂದು ಅಧ್ಯಯನ ಸ್ಪಷ್ಟಪಡಿಸುತ್ತದೆ. ಹಾಗೂ ತಮ್ಮ ಹೆಣ್ಣು ಮಕ್ಕಳಿಗೆ ಈ ಕುರಿತಾದ ಮಾಹಿತಿ ಒದಗಿಸಿರುವವರಲ್ಲೂ ಕೊರಗ ಬುಡಕಟ್ಟಿಗೆ ಸೇರಿದ ಮಹಿಳೆಯರೇ ಅಧಿಕ ಎನ್ನುವುದೂ ಅಧ್ಯಯನದಿಂದ ತಿಳಿದುಬರುತ್ತದೆ.
ಅಧ್ಯಯನದಲ್ಲಿ ತಿಳಿದುಕೊಂಡಂತೆ ನಾಲ್ಕು ಬುಡಕಟ್ಟು ಮಹಿಳೆಯರಲ್ಲಿ ಕೊರಗ ಮಹಿಳೆಯರು ಉಳಿದ ಮೂರು ಬುಡಕಟ್ಟುಗಳಿಗಿಂತ ಬೌದ್ಧಿಕವಾಗಿ ಮುಂದಿದ್ದಾರೆ ಎಂದು ಗಮನಿಸಬಹುದಾಗಿದೆ.

ವಿವಿಧ ಬುಡಕಟ್ಟು ಸಮುದಾಯಗಳಿಗೆ ಅನ್ವಯಿಸಿ ಅನೇಕ ಅಧ್ಯಯನಕಾರರು ಪ್ರಸ್ತುತ ಪಡಿಸಿದಂತೆ ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯದಲ್ಲಿ ಅದರಲ್ಲೂ ಮುಖ್ಯ ವಾಹಿನಿಯಿಂದ ತುಸು ಅಂತರದಲ್ಲಿರುವ ಬುಡಕಟ್ಟುಗಳಲ್ಲಿ ಹೆಣ್ಣು ಋತುಮತಿಯಾಗುವುದನ್ನು **'ನೀರಮದುವೆ' 'ಮದಿಮ್ಮಾಳ ಮದುಮೆ'** ಎನ್ನುವ ಹೆಸರಲ್ಲಿ ಆಚರಿಸುವುದು, ಋತುಮತಿಯಾದ ಹೆಣ್ಣಿಗೆ ಸಂಬಂಧಿಸಿ ಸೂತಕಗಳನ್ನು ಪಾಲಿಸುವುದು ಇಂದಿಗೂ ರೂಢಿಯಲ್ಲಿದೆ ಎಂದು ಅಧ್ಯಯನದಿಂದ ಕಂಡುಬಂದಿದೆ.

ಬುಡಕಟ್ಟು ಸಮುದಾಯವು ಅನಾದಿ ಕಾಲದಿಂದಲೂ ಬೆಟ್ಟ-ಗುಡ್ಡ, ಕಾಡು, ಕಾಡಂಚಿನಲ್ಲಿ ವಾಸಿಸುತ್ತಿದ್ದುದು ಅಲ್ಲಿ ಸಿಗುತ್ತಿದ್ದ ಗೆಡ್ಡೆ ಗೆಣಸು, ಹಣ್ಣು ಹಂಪಲುಗಳನ್ನು ತಿಂದು ಆರೋಗ್ಯವಾಗಿದ್ದರೆಂದು ಕೆಲವು ಅಧ್ಯಯನಗಳು ತಿಳಿಸುತ್ತವೆ. ಆದರೆ ಈಗ ಬುಡಕಟ್ಟು ಜನರು ಇತರರಂತೆ ಹೊರಗಿನ ಆಹಾರವನ್ನು ಸೇವಿಸುವುದರಿಂದಲೂ ಸಮತೋಲನ ಆಹಾರದ ಕೊರತೆಯಿಂದಲೂ ದೇಹಕ್ಕೆ ಬೇಕಾಗುವ ಪೌಷ್ಠಿಕ ಅಂಶಗಳು ಸರಿಯಾದ ಪ್ರಮಾಣದಲ್ಲಿ

ದೊರಕದೇ ಇರುವುದರಿಂದಲೂ ಬುಡಕಟ್ಟು ಮಹಿಳೆಯರ ಆರೋಗ್ಯ ಸ್ಥಿತಿ ಉತ್ತಮವಾಗಿಲ್ಲವೆಂದು ಅಧ್ಯಯನದಿಂದ ಗಮನಿಸಬಹುದಾಗಿದೆ. ಅಪೌಷ್ಟಿಕತೆ, ರಕ್ತಹೀನತೆಗಳು ಬುಡಕಟ್ಟು ಮಹಿಳೆಯರಲ್ಲಿ ಸಾಮಾನ್ಯವಾಗಿದೆ. ವಿಶೇಷವಾಗಿ ಕೊರಗ ಮಹಿಳೆಯರಲ್ಲಿ ಬಿಳಚಿಕೊಂಡ ತುಟಿ, ಬಡಕಲು ಶರೀರದೊಂದಿಗೆ ಅನೇಕ ಮಹಿಳೆಯರು ಎಲೆ ಅಡಿಕೆ, ಮತ್ತು ಹೊಗೆಸೊಪ್ಪು ಜಗಿಯುವುದು ಆರೋಗ್ಯಕ್ಕೆ ಹಾನಿಯಾಗುತ್ತಿದೆ.

ಇದರೊಂದಿಗೆ ಕೊರಗರಲ್ಲಿ ಅಜಲು ಚಾಕರಿಯ ಆಚರಣೆಯಿಂದಾಗಿ ಆಹಾರ, ನಿದ್ದೆ ಇತ್ಯಾದಿಗಳನ್ನು ಕಡೆಗಣಿಸಿದ ಪರಿಣಾಮವಾಗಿ, ಇದು ಕುಡಿತವನ್ನು ಪ್ರೇರೇಪಿಸುತ್ತದೆ. ಕ್ಷಯ, ಹೆಚ್.ಐ.ವಿ ರೋಗಗಳು ಈ ಸಮುದಾಯದಲ್ಲಿ ಕಂಡುಬರುತ್ತಿದ್ದು , ಆರ್ಥಿಕವಾಗಿಯೂ ಸಂಕಷ್ಟದಲ್ಲಿರುವುದರಿಂದ ಯಾವುದೇ ಕಾಯಿಲೆ ಬಂದರೂ ಚಿಕಿತ್ಸೆ ಪಡೆಯುವ ಸ್ಥಿತಿಯಲ್ಲಿ ಇಲ್ಲದೇ ಇರುವುದರಿಂದ ಕಾಯಿಲೆ ನಿರ್ಲಕ್ಷಿಸುತ್ತಾರೆ. ಅಥವಾ ಮೂಢನಂಬಿಕೆಗೆ ಬಲಿಯಾಗುತ್ತಾರೆ. ಹುಟ್ಟಿದ ಮಕ್ಕಳು ಅನಾರೋಗ್ಯದಿಂದಲೇ ಹುಟ್ಟುವುದು, ಹೆತ್ತವರನ್ನೇ ಅನುಸರಿಸುವುದು, ಹಾಗೂ ಇದರ ಪರಿಣಾಮವಾಗಿ ಇವರ ಆಯುಷ್ಯ ಕುಂಠಿತಗೊಳ್ಳುತ್ತಿದೆ. ಒಟ್ಟು ಮೂರು ಬುಡಕಟ್ಟುಗಳ ಮಹಿಳೆಯರನ್ನು ಗಮನಿಸಿದರೆ ಕೊರಗ ಬುಡಕಟ್ಟು ಮಹಿಳೆಯರ ಆರೋಗ್ಯ ತುಂಬಾ ಕೆಳಮಟ್ಟದಲ್ಲಿರುವುದು ಸ್ಪಷ್ಟವಾಗುತ್ತದೆ.

ಬುಡಕಟ್ಟು ಮಹಿಳೆಯರಲ್ಲಿ 39% ಮಹಿಳೆಯರು ಮುಟ್ಟಿನ ದೈಹಿಕ ಸಮಸ್ಯೆಗೆ ಮನೆಯ ಮದ್ದನ್ನು ಅವಲಂಬಿಸಿದರೆ, 35.67% ಮಹಿಳೆಯರು ಮುಟ್ಟಿನ ದಿನಗಳಲ್ಲಿ ಯಾವುದೇ ದೈಹಿಕ ಸಮಸ್ಯೆಗಳಿಲ್ಲ ಎಂದಿದ್ದಾರೆ. ಒಟ್ಟು ಬುಡಕಟ್ಟು ಮಹಿಳೆಯರಲ್ಲಿ 42.67% ಮಹಿಳೆಯರು ಮುಟ್ಟಿನ ಹಾಗೂ ಹಿಂದಿನ ದಿನಗಳಲ್ಲಿ ಮಾನಸಿಕ ಸಮಸ್ಯೆಗಳು ಕಾಡುತ್ತವೆ ಎಂದಿದ್ದು, 14.33% ಮಹಿಳೆಯರು ಈ ದಿನಗಳಲ್ಲಿ ಮಾನಸಿಕ ಸಮಸ್ಯೆಗಳು ಕಾಡುವುದಿಲ್ಲ ಎಂದಿದ್ದು ,58.67% ಮಹಿಳೆಯರು ಮುಟ್ಟು ನಿಲ್ಲುವಿಕೆಯ ಪ್ರಕ್ರಿಯೆಯ ಕುರಿತು ತಮಗೆ ಅರಿವಿಲ್ಲ ಎಂದಿದ್ದು, 41.33% ಮಹಿಳೆಯರು ಮುಟ್ಟು ನಿಲ್ಲುವಿಕೆ ಪ್ರಕ್ರಿಯೆ ಅರಿವು ಪಡಕೊಂಡಿರುವುದಾಗಿ ಪ್ರತಿಕ್ರಯಿಸಿದ್ದಾರೆ.

49.00% ಮಹಿಳೆಯರು ಋತುಬಂಧದ ಸಂದರ್ಭದಲ್ಲಿ ತಮಗಾಗುವ ದೈಹಿಕ ಸಮಸ್ಯೆಗಳನ್ನು ತಮ್ಮ ಗಂಡಂದಿರಲ್ಲಿ ಹಂಚಿಕೊಳ್ಳುತ್ತೇವೆಂದು ಪ್ರತಿಕ್ರಯಿಸಿದ್ದಾರೆ. ಸಂಬಂಧಿಸಿದಂತೆ ನಾಲ್ಕು ಬುಡಕಟ್ಟುಗಳ ತುಲನಾತ್ಮಕ ಅಧ್ಯಯನದ ಆಧಾರದ ಪ್ರಕಾರ ಕೊರಗ ಮಹಿಳೆಯರಲ್ಲಿ ಹೆಣ್ಣಿನಲ್ಲಿ ಆಗುವ ದೈಹಿಕ ಬದಲಾವಣೆಗಳ ಕುರಿತು ಅರಿವಿದೆ

ಎನ್ನುವುದು ಸ್ಪಷ್ಟವಾಗುತ್ತದೆ. ಒಟ್ಟು 54.33% ಮಹಿಳೆಯರಿಗೆ ಒಟ್ಟು ಹೆಣ್ಣಿನಲ್ಲಾಗುವ ದೈಹಿಕ ಬದಲಾವಣೆಗಳ ಕುರಿತು ಮಾಹಿತಿ ಇಲ್ಲದಿರುವುದು ಗಮನಿಸಬಹುದಾಗಿದೆ.

ಹೊರಸಮಾಜದ ಪ್ರಭಾವದಿಂದಾಗಿ ಹಾಗೂ ಇನ್ನಿತರ ಕಾರಣಗಳಿಂದಾಗಿ ಬುಡಕಟ್ಟು ಮಹಿಳೆಯರ ಆರೋಗ್ಯ ಸ್ಥಿತಿಯೂ ಕ್ಷೀಣಿಸುತ್ತಿರುವುದು ಕಂಡುಬರುತ್ತದೆ. ಬುಡಕಟ್ಟು ಸಮುದಾಯದ ಜನರಲ್ಲಿ ಹೇರಳವಾದ ಔಷಧೀಯಯ ಸಸ್ಯಗಳ ಜ್ಞಾನವಿದ್ದರೂ ಬುಡಕಟ್ಟು ಮಹಿಳೆಯರು ಆರೋಗ್ಯ ಸುಸ್ಥಿತಿಯಿಲ್ಲದಿರುವುದನ್ನು ಗಮನಿಸುವಾಗ ಅವರು ಬಳಸುವ ಔಷಧಿ ಸಸ್ಯಗಳ ಜ್ಞಾನಕ್ಕೆ ಪ್ರೋತ್ಸಾಹ ಸಿಕ್ಕಿಲ್ಲದಿರುವುದು ಹಾಗೂ ಉತ್ಪನ್ನಗಳನ್ನು ಬಳಸುವಲ್ಲಿ ಬುಡಕಟ್ಟು ಸಮಾಜಕ್ಕೆ ಕಾನೂನಿನಿಂದ ಇರುವ ಅಡ್ಡಿ ಆತಂಕಗಳು ಇದಕ್ಕೆ ಕಾರಣವಾಗಿರುವುದು ಸ್ಪಷ್ಟವಾಗುತ್ತದೆ.

ಜಿ.ಮಲ್ಲೇಶಪ್ಪ ಅವರ ಸೋಲಿಗರ ಕುರಿತಾದ ತಮ್ಮ ಅಧ್ಯಯನದಲ್ಲಿ "ಗಿರಿಜನರ ವೈದ್ಯಕೀಯ ಜ್ಞಾನ ವಿಶೇಷವಾದುದು. ಸುಮಾರು ನೂರರಿಂದ ಐದುನೂರು ಗಿಡಗಳನ್ನು ಔಷಧಿ ಸಸ್ಯಗಳಾಗಿ ಬಳಸುತ್ತಾರೆ. ಈ ಔಷಧಿಗಳಿಂದ ಗಿರಿಜನರು ಬಹುತೇಕ ಎಲ್ಲಾ ಸಾಧಾರಣ ಬೇನೆಗಳನ್ನು ಗುಣಪಡಿಸಬಲ್ಲರು. ಇದರಲ್ಲಿ ಕುಟುಂಬ ಯೋಜನೆಗೆ ಸಂಬಂಧಿಸಿದ ಔಷಧಿಗಳು ಸಹ ಇವೆ. ಜೊತೆಗೆ ಹುಟ್ಟುವ ಮಕ್ಕಳ ನಡುವೆ ಅಂತರವನ್ನು ಹೆಚ್ಚಿಸಲು ಕೆಲವು ಗಿರಿಜನರಲ್ಲಿ ಔಷಧಿಗಳಿವೆ, ಹಾಗೆ ಮಕ್ಕಳಾಗದೆ ಇರುವ ಸಮಸ್ಯೆಗಳಿಗೆ ಸಹ ಔಷಧಿಗಳಿವೆ ಎಂಬುದಾಗಿ ವಾದವಿದೆ. ಆದರೆ ಇದು ಇನ್ನೂ ಸಂಶೋಧನೆಯಾಗಬೇಕಿದೆ. ಬುಡಕಟ್ಟು ಜನರಲ್ಲಿ ಹೆರಿಗೆ ಮಾಡಿಸುವ ವಿಧಾನವೂ ವೈಶಿಷ್ಟ್ಯಪೂರ್ಣವಾಗಿದ್ದು ತುಂಬು ಗರ್ಭಿಣಿಯನ್ನು ಕೂರಿಸಿ ಹೆರಿಗೆ ಮಾಡಿಸುತ್ತಾರೆ. ಇತ್ತೀಚಿನ ವೈಜ್ಞಾನಿಕ ಅಧ್ಯಯನದಂತೆ ಕುಳಿತು ಹೆರಿಗೆ ಮಾಡಿಸುವ ವಿಧಾನವು, ಮಲಗಿಸಿ ಹೆರಿಗೆ ಮಾಡಿಸುವ ವಿಧಾನಕ್ಕಿಂತ ಹೆಚ್ಚು ಸೂಕ್ತ ಮತ್ತು ಸುಲಭ ಎನ್ನುವ ಅಭಿಪ್ರಾಯವಿದೆ.

ಗಿರಿಜನರಲ್ಲಿ ಮೂಳೆ ಜೋಡಿಸುವ ಕೌಶಲ್ಯವಿದ್ದು ಕೋಳಿಮೊಟ್ಟೆ, ಕೆಲವು ಹಸಿರು ಎಲೆಗಳನ್ನು ಮತ್ತು ಬಿದಿರನ್ನು ಉಪಯೋಗಿಸಿ ಮುರಿದ ಮೂಳೆಯನ್ನು ಜೋಡಿಸಬಲ್ಲರು. ನಾನಾ ರೀತಿಯ ಸೊಪ್ಪುಗಳು ಹಾಗೂ ಇನ್ನಿತರ ಕಾಡಿನ ಕಾಯಿ ಹಣ್ಣುಗಳನ್ನು ಉಪಯೋಗಿಸುವ ಮೂಲಕ ಗಿರಿಜನರು ಪೌಷ್ಠಿಕಾಂಶ ಸಮಸ್ಯೆಯನ್ನು ಆದಷ್ಟು ಬಗೆಹರಿಸಿಕೊಳ್ಳುತ್ತಾರೆ ಎಂದಿದ್ದಾರೆ". (2005: ಪು .ಸಂ. 59)

ಬುಡಕಟ್ಟು ಮಹಿಳೆಯರಲ್ಲಿ ಈಗಲೂ ಮನೆಯಲ್ಲಿ ಹೆರಿಗೆ ಮಾಡಿಸುವ ಕ್ರಮವಿದೆ. ಪರಿಣಿತ ಸೂಲಗಿತ್ತಿಯರು ಈಗಲೂ ಗ್ರಾಮೀಣ ಪ್ರದೇಶದಲ್ಲಿ ಕಾಡಿನಂಚಿನ ಬುಡಕಟ್ಟು ಸಮುದಾಯಗಳಲ್ಲಿ ಹೆರಿಗೆಯನ್ನು ಮಾಡಿಸುತ್ತಾರೆ.

57.34% ಮಹಿಳೆಯರು ಸರಕಾರಿ ಆಸ್ಪತ್ರೆಯನ್ನು ಹೆರಿಗೆಗೆ ಅವಲಂಬಿಸಿದರೆ, 22.33% ಮಹಿಳೆಯರು ಈಗಲೂ ಮನೆಯಲ್ಲಿ ಹೆರಿಗೆಯಾಗುತ್ತಿದೆ ಎಂದು ಪ್ರತಿಕ್ರಯಿಸಿದ್ದಾರೆ. ಹಾಗೂ ಹೆರಿಗೆಯ ನಂತರ ಮನೆಮದ್ದು ಮತ್ತು ಆಹಾರದ ಔಷಧಿಯನ್ನು ತಮ್ಮ ಆರ್ಥಿಕ ಸಾಮರ್ಥ್ಯಕ್ಕೆ ಅನುಗುಣವಾಗಿ ಸೇವಿಸುತ್ತೇವೆ ಎಂದಿದ್ದಾರೆ. ಸರಕಾರಿ ಆಸ್ಪತ್ರೆಯಲ್ಲಿ ಹೆರಿಗೆಯಾದ ಮಹಿಳೆಯರಿಗೆ ವೈದ್ಯರು ಸೂಚಿಸಿದ ಔಷಧಿಯನ್ನು ಸೇವಿಸುವುದು ಕ್ರಮವಿದೆ. 50% ಮಹಿಳೆಯರು ಹೆರಿಗೆಯ ನಂತರ ಎರಡು ತಿಂಗಳ ಮೇಲೆ ತಮ್ಮ ದೈನಂದಿನ ಕೆಲಸಗಳಲ್ಲಿ ತೊಡಗಿಸಿಕೊಳ್ಳುತ್ತಾರೆ.

ಕೊಡಗಿನ ಪಿರಿಯಾಪಟ್ಟಣದ ರೇಶ್ಮೆ ಹಾಡಿ ಎಂಬ ಪ್ರದೇಶದಲ್ಲಿ ಜೇನುಕುರುಬ ಬುಡಕಟ್ಟು ಮಹಿಳೆಯರಿಗೆ ರಾತ್ರಿ ಹೆರಿಗೆ ನೋವು ಕಾಣಿಸಿಕೊಂಡರೆ ಹಾಡಿಯಿಂದ ಪಟ್ಟಣಕ್ಕೆ ತುಂಬಾ ಅಂತರವಿರುವುದರಿಂದಲೂ, ರಸ್ತೆಯಲ್ಲಿ ಸಾಯಂಕಾಲ ಆರು ಗಂಟೆಯ ಮೇಲೆ ಕಾಡಾನೆಗಳ ತೊಂದರೆಯಿರುವುದರಿಂದಲೂ ಆಟೋರಿಕ್ಷಾದವರು ಹಾಡಿಗೆ ಬರಲು ನಿರಾಕರಿಸುತ್ತಾರೆ. ಈ ಕಾರಣದಿಂದಾಗಿ ಹೆಚ್ಚಿನ ಹೆರಿಗೆಗಳು ರಾತ್ರಿಯಲ್ಲಿ ಮನೆಯಲ್ಲಿ ಆಗುತ್ತವೆ. ಎಂದು ಅಲ್ಲಿನ ಸ್ವಸಹಾಯ ಸಂಘದ ಸದಸ್ಯೆಯರಾದ ಬುಡಕಟ್ಟು ಮಹಿಳೆಯರು ಅಭಿಪ್ರಾಯ ಪಡುತ್ತಾರೆ. ಹಾಡಿಯ ಮನೆಗಳ ಸ್ಥಿತಿಯು ತುಂಬಾ ಶೋಚನೀಯವಾಗಿದೆ. ಬಿದಿರಿನಿಂದ ನಿರ್ಮಿಸಿರುವ ಪುಟ್ಟ ಪುಟ್ಟ ಮನೆಗಳಿಗೆ ಪ್ಲಾಸ್ಟಿಕ್‌ನ ಹೊದಿಕೆಗಳಿದ್ದು ಒಂದೇ ಕೋಣೆಯೊಳಗೆ ಅಡಿಗೆ, ನಿದ್ದೆ ಇತ್ಯಾದಿಗಳು ನಡೆಯುತ್ತವೆ. ಬಾಣಂತಿಯರಿರುವ ಮನೆಯಲ್ಲಿ ಆ ತೆರನಾದ ಕೋಣೆಯೊಳಗೆ ಪಕ್ಕದಲ್ಲಿ ಒಂದು ಬಟ್ಟೆಯನ್ನು ಕಟ್ಟಿ ತಾಯಿ ಮಗುವನ್ನು ಅಲ್ಲಿಯೇ ಇರಿಸುವುದನ್ನು ಗಮನಿಸಲಾಗಿದೆ. ಅರಣ್ಯದೊಳಗೆ ಜೇನುಕುರುಬರು ವಾಸವಿರುವುದರಿಂದ ಸರಕಾರದಿಂದ ಮನೆ ಕಟ್ಟಿ ಕೊಡಲು ಹಕ್ಕು ಪತ್ರದ ತೊಂದರೆಯಿದೆ ಎಂದು ಅಲ್ಲಿನ ನಿವಾಸಿಗಳು ಪ್ರತಿಕ್ರಯಿಸಿದ್ದಾರೆ.

ಒಟ್ಟಿನಲ್ಲಿ ದಕ್ಷಿಣ ಕ್ನನಡದ ಬುಡಕಟ್ಟು ಮಹಿಳೆಯರು ಆಧುನಿಕ ಸಮಾಜದ ಕರೆಗೆ ಅನುಗುಣವಾಗಿ ತಮ್ಮನ್ನು ಸಾಮಾಜಿಕವಾಗಿ ತಯಾರಿ ಮಾಡಿಕೊಳ್ಳುವಲ್ಲಿ

ಪ್ರಯತ್ನಿಸುತ್ತಿದ್ದಾರೆ. ಶೈಕ್ಷಣಿಕವಾಗಿ ತಮ್ಮ ಮಕ್ಕಳು ಮುಂದುವರಿಯಬೇಕು ಎನ್ನುವ ಯೋಚನೆಗಳವೆ. ಪೇಟೆ ಪಟ್ಟಣಗಳಿಗೆ ಹೋಗಿ ಬರುವುದರಿಂದ ಅಲ್ಲಿನ ಸಂಸ್ಕೃತಿಯ ಪರಿಚಯವಾಗುತ್ತಿದೆ. ಇತರ ಸಮುದಾಯದೊಂದಿಗೆ ಸಾಮಾಜಿಕ ಸಾಮರಸ್ಯವಿದೆ. ಲಭ್ಯವಿರುವ ಆರೋಗ್ಯ ಸೇವೆಯನ್ನು ಸದುಪಯೋಗ ಪಡಿಸಿಕೊಳ್ಳುತ್ತಾರೆ. ಆದರೆ ಕ್ಯಾಲ್ಸಿಯಂ, ವಿಟಮಿನ್ ಎ, ವಿಟಮಿನ್ ಸಿ ಗಳ ಕೊರತೆಯಿಂದ ಹಾಗೂ ಪೌಷ್ಠಿಕಾಂಶದ ಕೊರತೆಯಿಂದ ಬುಡಕಟ್ಟು ಮಹಿಳೆಯರು ಬಳಲುತ್ತಿದ್ದು ಇದು ಸಂತಾನ ಶಕ್ತಿಯಲ್ಲಿ, ಮಕ್ಕಳ ಪಾಲನೆಯಲ್ಲಿ, ಹಾಗೂ ಮಕ್ಕಳ ಬೆಳವಣಿಗೆಯಲ್ಲಿ ನಕಾರಾತ್ಮಕ ಪ್ರಭಾವ ಬೀರುತ್ತಿದೆ.

ಬುಡಕಟ್ಟು ಸಮುದಾಯದೊಳಗೆ ಇರುವ ಲಿಂಗ ಸಂಬಂಧಿ ವ್ಯವಸ್ಥೆಯ ಕುರಿತಾದ ತಮ್ಮ ಅಧ್ಯಯನದಲ್ಲಿ ಶೈಲಜ ಹಿರೇಮಠ ಅವರು ಹೀಗೆ ಪ್ರತಿಕ್ರಯಿಸಿದ್ದಾರೆ. "ಬುಡಕಟ್ಟು ಸಮಾಜದಲ್ಲಿ ಚಾಲ್ತಿಯಲ್ಲಿರುವ ಹೊರನೋಟಕ್ಕೆ ಸ್ತ್ರೀಪರ ಎಂದು ಕಾಣುವ ಯಾವುದೋ ಒಂದು ಮೌಲ್ಯವನ್ನು ಇಟ್ಟುಕೊಂಡು ಬುಡಕಟ್ಟು ಮಹಿಳೆಯರನ್ನು ಸಶಕ್ತೀಕರಣದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗುವುದಿಲ್ಲ. ಈ ಬಗೆಯ ವಿಶ್ಲೇಷಣೆಗಳು ಬುಡಕಟ್ಟು ಮಹಿಳೆಯರ ನಿಜವಾದ ಬದುಕನ್ನು ಅನಾವರಣಗೊಳಸುವುದಿಲ್ಲ." (2006: ಪು.ಸಂ 266)

ಒಟ್ಟು 57.01% ಮಹಿಳೆಯರು ಮನೆಯ ಮುಖ್ಯ ಚಟುವಟಿಕೆಗಳಲ್ಲಿ ಇತರರೊಂದಿಗೆ ಸೇರಿ ನಿರ್ಧಾರ ತೆಗೆದುಕೊಳ್ಳುತ್ತಾರೆ. ಆದರೂ 42.99% ಮಹಿಳೆಯರು ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಮನೆಯ ಗಂಡಸರನ್ನು ಅವಲಂಬಿಸಿರುವುದು, ಪುರುಷ ಅಧಿಕಾರದ ಲಕ್ಷಣಗಳು ಬುಡಕಟ್ಟು ಕುಟುಂಬಗಳಲ್ಲಿದೆ ಎಂದು ಸ್ಪಷ್ಟಪಡಿಸುತ್ತದೆ.

ಎ. ವಿ. ನಾವಡ ಅವರು ಕೊರಗರ ಕುರಿತಾದ ತಮ್ಮ ಅಧ್ಯಯನದಲ್ಲಿ ವಿಶೇಷವಾಗಿ "ಕೊರಗ ಮಹಿಳೆಯರು ಕುಟುಂಬದಲ್ಲಿ ನಿರ್ಣಾಯಕ ಪಾತ್ರವಹಿಸುತ್ತಾರೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. (2013: ಪು.ಸಂ 312) ಆದರೆ ಯಾವ ಕುಟುಂಬಗಳಲ್ಲಿ ಉದ್ಯೋಗವಿಲ್ಲದೆ ಇರುವ, ಚಟಗಳಿಂದ ಕುಟುಂಬದ ಜವಾಬ್ದಾರಿ ಮರೆತಿರುವ, ವಿಧವೆಯಾಗಿರುವ, ಗಂಡ ಹೆಂಡತಿ ಬೇರ್ಪಟ್ಟಿರುವ ಕುಟುಂಬಗಳಲ್ಲಿ ಮಾತ್ರವೇ ಕೊರಗ ಮಹಿಳೆ ಮನೆಯ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸುವುದನ್ನು ಅಧ್ಯಯನವು ಸ್ಪಷ್ಟಪಡಿಸುತ್ತದೆ.

72.34% ಮಹಿಳೆಯರು ತಾವು ಸಾರ್ವಜನಿಕ ರಂಗದಲ್ಲಿ ಸ್ವ ಇಚ್ಛೆಯಿಂದ ಭಾಗವಹಿಸುತ್ತೇವೆ ಎಂದು ಅಭಿಪ್ರಾಯಪಟ್ಟಿದ್ದು, ಇದರಲ್ಲಿ ಅತ್ಯಂತ ಹೆಚ್ಚಿನ ಮಹಿಳೆಯರು ಸ್ವ

ಸಹಾಯ ಗುಂಪಿನ ಚಟುವಟಿಕೆಗಳಲ್ಲಿ ಭಾಗವಹಿಸುವುದನ್ನು ಸ್ಪಷ್ಟಪಡಿಸಿದ್ದಾರೆ. ಕೇವಲ 4% ರಷ್ಟು ಮಹಿಳೆಯರು ಮಾತ್ರವೇ ಪಂಚಾಯತ್ ಸದಸ್ಯತ್ವ ಹೊಂದಿದ್ದು ಪಂಚಾಯತ್ ಕಾರ್ಯಕ್ರಮದಲ್ಲಿ ಭಾಗವಹಿಸುವುದೆಂದು ತಿಳಿಸಿದ್ದಾರೆ.

ಜೆ.ಎಚ್. ಹಟ್ಟನ್ (1921) ಹಾಗೂ ಡಿ.ಎನ್ ಮಜುಂದಾರ್ (1973) ಅವರು "ಬುಡಕಟ್ಟು ಮಹಿಳೆಯರು ಇತರ ಮಹಿಳೆಯರಿಗಿಂತ ಸಾಮಾಜಿಕ ಚಟುವಟಿಕೆಗಳಲ್ಲಿ ಹೆಚ್ಚು ಸ್ವತಂತ್ರಳು" ಎಂದು ಉಲ್ಲೇಖಿಸಿದ ಅಂಶವು ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಿಗೆ ಅನ್ವಯವಾಗುವುದನ್ನು ಇಲ್ಲಿ ಗಮನಿಸಬಹುದಾಗಿದೆ.

86% ಮಹಿಳೆಯರು ಮನೆಯೊಳಗಿನ ಕೆಲಸವನ್ನು ತಾವೇ ನಿರ್ವಹಿಸುತ್ತಾರೆ. 53% ಮಹಿಳೆಯರು ಅಡಿಗೆ ಕೆಲಸದ ಕುರಿತಾಗಿ ಒತ್ತಡವಿದೆಯೆಂದು ಪ್ರತಿಕ್ರಯಿಸಿದ್ದಾರೆ. ಮುಖ್ಯವಾಹಿನಿಯ ಇತರ ಮಹಿಳೆಯರಂತೆ ಬುಡಕಟ್ಟು ಮಹಿಳೆಗೂ ಸಾಕಷ್ಟು ಜವಾಬ್ದಾರಿಯೊಂದಿಗೆ ಮಕ್ಕಳ ಲಾಲನೆ ಪೋಷಣೆಯಲ್ಲಿ ವಿರಾಮವೆಂಬುದಿಲ್ಲ. ಮನೆಯೊಳಗಿನ ಕೆಲಸದೊಂದಿಗೆ ದುಡಿಯುವ ಹೆಣ್ಣಾಗಿಯೂ ಕುಟುಂಬ ನಿರ್ವಹಣೆಗೆ ಸಹಕರಿಸುವುದರಿಂದ ಬುಡಕಟ್ಟು ಮಹಿಳೆ ತುಂಬಾ ಪ್ರಾಮುಖ್ಯತೆ ಪಡೆಯುತ್ತಾಳೆ.

ಬುಡಕಟ್ಟು ಮಹಿಳೆಯರು ಮುಖ್ಯವಾಹಿನಿಯ ಇತರ ಮಹಿಳೆಯರಂತೆ ತಮ್ಮ ವೈಯಕ್ತಿಕ ಸಮಸ್ಯೆಗಳನ್ನು (70.67%) ತಮ್ಮ ಗಂಡಂದಿರಲ್ಲಿ ಹಂಚಿಕೊಳ್ಳುತ್ತಾರೆ. 'ಆದಿವಾಸಿ ಸಮುದಾಯಗಳ ಬದುಕು ಬವಣೆ' ಎನ್ನುವ ಸಂಪಾದಕೀಯ ಅಧ್ಯಯನದಲ್ಲಿ ಜೇನುಕುರುಬರ ಕುರಿತಾದ ತಮ್ಮ ಅಧ್ಯಯನದಲ್ಲಿ ಎಸ್ ಶ್ರೀಕಾಂತ್ ಅವರು "ಕುಟುಂಬದಲ್ಲಿ ಬುಡಕಟ್ಟು ಗಂಡ ಹೆಂಡತಿ ನಡುವೆ ಸಮಾನತೆ ಇದೆ. ಪರಸ್ಪರ ಏಕವಚನದಲ್ಲಿ ಮಾತನಾಡಿದರೂ ಪ್ರೀತಿ ಗೌರವವಿದೆ. ಹೆಂಡತಿ ಮುಟ್ಟಾದಾಗ ಗಂಡನದ್ದೇ ನೆರವು. ಅಡಿಗೆ ಮಾಡುವುದು, ನೀರು ತರುವುದು ಇತ್ಯಾದಿ. ಸಮಪಾಲು, ಸಹಬಾಳ್ವೆ, ಸಾಮರಸ್ಯ ಇವರ ಕುಟುಂಬದಲ್ಲಿ ಕಾಣುವ ಮುಖ್ಯ ಅಂಶಗಳು. ಪರಸ್ಪರ ಇಷ್ಟ ಆಗದೆ ಒಟ್ಟಿಗೆ ಇರುವುದೇ ಇಲ್ಲ .ಯಾರೂ ಯಾರನ್ನೂ ಹೀಯಾಳಿಸುವುದಿಲ್ಲ. ಹಾಗೇನಾದರೂ ಅದರಲ್ಲಿ ಪರಸ್ಪರ ಸಮಸ್ಯೆಗಳನ್ನು ಯಜಮಾನನ ಮುಂದಿರಿಸಿ ಬೇರ್ಪಡುತ್ತಾರೆ". (2005: ಪು .ಸಂ 2 ಮತ್ತು 3) ಎನ್ನುವ ಅಭಿಪ್ರಾಯದಲ್ಲಿ ಬುಡಕಟ್ಟು ಕುಟುಂಬದಲ್ಲಿ ಪತಿ – ಪತ್ನಿಯರ ಅನ್ಯೋನ್ಯತೆ ಗಮನಿಸಬಹುದಾಗಿದೆ. ಹಾಗೂ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಿಗೆ ಸಂಬಂಧಿಸಿದಂತೆ ಇದನ್ನು ಒಪ್ಪಿಕೊಳ್ಳಬಹುದಾಗಿದೆ.

ಆದರೂ ಮುಖ್ಯವಾಹಿನಿಯ ಜನರ ಒಡನಾಟ, ಪಿತೃ ಪ್ರಧಾನ ಮೌಲ್ಯಗಳಿಂದಾಗಿ ಕುಡಿತವೆನ್ನುವ ದುಶ್ಚಟದಿಂದಾಗಿ ಬುಡಕಟ್ಟು ಸಮುದಾಯಗಳಲ್ಲೂ ಹಿಂಸೆ, ಶೋಷಣೆ, ದಾಂಪತ್ಯದಲ್ಲಿ ಕಲಹಗಳು ಪ್ರಾರಂಭವಾಗುತ್ತಿದೆಯೆಂದು ದಕ್ಷಿಣ ಕನ್ನಡದ ಮತ್ತು ಕೊಡಗು ಜಿಲ್ಲೆಗಳ ಬುಡಕಟ್ಟು ಜನರೊಂದಿಗೆ ಕಾರ್ಯ ನಿರ್ವಹಿಸುತ್ತಿರುವ ಸಮಗ್ರ ಗ್ರಾಮೀಣ ಆಶ್ರಮದ, ಮಹಿಳಾ ಸಂಯೋಜಕಿ ಶ್ರೀಮತಿ ಪದ್ಮ ಅವರು ಅಭಿಪ್ರಾಯ ಪಟ್ಟಿದ್ದಾರೆ.(2013)

ಸುಮಾರು 80.66% ಮಹಿಳೆಯರು ತಾವು ದುಡಿದ ಹಣವನ್ನು ಮನೆ ಖರ್ಚಿಗಾಗಿ ವಿನಿಯೋಗಿಸುತ್ತಾರೆಂದು ಅಧ್ಯಯನ ತಿಳಿಸುತ್ತದೆ. ಹೇಮಲತಾ ಎಚ್. ಎಂ. ಅವರ ಪ್ರಕಾರ "ಸಶಕ್ತೀಕರಣದ ಒಂದು ಗುಣಾತ್ಮಕ ಸೂಚಿಯೆಂದರೆ ಉದ್ಯೋಗಕ್ಕೆ ಹೋಗುವುದು, ಆಸ್ತಿ ಕೊಂಡುಕೊಳ್ಳುವ ಮತ್ತು ಮಾರಾಟ ಮಾಡುವ ನಿರ್ಧಾರ ಕೈಗೊಳ್ಳುವ ಹಕ್ಕನ್ನು ಹೊಂದಿರುವುದು" ಎಂಬುದಾಗಿದೆ. (2003: ಪು.ಸಂ 23 ಮತ್ತು 24)

ಈ ಮೇಲಿನ ಅಂಶದ ಬಗ್ಗೆ ವಿಶ್ಲೇಷಿಸಿದರೆ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಿಗೆ ಜೀವನ ನಿರ್ವಹಣೆಗೆ ದುಡಿಮೆ ಅನಿವಾರ್ಯ. ಶಿಕ್ಷಣದ ಕೊರತೆಯಿಂದಾಗಿ ಉದ್ಯೋಗವನ್ನು ಆರಿಸಿಕೊಳ್ಳಲು ಸಾಧ್ಯವಾಗಿಲ್ಲ. ದುಡಿತದ ಗಳಿಕೆಯ ಅಲ್ಪ ಆದಾಯವು ಜೀವನ ನಿರ್ವಹಣೆಗೆ ಅಗತ್ಯವಾಗಿದ್ದು ಇಲ್ಲಿ ಆಸ್ತಿ ಕೊಂಡುಕೊಳ್ಳುವ ಮತ್ತು ಮಾರಾಟ ಮಾಡುವ ಯೋಚನೆಗಳೇ ಸಾಧ್ಯವಿಲ್ಲವೆಂದು ಗಮನಿಸಬಹುದಾಗಿದೆ. ದುಡಿಯುವುದರಿಂದ ಬುಡಕಟ್ಟು ಮಹಿಳೆಯರನ್ನು ಆರ್ಥಿಕ ಸ್ವಾವಲಂಬಿಗಳು ಎಂದು ನಿರ್ಧರಿಸಬಹುದು. ಆದರೆ ಆ ಗಳಿಕೆಯಿಂದ ತಮಗೆ ಬೇಕಾಗುವ ಬೆಲೆಬಾಳುವ ವಸ್ತುಗಳ ಖರೀದಿಗೆ ಕುಟುಂಬದ ಆರ್ಥಿಕ ಪರಿಸ್ಥಿತಿ ಪೂರಕವಾಗಿಲ್ಲ ಎಂದು ತಿಳಿಯಬಹುದಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಬುಡಕಟ್ಟು ಮಹಿಳೆಯರು ತಮ್ಮ ಸಂಪಾದನೆಯ ಹಣದಿಂದ ತಮಗಿಷ್ಟವಾದ ದುಬಾರಿ ವಸ್ತುವನ್ನು ತೆಗೆದುಕೊಳ್ಳಲು ಸ್ವಾತಂತ್ರ್ಯವಿದೆಯೆಂದು 88.67% ಮಹಿಳೆಯರು ಪ್ರತಿಕ್ರಯಿಸಿದ್ದಾರೆ.

ಅಧ್ಯಯನದ ಪ್ರಕಾರ ಸ್ವಸಹಾಯ ಸಂಘಗಳ ಸದಸ್ಯೆಯರಾಗಿ ಸುಮಾರು 75.34% ಬುಡಕಟ್ಟು ಮಹಿಳೆಯರಿದ್ದಾರೆ. ಹಾಗೂ ಎಲ್ಲಾ ಬುಡಕಟ್ಟು ಮಹಿಳೆಯರು ತಮಗೆ ಸ್ವಸಹಾಯ ಸಂಘಗಳಿಂದ ಒಳಿತಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. 65.00% ಮಹಿಳೆಯರು ಹಣದ ಸಹಾಯಕ್ಕಾಗಿ ಸ್ವಸಹಾಯ ಸಂಘಗಳು ಪ್ರಯೋಜನಕಾರಿ ಎಂದಿದ್ದಾರೆ.

10.34% ಮಹಿಳೆಯರು ಮಾತ್ರವೇ ವಿವಿಧ ರೀತಿ ಜಾಗೃತಿಗಾಗಿ ಮತ್ತು ಪರಸ್ಪರ ಮಾಹಿತಿ ಹಂಚಿಕೊಳ್ಳಲು ಎಂದು ಅಭಿಪ್ರಾಯಪಟ್ಟಿದ್ದಾರೆ.

ಬುಡಕಟ್ಟು ಮಹಿಳಾ ಪರ ಅಧ್ಯಯನದಲ್ಲಿ ಜಗದೀಶ್ ಕುಮಾರ್ ಚ.ನಾಯಕ ಅವರು ಸರ್ಕಾರವು ಮಹಿಳಾ ಪರ ಅನುಷ್ಠಾನಗೊಳಸಿದ ಸ್ವಸಹಾಯ ಗುಂಪುಗಳ ಉತ್ತೇಜನ ಕ್ರಮಗಳು ಯಾವುವು ಎಂಬುದರ ಕುರಿತಾಗಿ ಪರಿಶೀಲಿಸಿದ್ದು ಅವು ಈ ಕೆಳಗಿನಂತಿವೆ.

- ಬಡತನ, ಅನಕ್ಷರತೆ, ಔದ್ಯೋಗಿಕ ಅವಕಾಶದ ಜೊತೆ ಮೂಲಭೂತ ಸೌಕರ್ಯದ ಕೊರತೆಯಿಂದಾಗಿ, ಸಮಸ್ಯೆ ಎದುರಿಸುತ್ತಿರುವ ಮಹಿಳೆಯರನ್ನು ಸ್ವಸಹಾಯ ಗುಂಪುಗಳು ಒಳಗೊಂಡಿದ್ದು ನಾಯಕತ್ವ ತರಬೇತಿ, ನೀಡುವಂತೆ ಹಾಗೂ ಆ ಮೂಲಕ ಸ್ವಂತ ಉದ್ಯೋಗ ಪ್ರಾರಂಭಿಸಲು ಮಹಿಳೆಗೆ ಅನುಕೂಲವಾಗುವಂತೆ ನೀತಿ ರೂಪಿಸಲಾಗಿದೆ. ಬುಡಕಟ್ಟು ಮಹಿಳೆಯರು ವಾಸಿಸುವಂತಹ ಪ್ರದೇಶದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಂಡು ಅಭಿವೃದ್ಧಿ ಸಾಧಿಸಬೇಕು.
- ಐದು, ಆರು ಏಳನೇ ಪಂಚವಾರ್ಷಿಕ ಯೋಜನೆಯ ಪ್ರಕಾರ ಆರೋಗ್ಯ, ಶಿಕ್ಷಣ, ಉದ್ಯೋಗ, ಸಮಾನತೆ ಹಕ್ಕುಗಳ ಬಗ್ಗೆ ಎಚ್ಚರಿಕೆ ಮೂಡಿಸುವುದರ ಜೊತೆಗೆ ಪಂಚಾಯತ್‌ರಾಜ್ ವ್ಯವಸ್ಥೆ ತಂದ 73ನೇ ತಿದ್ದುಪಡಿಯ ಪ್ರಕಾರ ಮಹಿಳೆಯು 33% ರಷ್ಟು ರಾಜಕೀಯ ರಂಗದಲ್ಲಿ ಭಾಗವಹಿಸುವ ವಿಚಾರ.
- ಸುಲಭ ರೀತಿಯಲ್ಲಿ ಕಡಿಮೆ ಬಡ್ಡಿ ದರದಲ್ಲಿ ಸಾಲದ ವ್ಯವಸ್ಥೆ ಮಾಡಿ ಶ್ರೀಮಂತರಿಂದ ಬಡಜನರನ್ನು ರಕ್ಷಿಸುವುದು.
- ಬ್ಯಾಂಕ್ ಮತ್ತು ಇನ್ನಿತರ ಹಣಕಾಸು ಸಂಸ್ಥೆಗಳ ಮೂಲಗಳಿಂದ ಸಾಲ ಪಡೆಯಲು ಅನುಕೂಲ ಮಾಡಿಕೊಡುವುದು.
- ಗುಂಪಿನ ಸದಸ್ಯರಲ್ಲಿ ವ್ಯಾಪಾರ ಚಟುವಟಿಕೆ, ಹೈನುಗಾರಿಕೆ, ಕುರಿ ಸಾಕಾಣಿಕೆ, ಇತ್ಯಾದಿ ಚಟುವಟಿಕೆಗಳ ಕುರಿತಾಗಿ ಅರಿವು ಮೂಡಿಸುವುದು.

ಆದರೆ ಈ ಉದ್ದೇಶಗಳು ಹೆಚ್ಚಾಗಿ ಬುಡಕಟ್ಟು ಮಹಿಳೆಯರಿಗೆ ಪೂರಕವಾಗಿಲ್ಲ. ಈ ಉದ್ದೇಶಗಳು ಗ್ರಾಮೀಣ ಪ್ರದೇಶದಲ್ಲಿ ಉತ್ಪಾದನಾಂಗದ ಮೇಲೆ ಒಡೆತನ ಸಾಧಿಸಿದ ಮಹಿಳೆಯರ ಪರವಾಗಿದೆ.

ಆದ್ದರಿಂದ ಮಹಿಳಾ ಸ್ವಸಹಾಯ ಸಂಘದ ಉದ್ದೇಶಗಳು ದೋಷಪೂರಿತವಾಗಿದೆ. ಈ ಉದ್ದೇಶಗಳು ಮೇಲ್ವರ್ಗದ ಮಹಿಳೆಯರಿಗೆ ಮಾತ್ರ

ಅನ್ವಯಿಸುತ್ತವೆ. ಹೊರತು ಬುಡಕಟ್ಟು ಮಹಿಳೆಯರ ಪರವಾಗಿ ನಿಲ್ಲುವುದಿಲ್ಲ. ಬಹುಮುಖ್ಯವಾಗಿ ಬುಡಕಟ್ಟು ಮಹಿಳೆಯರು ವಾಸಿಸುವಂತಹ ಪ್ರದೇಶಗಳಲ್ಲಿ ಲಭ್ಯವಿರುವಂತಹ ಸಂಪನ್ಮೂಲಗಳನ್ನು ಬಳಸಿ ಸಬಲೀಕರಣಗೊಳ್ಳುವ ಅವಕಾಶಗಳಿಗೆ ಅರಣ್ಯ ನೀತಿಗಳು ತಡೆಯಾಗಿವೆ. ಹಾಗೂ ಬುಡಕಟ್ಟು ಸಮುದಾಯದಲ್ಲಿ ಬಹುಸಂಖ್ಯಾತ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಹೀಗಾಗಿ ಕೈಗಾರಿಕಾ ವಲಯದಲ್ಲಿ, ಸಾರ್ವಜನಿಕ ಸೇವಾ ವಲಯದಲ್ಲಿ ಯಾವ ಅರ್ಹತೆ, ಸಾಮರ್ಥ್ಯ, ಕೌಶಲ್ಯಗಳು ನೈಪುಣ್ಯತೆ ಇಲ್ಲದೆ ಬುಡಕಟ್ಟು ಮಹಿಳೆಯರಿಗೆ ಉದ್ಯೋಗ ದೊರೆಯುವುದು ಅಸಾಧ್ಯ.

ಆಧುನಿಕ ಸಂದರ್ಭಗಳಲ್ಲಿ ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡ ರಾಷ್ಟ್ರೀಕೃತ, ಪ್ರಾದೇಶಿಕ ಮತ್ತು ಹೋಬಳಿ ಮಟ್ಟದ ಬ್ಯಾಂಕುಗಳು ಬಡಜನರಿಗೆ ಸಾಲ ನೀಡಲು ಭೂದಾಖಲಾತಿ ಪತ್ರಗಳನ್ನು ಕಡ್ಡಾಯವಾಗಿ ಸಲ್ಲಿಸಲು ಸೂಚಿಸುತ್ತವೆ. ಅದೆಷ್ಟೋ ಬುಡಕಟ್ಟು ಕುಟುಂಬಗಳಿಗೆ ಸ್ವಂತ ಭೂಮಿಯೇ ಇಲ್ಲದ ಮೇಲೆ ಹೇಗೆ ಬ್ಯಾಂಕ್ ಗಳಿಂದ ಸಾಲ ಪಡೆಯಲು ಸಾಧ್ಯವಿದೆ. ಎನ್ನುತ್ತಾರೆ ಅಧ್ಯಯನಕಾರರು. ಅಲ್ಪ ವೇತನದಲ್ಲಿ ಜೀವನ ನಡೆಸುವಂತಹ ಬುಡಕಟ್ಟು ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಸಾಧ್ಯವೇ? ಹೀಗಾಗಿ ಆದಿವಾಸಿ ಮಹಿಳೆಯರಿಗೆ ಸ್ವಸಹಾಯ ಸಂಘಗಳ ಪಾತ್ರ ಪ್ರಶ್ನಾರ್ಥಕವಾಗಿ ನಿಲ್ಲುತ್ತದೆ. ಎಂದು ಅಧ್ಯಯನಕಾರರು ಪ್ರತಿಕ್ರಿಯಿಸಿದ್ದು ಕರ್ನಾಟಕದಲ್ಲಿ ಬುಡಕಟ್ಟು ಮಹಿಳಾ ಅಬಿವೃದ್ಧಿಗಾಗಿ ಪ್ರಾದೇಶಿಕವಾಗಿ ದೊರೆಯುವಂತಹ ನೈಸರ್ಗಿಕ ಸಪನ್ಮೂಲಗಳು ಹಾಗೂ ಕೃಷಿ ಭೂಮಿಗೆ ಅನುಸಾರವಾಗಿ, ಮಹಿಳಾ ಆರ್ಥಿಕ ಅಭಿವೃದ್ಧಿ ಕಾರ್ಯಯೋಜನೆಗಳು ರೂಪುಗೊಳ್ಳಬೇಕು ಎಂಬುದು ಅಧ್ಯಯನಕಾರರ ಅಭಿಪ್ರಾಯವಾಗಿದೆ. (2006: ಪು.ಸಂ 65 ರಿಂದ 67)

ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರಿಗೆ ಸ್ವಸಹಾಯ ಸಂಘಗಳ ಉಪಯೋಗಗಳನ್ನು ಅವಲೋಕಿಸುವುದಾದರೆ, ಬುಡಕಟ್ಟು ಮಹಿಳೆಯರಲ್ಲಿ ಇತರ ಸಮುದಾಯದವರೊಂದಿಗೆ ಸ್ವಸಹಾಯ ಗುಂಪುಗಳ ಮೂಲಕ ಸೌಹಾರ್ದ ಸಂಬಂಧಗಳು ಬೆಳೆದಿವೆ. ಆದರೆ ಸ್ವಸಹಾಯ ಗುಂಪುಗಳ ಒಟ್ಟು ಉದ್ದೇಶ ಮತ್ತು ಕಾರ್ಯಕ್ರಮಗಳ ಕುರಿತು ಅರ್ಥ ಮಾಡಿಕೊಳ್ಳುವಲ್ಲಿ ಬುಡಕಟ್ಟು ಮಹಿಳೆಯರಲ್ಲಿ ಕೊರತೆ ಕಾಣಬಹುದಾಗಿದೆ. ಹೆಚ್ಚಿನ ಸಂಖ್ಯೆಯ ಮಹಿಳೆಯರು ಸ್ವಸಹಾಯ ಗುಂಪುಗಳು ಹಣದ ಪ್ರಯೋಜನಕ್ಕಾಗಿ ಇರುವುದೆಂದು ತಿಳಿದುಕೊಂಡಿದ್ದು, ಸಾಲ ಪಡೆಯುವ ಉದ್ದೇಶಗಳು ಕ್ಷಣಿಕ ಪ್ರಯೋಜನಕ್ಕಾಗಿ ಆಗಿರುತ್ತವೆ. ಆದ್ದರಿಂದ ಬುಡಕಟ್ಟು ಮಹಿಳೆಯರಿಗೆ ಸರ್ಕಾರದ ಸ್ವಸಹಾಯ ಗುಂಪುಗಳ ಉದ್ದೇಶಗಳು

ಮನವರಿಕೆಯಾಗದೆ ಅವುಗಳು ಸಮರ್ಪಕವಾಗಿ ಈಡೇರದೆ ಇರುವುದನ್ನು ಅವಲೋಕಿಸಬಹುದು.

ದಕ್ಷಿಣ ಕನ್ನಡದಲ್ಲಿ ಕೊರಗ ಸಂಘಟನೆಗಳು ಮಹಿಳೆಯರಿಗಾಗಿ ಸ್ವಸಹಾಯ ಗುಂಪುಗಳನ್ನು ರಚಿಸಿಕೊಂಡಿದ್ದು, ಇಲ್ಲಿ ಅವಿರತವಾಗಿ ವಿವಿಧ ರೀತಿಯ ಅರಿವಿನ ಕಾರ್ಯ ಕ್ರಮಗಳೊಂದಿಗೆ ತಮ್ಮ ಕುಲಕಸುಬಾದ ಬುಟ್ಟಿ, ಮೊರ, ಹಗ್ಗ ತಯಾರಿಕೆ, ಬೀಳಲುಗಳಿಂದ ಪ್ರಸ್ತುತ ಕಾಲಕ್ಕೆ ಅಗತ್ಯವಿರುವ ವಿವಿಧ ವಸ್ತುಗಳನ್ನು ತಯಾರಿಸುವುದರೊಂದಿಗೆ ಮಹಿಳೆಯರು ತಮ್ಮದೇ ಸಹಕಾರಿ ಸಂಘಗಳನ್ನು ರಚಿಸಿಕೊಂಡಿದ್ದಾರೆ. ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ ಬುಡಕಟ್ಟು ಮಹಿಳೆಯರಿಗೆ ಪ್ರತ್ಯೇಕವಾದ ಸ್ವಸಹಾಯ ಗುಂಪುಗಳ ಅಗತ್ಯವಿದೆ. ಆ ಮೂಲಕ ಅವರ ಒಟ್ಟು ಜೀವನ ವಿಧಾನ, ಕಸುಬು, ಶಿಕ್ಷಣ, ಸಾಮರ್ಥ್ಯ, ಕೌಶಲ್ಯಗಳಿಗನುಗುಣವಾಗುವ ಆರ್ಥಿಕ ಯೋಜನಾ ಚಟುವಟಿಕೆಗಳಿಗೆ ಪ್ರೋತ್ಸಾಹದ ಅಗತ್ಯವಿದೆ. ಹಾಗೂ ಇದಕ್ಕೆ ಸಂಬಂಧಿಸಿದಂತೆ ಸ್ವಸಹಾಯ ಗುಂಪುಗಳ ಉದ್ದೇಶಗಳು ಬದಲಾವಣೆಯಾಗುವ ಅನಿವಾರ್ಯತೆಯಿದೆ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ.

ಹೇಮಲತಾ ಎಚ್. ಎಂ. ಅವರ ಅಭಿಪ್ರಾಯದಂತೆ ಮಹಿಳಾ ಸಶಕ್ತೀಕರಣದಲ್ಲಿ ಗುಣಾತ್ಮಕ ಮತ್ತು ಪರಿಮಾಣಾತ್ಮಕವಾದ ಅನೇಕ ಸೂಚಿಗಳಲ್ಲಿ ಬಹಳ ಮುಖ್ಯವಾದ ಎರಡು ಸೂಚಿಗಳು ಸಂಘಟನೆ ಮತ್ತು ಮಹಿಳಾ ಗುಂಪುಗಳಲ್ಲಿ ಸದಸ್ಯತ್ವ ಪಡೆಯುವುದು ಹಾಗೂ ಇನ್ನೊಂದು ಸ್ಥಳೀಯ ಸರಕಾರ ಅಥವಾ ರಾಜಕೀಯ ಪಕ್ಷಗಳ ಸದಸ್ಯರಾಗಿ ಸರ್ಕಾರದಲ್ಲಿ ಜನರ ಪ್ರತಿನಿಧಿಯಾಗಿ ಕೆಲಸ ಮಾಡುವುದಾಗಿದೆ.

ದಕ್ಷಿಣ ಕನ್ನಡದಲ್ಲಿ ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು (75.34%) ಸ್ವಸಹಾಯ ಗುಂಪುಗಳಲ್ಲಿ ಮಾತ್ರವೇ ಸದಸ್ಯತ್ವ ಪಡಕೊಂಡಿದ್ದು, ಪಂಚಾಯತ್ ಸದಸ್ಯತ್ವ ಪಡೆದ 0.34% ಮಹಿಳೆಯರು, ಸಹಕಾರಿ ಸಂಘ, ಮಹಿಳಾ ಮಂಡಳಿಯಲ್ಲಿ 4%, ಜಾತಿ ಸಂಘಗಳಲ್ಲಿ 4% ಮಹಿಳೆಯರು ಸದಸ್ಯತ್ವ ಹೊಂದಿರುವುದು ಅಧ್ಯಯನದಿಂದ ದೃಢಪಟ್ಟಿದೆ.

'ಕರ್ನಾಟಕದ ಬುಡಕಟ್ಟು ಮಹಿಳೆಯರ ರಾಜಕೀಯ ಭಾಗವಹಿಸುವಿಕೆ' ಕುರಿತಾದ ತಮ್ಮ ಅಧ್ಯಯನದಲ್ಲಿ ಡಿ ಮೀನಾಕ್ಷಿ ಅವರು ರಾಜಕೀಯವಾಗಿ ಬುಡಕಟ್ಟು ಮಹಿಳೆಯರನ್ನು ಸಶಕ್ತೀಕರಣಗೊಳಿಸುವ ಮಹತ್ವದ ಕುರಿತು ವಿವರಿಸಿದ್ದಾರೆ. ಅವರ ಅಭಿಪ್ರಾಯದ ಪ್ರಕಾರ ಇಂದಿನ ಜಾಗತೀಕರಣದ ಸಂದರ್ಭಗಳಲ್ಲಿ ಬುಡಕಟ್ಟನ್ನು ಹೊರತುಪಡಿಸಿ

ಇತರ ಶ್ರೇಣಿ, ವರ್ಗದ ಮಹಿಳೆಯರೇ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಮುಖ್ಯವಾಹಿನಿಯಿಂದ ಇನ್ನೂ ದೂರವೇ ಉಳಿದಿದ್ದಾರೆ. ಕರ್ನಾಟಕದ ಒಟ್ಟು ಬುಡಕಟ್ಟುಗಳ ಮಹಿಳೆಯರು ಒಂದು ಶಕ್ತಿ ಶಾಲಿ ಗುಂಪಾಗಿ ಬೆಳೆದು ರಾಜಕೀಯ, ಆರ್ಥಿಕವಾದ ಮುಖ್ಯವಾಹಿನಿಯ ಒಳಗೆ ಸೇರಲು ಸಾಧ್ಯವಿಲ್ಲ ಎಂದು ಹೇಳಲಾಗದು. ಆದರೆ ಕಾಲಾವಧಿ ಬೇಕಾಗುತ್ತದೆ.

ಕರ್ನಾಟಕದಲ್ಲಿ ಸುಮಾರು 50ಕ್ಕೂ ಹೆಚ್ಚು ಇರುವ ಬುಡಕಟ್ಟು ಮಹಿಳೆಯರು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಸಾಮಾನ್ಯ ಮಹಿಳೆಯರಿಗಿಂತಲೂ ಹಿಂದುಳಿದಿದ್ದಾರೆ. ಕೇವಲ ಕೆಲವೇ ಬೆರಳೆಣಿಕೆಯಷ್ಟು ಬುಡಕಟ್ಟು ಮಹಿಳೆಯರು ತಳಮಟ್ಟದ ರಾಜಕೀಯದಲ್ಲಿ ಭಾಗವಹಿಸುತ್ತಿದ್ದಾರೆ. ಒಟ್ಟು 677 ಗ್ರಾಮ ಪಂಚಾಯತ್ ಸ್ಥಾನಮಾನಗಳಲ್ಲಿ ಬುಡಕಟ್ಟು ಸಮುದಾಯದ 126 (289 ಒಟ್ಟು ಮಹಿಳೆಯರು ಆಯ್ಕೆಯಾದವರು) ಮಹಿಳೆಯರು ಆಯ್ಕೆಯಾಗಿರುವುದು ಉತ್ತಮ ಅನಿಸಿದರೂ, ಇದರಲ್ಲಿ ಬೇಡ ಬುಡಕಟ್ಟಿನವರು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿದ್ದು ಹಾಗೂ ಅರ್ಧಕ್ಕಿಂತಲೂ ಹೆಚ್ಚಿನ ಬುಡಕಟ್ಟು ಮಹಿಳೆಯರು ಅನಕ್ಷರಸ್ಥರು. ಕೆಲವರು ಒಂದನೇ ತರಗತಿಗೆ ಮಾತ್ರ ಓದಿದ್ದಾರೆ. ಕೆಲವರು ಹೆಸರು ಬರೆದು ಸಹಿ ಮಾಡಲು ಕಲಿತಿದ್ದಾರೆ. ಹೆಚ್ಚಿನವರು ದಿನಗೂಲಿಯಿಂದ ಜೀವನ ಸಾಗಿಸುತ್ತಿದ್ದಾರೆ. ಕೌಟುಂಬಿಕ ಹೊಣೆಗಾರಿಕೆಯಿಂದ ಈಗಿನ ಆಧುನಿಕ ಕಾಲದಲ್ಲೂ ನೀರು ಮತ್ತು ಉರುವಲು ಸಂಗ್ರಹಕ್ಕಾಗಿ ಚುನಾಯಿತ ಮಹಿಳೆಯರು ತಮ್ಮ ಹೆಚ್ಚಿನ ಸಮಯ ನೀಡಬೇಕಿದೆ. ಕೆಲವು ಸದಸ್ಯೆಯರು ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ವಿದ್ಯುಚ್ಛಕ್ತಿಯ ವ್ಯವಸ್ಥೆ, ಶೌಚಾಲಯದ ವ್ಯವಸ್ಥೆಯಾಗಲೀ ಇಲ್ಲ. ಮೂಲಭೂತ ಅವಶ್ಯಕತೆಗಳನ್ನು ಪೂರೈಸಲು ಕಷ್ಟಪಡುವವರಲ್ಲಿ ರಾಜಕೀಯ ಭಾಗವಹಿಸುವಿಕೆ ಉತ್ತಮವಾಗಿರುವುದೇ ಎಂದು ಪ್ರಶ್ನಿಸಿದ್ದಾರೆ ಅಧ್ಯಯನಕಾರರು. (2010: ಪು.ಸಂ 17 ಮತ್ತು 18)

ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಮಹಿಳೆಯರ ರಾಜಕೀಯ ಭಾಗವಹಿಸುವಿಕೆಗೂ ಈ ಮೇಲಿನ ಅಭಿಪ್ರಾಯಗಳಿಗೂ ಸಾಮ್ಯತೆಗಳಿರುವುದನ್ನು ಗಮನಿಸಬಹುದಾಗಿದೆ. ಹೆಚ್ಚಿನ ಎಲ್ಲಾ ಬುಡಕಟ್ಟಿನ ಮಹಿಳೆಯರು (ಕೊರಗ ಮಹಿಳೆಯರನ್ನು ಹೊರತುಪಡಿಸಿ) ಮೂಲಭೂತ ಅಗತ್ಯತೆಗಳಾದ ವಸತಿ, ಶೌಚಾಲಯ ಪೂರೈಸಿಕೊಳ್ಳುವಲ್ಲಿ ಕೊಂಚಮಟ್ಟಿಗೆ ಸಫಲರಾಗಿದ್ದರೂ, ರಾಜಕೀಯ ಮತ್ತು ಇತರ ಸಂಘ ಸಂಸ್ಥೆಗಳಲ್ಲಿ ಬುಡಕಟ್ಟು ಮಹಿಳೆಯರ ಭಾಗವಹಿಸುವಿಕೆಯ ಕೊರತೆಯನ್ನು ಅಧ್ಯಯನ ಸಾಬೀತುಪಡಿಸುತ್ತದೆ.

ಕಾರ್ಲ್‌ಮಾರ್ಕ್ಸ್ ಮತ್ತು ಗಾಂಧಿಜಿಯವರು ಮಹಿಳಾ ಪರ ತಳೆದಿದ್ದ ನಿಲುವುಗಳ ಕುರಿತಾದ ಅಭಿಪ್ರಾಯಗಳನ್ನು ಪ್ರವೀಣ್ ಫೆರ್ನಾಂಡಿಸ್ ಅವರು ತಮ್ಮ ಮಹಿಳಾ ಅಭಿವೃದ್ಧಿಯ ಕುರಿತಾದ ಅಧ್ಯಯನದಲ್ಲಿ ಹೀಗೆ ಪ್ರತ್ರಿಕಯಿಸಿದ್ದಾರೆ. "ಎಲ್ಲಿಯವರೆಗೆ ಯಾವುದೇ ಸಮಾಜದಲ್ಲಿ ಕ್ರಿಯಾತ್ಮಕ, ಆರ್ಥಿಕ, ಮೌಲ್ಯವುಳ್ಳ ಸಾಮಾಜಿಕ ಚಟುವಟಿಕಗೆಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಅವಕಾಶ ಪಡೆಯದೆ, ಅವರ ಚಟುವಟಿಕೆಗಳು ಮನೆಕೆಲಸಗಳಿಗೆ ಸೀಮಿತವಾಗಿರುತ್ತದೆಯೋ, ಅಲ್ಲಿಯವರೆಗೆ ಮಹಿಳೆಯರಿಗೆ ವಿವೇಚನೆಯಾಗಲಿ, ಮಹಿಳೆಯರಿಗೆ ಸಮಾನ ಸ್ಥಾನಮಾನವಾಗಲೀ ಸಂಭವಿಸುವುದು ಅಸಾಧ್ಯ". "ಹಾಗೆಯೇ ಒಂದು ದೇಶದ ಅಭಿವೃದ್ಧಿಯಾಗಬೇಕಾದರೆ ಅಲ್ಲಿನ ಮಹಿಳೆಯರು, ಅಲ್ಲಿನ ಹೋರಾಟಗಳಲ್ಲಿ , ಪ್ರಗತಿಕಾರ್ಯಗಳಲ್ಲಿ ಭಾಗಿಯಾಗಬೇಕು ಎನ್ನುವ ನಿಲುವು ತಳೆದಿದ್ದ ಗಾಂಧೀಜಿಯವರ ನಾಡಿನಲ್ಲಿ ಸ್ವಾತಂತ್ರ್ಯ ಸಿಕ್ಕಿಲ್ಲವೆಂದು ಹೇಳಲು ನೋವಾಗುತ್ತದೆ. ಇದು ಭಾರತದ ಮಹಿಳೆಯರ ಸಮಸ್ಯೆಯಷ್ಟೇ ಅಲ್ಲ. ವಿಶ್ವದಾದ್ಯಂತ ಮಹಿಳೆಯರು ಕಾರ್ಯ ನಿರ್ವಹಣೆಯಲ್ಲಿ ಎಷ್ಟೇ ಮುಂದುವರಿದರೂ ಹೆಚ್ಚುತ್ತಿರುವ ಲಿಂಗಭೇದ, ಹಾಗೂ ತಾರತಮ್ಯ ಹಾಗೂ ಕಾರ್ಯನಿರ್ವಹಣೆಯ ಪರಿಸ್ಥಿತಿಯನ್ನು ಗಮನಿಸಿದರೆ, ಅವರ ಆರ್ಥಿಕ ಸ್ಥಾನ -ಮಾನ ಕೆಳಮಟ್ಟದಲ್ಲಿದೆ. ಶಿಕ್ಷಣದಲ್ಲಿ ತಾರತಮ್ಯ, ತರಬೇತಿ, ಆಸ್ತಿಯ ಹಕ್ಕು ವಿಷಯದಲ್ಲಿ ಕೂಡಾ ಇನ್ನೂ ಸರಿಸಮಾನವಾದ ಹಕ್ಕುಗಳನ್ನು ನೀಡಿರುವುದಿಲ್ಲ". (2002: ಪು.ಸಂ 4 ಮತ್ತು 5)

ಮಹಿಳಾ ಸಶಕ್ತೀಕರಣದ ಪರಿಕಲ್ಪನೆ ಮತ್ತು ಆಚರಣೆಗಳೆರಡನ್ನು ಕುರಿತಾದ ಮಹಿಳಾ ಸಶಕ್ತೀಕರಣ ಎನ್ನುವ ಒಂದು ಸೈದ್ಧಾಂತಿಕ ಚರ್ಚೆಯನ್ನೊಳಗೊಂಡ ಅಧ್ಯಯನದಲ್ಲಿ ಹೇಮಲತಾ ಎಚ್.ಎಂ ಅವರು ಸ್ತ್ರೀವಾದಿಗಳ ಪ್ರಕಾರ "ಮಹಿಳೆಯರ ಪರಾಧೀನ ಪರಿಸ್ಥಿತಿಗೆ ಕಾರಣವಾಗಿರುವ ಪ್ರಸ್ತುತ ಸಾಮಾಜಿಕ ರಚನೆಯಲ್ಲಿ ತೀವ್ರವಾದ ಬದಲಾವಣೆ ತರುವುದು ಸಶಕ್ತೀಕರಣ" ಎಂದಿದ್ದಾರೆ. (2003: ಪು.ಸಂ 10 ಮತ್ತು 11)

ಇಲ್ಲಿ ಬುಡಕಟ್ಟು ಮಹಿಳೆಗೆ ಇದನ್ನು ಹೋಲಿಸುವುದಾದರೆ ಅವರ ಪರಾಧೀನ ಪರಿಸ್ಥಿತಿಗೆ ಕಾರಣಗಳು ಹಲವಾರು. ಶಿಕ್ಷಣದ ಕೊರತೆ, ಅರಿವಿನ ಕೊರತೆ, ಉತ್ತಮ ಉದ್ಯೋಗದ ಅಭದ್ರತೆ, ಅನೌಪಚಾರಿಕ ಮಾಹಿತಿಯ ಕೊರತೆ, ರಾಜಕೀಯ ಅರಿವಿನ ಕೊರತೆ ಅನಾರೋಗ್ಯ ಇತ್ಯಾದಿಗಳು ಪ್ರಸ್ತುತ ಸಾಮಾಜಿಕ ರಚನೆ ಮಾತ್ರವಲ್ಲದೆ ರಾಜಕೀಯ, ಆರ್ಥಿಕ ಸಾಂಸ್ಕೃತಿಕ ರಚನೆಗಳಲ್ಲಿ ಬದಲಾವಣೆ ತರುವ ಅನಿವಾರ್ಯತೆ ಇದೆ.

ಹೇಮಲತಾ ಎಚ್.ಎಂ. ಅವರ ಪ್ರಕಾರ ಸಶಕ್ತೀಕರಣವು "ವ್ಯಕ್ತಿಯು ತನ್ನ ಬಗ್ಗೆ ತಿಳಿದುಕೊಂಡು ತನಗೇನು ಬೇಕು ಎಂದು ಅಭಿವ್ಯಕ್ತಪಡಿಸಬೇಕು. ತನಗೆ ಬೇಕಾದುದನ್ನು ಪಡೆಯಲು ಪ್ರಯತ್ನಿಸುವುದು. ಆತ್ಮವಿಶ್ವಾಸ, ಅರಿವು, ಮುಕ್ತ ಸಂಪಾದನೆ, ಆಯ್ಕೆ, ಸಂಪನ್ಮೂಲಗಳ ಮೇಲೆ ಹಿಡಿತ ಮತ್ತು ನಿರ್ಧಾರ ಕೈಗೊಳ್ಳುವ ಹಕ್ಕನ್ನು ಹೊಂದುವ ಪ್ರಕ್ರಿಯೆಯಾಗಿದೆ." ಯಾರಲ್ಲಿ ಈ ಗುಣಗಳಿವೆಯೋ ಅವರನ್ನು ಸಶಕ್ತರು ಎಂದು ಕರೆಯಬಹುದು ಎಂದು ಪ್ರತಿಕ್ರಿಯಿಸಿದ್ದಾರೆ.

ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಗೆ ಈ ಮೇಲಿನ ಮೌಲ್ಯಗಳನ್ನು ಹೋಲಿಸಿದಾಗ **"ಮುಕ್ತ ಸಂಚಾಲನೆ"** ಎನ್ನುವ ಒಂದು ಮಾನದಂಡ ಮಾತ್ರ ಇರುವುದು ಸ್ಪಷ್ಟವಾಗುವ ಹಿನ್ನೆಲೆಯಲ್ಲಿ ಈ ಅಧ್ಯಯನಕಾರರ ಸಶಕ್ತತೆಯ ಮಾನದಂಡಗಳು ಬುಡಕಟ್ಟು ಮಹಿಳೆಯರಲ್ಲಿ ಇಲ್ಲ ಎಂದು ಅಭಿಪ್ರಾಯಪಡಬಹುದಾಗಿದೆ.

ಬುಡಕಟ್ಟು ಮಹಿಳೆಯರು ಕುಟುಂಬದ ಮುಖ್ಯ ಚಟುವಟಿಕೆಗಳಲ್ಲಿ ನಿರ್ಧಾರ ತೆಗೆದುಕೊಳ್ಳುವುದು ಹೌದಾದರೂ ನಿರ್ಧಾರ ಕೈಗೊಳ್ಳುವ ಹಕ್ಕನ್ನು ಪಡೆಯುವುದೇ ಸಶಕ್ತೀಕರಣವಲ್ಲ. ಮಹಿಳೆಯರು ತಮ್ಮನ್ನು ತಾವು ಸಮರ್ಥರು, ನಿರ್ಧಾರ ಕೈಗೊಳ್ಳುವ ಶಕ್ತಿ ಇರುವವರು ಎಂದು ಭಾವಿಸಿಕೊಳ್ಳಬೇಕು. ಈ ಭಾವನೆಯೂ ಹೆಚ್ಚಿನ ಬುಡಕಟ್ಟು ಮಹಿಳೆಯರಲ್ಲಿ ಇಲ್ಲವಾದುದರಿಂದ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರನ್ನು ಈ ಮೇಲಿನ ಸಿದ್ಧಾಂತದ ಆಧಾರದ ಮೇಲೆ ಸಶಕ್ತರು ಎಂದು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ.

ಸಬಲೀಕರಣವು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಆಯಾಮಗಳನ್ನು ಒಳಗೊಂಡಿರುವುದರಿಂದ ಕೇವಲ ಒಂದು ಕ್ಷೇತ್ರದಲ್ಲಿ ಬದಲಾವಣೆ ಮತ್ತು ಮುಂದುವರಿಯುವಿಕೆಯಿಂದ ಸಶಕ್ತಗೊಳ್ಳಲು ಸಾಧ್ಯವಿಲ್ಲ. ಅದರಲ್ಲೂ ಬುಡಕಟ್ಟು ಮಹಿಳೆಯರ ಸಬಲೀಕರಣ, ಇಂದಿನ ಸಂದರ್ಭಕ್ಕೆ ಅವಲೋಕಿಸುವುದಾದರೆ ನಿಧಾನವಾದ ಪ್ರಕ್ರಿಯೆ. ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಬುಡಕಟ್ಟು ಮಹಿಳೆಯರ ಸ್ಥಾನಮಾನದಲ್ಲಿ ಬದಲಾವಣೆಯಾಗುವುದರ ಮೂಲಕ ಸಶಕ್ತತೆ ಸಾಧ್ಯವಿದೆ ಎಂದು ಅಭಿಪ್ರಾಯ ವ್ಯಕ್ತ ಪಡಿಸಬಹುದಾಗಿದೆ.

ಬುಡಕಟ್ಟು ಮಹಿಳೆಯರ ಆರ್ಥಿಕ ಸ್ಥಿತಿ ಗತಿಯನ್ನು ಅಧ್ಯಯನದ ಮೂಲಕ ಅವಲೋಕಿಸುವುದಾದರೆ ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಬೀಡಿಯನ್ನು (58%)

ತಮ್ಮ ಕಸುಬಾಗಿಸಿಕೊಂಡಿದ್ದಾರೆ. 15% ಮಹಿಳೆಯರು ಕೂಲಿಯನ್ನು ಅವಲಂಬಿಸಿರುವುದರಿಂದ ಒಟ್ಟು 73% ಮಹಿಳೆಯರು ಅಲ್ಪ ಆದಾಯದ ಕೆಲಸದಲ್ಲಿ ತೊಡಗಿಸಿಕೊಂಡಿರುವುದರಿಂದ ಆರ್ಥಿಕ ಸ್ಥಿತಿ ಗತಿಯನ್ನು ಅಂದಾಜಿಸಬಹುದು. ಬುಡಕಟ್ಟು ಕುಟುಂಬದ ಒಟ್ಟು ವಾರ್ಷಿಕ ಆದಾಯ ರೂ 65,400 ಆಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

ನಾಲ್ಕು ಬುಡಕಟ್ಟು ಸಮುದಾಯಗಳಲ್ಲಿ ಮರಾಠಿ ನಾಯ್ಕ ಕುಟುಂಬಗಳು ಆರ್ಥಿಕವಾಗಿ ಸುಧಾರಿಸಿವೆ. ಆರ್ಥಿಕವಾಗಿ ತೀರಾ ಹಿಂದುಳಿದಿರುವುದು ಕೊರಗ ಬುಡಕಟ್ಟು ಸಮುದಾಯವೆಂದು ಅಧ್ಯಯನ ಸ್ಪಷ್ಟಪಡಿಸುತ್ತದೆ. ಶಿಕ್ಷಣಕ್ಕೂ, ಉದ್ಯೋಗಕ್ಕೂ ಸಂಬಂಧವಿರುವುದರಿಂದ 2001ರ ಅಂಕಿಅಂಶಗಳ ಪ್ರಕಾರ ಮರಾಠಿ ನಾಯ್ಕ ಸಮುದಾಯದ ಒಟ್ಟು ಸಾಕ್ಷರತೆ 73.93% ಹಾಗೆಯೇ ಕೊರಗ ಸಮುದಾಯದ ಒಟ್ಟು ಸಾಕ್ಷರತೆ 59.81% ಎಂದು ಅಂದಾಜಿಸಲಾಗಿದೆ.

ಮಹದೇವ ಸ್ವಾಮಿ ಕೆ ಅವರು 'ಬುಡಕಟ್ಟುಗಳ ಸಾಮಾಜಿಕ ಆರ್ಥಿಕ ಸ್ಥಿತಿ-ಗತಿಗಳ ಕುರಿತಾದ ತಮ್ಮ ಅಧ್ಯಯನದಲ್ಲಿ ಮೈಸೂರು ಜಿಲ್ಲೆಯ ಎಚ್.ಡಿ.ಕೋಟೆ ಪರಿಸರದ ಕಾಡುಕುರುಬ ಮತ್ತು ಜೇನುಕುರುಬ ಬುಡಕಟ್ಟುಗಳ ಆರ್ಥಿಕ ಹಿನ್ನಡೆಯನ್ನು ವಿಶ್ಲೇಷಿಸಿದ್ದಾರೆ. ಜೇನುಕುರುಬ ಮತ್ತು ಕಾಡುಕುರುಬ ಬುಡಕಟ್ಟಿನವರು ತೀರಾ ಆರ್ಥಿಕ ಸಂಕಷ್ಟಗಳಿಗೆ ಸಿಲುಕಿದ್ದು ಇವರು ಕುಲಕಸುಬಾದ ಬಿದಿರಿನಿಂದ ಬಟ್ಟೆ, ಚಾಪೆ, ತೊಟ್ಟಿಲು ಹೀಗೆ ದಿನಬಳಕೆಯ ವಸ್ತು ತಯಾರಿಸಿ ಅಲ್ಪ ಆದಾಯದಿಂದ ಕಷ್ಟ ಕಾರ್ಪಣ್ಯಗಳ ನಡುವೆ ಕುಟುಂಬ ನಡೆಸಿಕೊಂಡು ಹೋಗುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಯುಗದ ನಂತರ ಕುಲಕಸುಬಿಗೆ ಕುತ್ತು ಬಂದಿದ್ದು ,ಅನೇಕ ಜನರು ಕುಡಿತದ ವ್ಯಸನಕ್ಕೆ ಬಲಿಯಾಗಿರುವುದರಿಂದ ಕುಟುಂಬ ನಿರ್ವಹಣೆಗೆ ಸಾಕಷ್ಟು ಹಣ ನೀಡದಿರುವುದು ಕುಟುಂಬದ ಆರ್ಥಿಕ ಹಿನ್ನಡತೆಗೆ ಮತ್ತೊಂದು ಬಗೆಯ ಕಾರಣವಾಗಿದೆ. ಮಹಿಳೆಯರು ಸಹ ಕುಲಕಸುಬಿನಿಂದ ಬರುವ ಹಣವನ್ನು ಕುಟುಂಬ ನಿರ್ವಹಣೆಗೆ ತೊಡಗಿಸುತ್ತಾರೆ (2006: ಪು.ಸಂ 69 ಮತ್ತು 70)

ದಕ್ಷಿಣ ಕನ್ನಡದ ಬುಡಕಟ್ಟು ಕುಟುಂಬಗಳ ಆರ್ಥಿಕ ಪರಿಸ್ಥಿತಿಯೂ ಈ ಮೇಲಿನ ಪ್ರಸ್ತಾವನೆಗೂ ಸಾಮ್ಯತೆಗಳಿರುವುದನ್ನು ಗಮನಿಸಬಹುದಾಗಿದೆ. ಮದ್ಯಪಾನ ಮತ್ತು ತಂಬಾಕು ಸೇವನೆಯಿಂದಾಗಿ, ದುಡಿತದ ಗಳಿಕೆಯಲ್ಲಿ ಹೆಚ್ಚಿನ ಪಾಲು ಕುಟುಂಬ ನಿರ್ವಹಣೆಗೆ ಸಾಲುವುದಿಲ್ಲ ಎಂದು ತಿಳಿಯಬಹುದು.

ಕೇವಲ 20% ಮಹಿಳೆಯರು ತಮ್ಮ ಹೆಸರಲ್ಲಿ ಸ್ವಂತ ಭೂಮಿ ಹೊಂದಿರುವರೆಂದು ಅಧ್ಯಯನ ಸ್ಪಷ್ಟಪಡಿಸುತ್ತದೆ. ಇದರಲ್ಲಿ 15.33% ಮಹಿಳೆಯರು 5 ರಿಂದ 50 ಸೆಂಟ್ಸ ಭೂಮಿಯಿದ್ದು ಇದು ವಾಸಿಸುವ ಮನೆಯನ್ನು ಒಳಗೊಂಡಿದೆ.

ನೀರಿನ ಕೊರತೆ ಇರುವುದರಿಂದಲೂ, ಬೇಕಾಗುವ ಪೂರಕ ಬಂಡವಾಳದ ಕೊರತೆಯಿಂದಲೂ ಕೃಷಿ ಮಾಡಲು ಅಸಾಧ್ಯ ಎಂದು ಮಾಹಿತಿದಾರರು ಅಭಿಪ್ರಾಯ ಪಟ್ಟಿದ್ದಾರೆ. ಇದರಲ್ಲಿ 7.34% ಮಹಿಳೆಯರಿಗೆ ಭೂಮಿ ಸರಕಾರದಿಂದ ಹಾಗೂ 6.34% ಮಹಿಳೆಯರಿಗೆ ಪಿತ್ರಾರ್ಜಿತವಾಗಿ ದೊರಕಿರುತ್ತದೆ.

ಒಟ್ಟಿನಲ್ಲಿ 80%ರಷ್ಟು ಬುಡಕಟ್ಟು ಮಹಿಳೆಯರು ಸ್ವಂತ ಭೂಮಿ ಹೊಂದಿಲ್ಲದೇ ಇರುವುದನ್ನು ಅಧ್ಯಯನದಿಂದ ತಿಳಿಯಬಹುದಾಗಿದೆ. ಹಾಗೂ ಭೂಮಿಯ ಒಡೆತನ ಒಟ್ಟು ಬುಡಕಟ್ಟು ಸಮುದಾಯದಲ್ಲಿ ವಿರಳವಾಗಿರುವುದು ಹಾಗೂ ಕೇವಲ 6.34% ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಸಿಕ್ಕಿರುವುದೆಂದು ಅಧ್ಯಯನ ತಿಳಿಸುತ್ತದೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಕುಟುಂಬಗಳು ಎಂದರೆ 56% ನೀರಿಗಾಗಿ ಸ್ವಂತ ಬಾವಿಯನ್ನು ಅವಲಂಬಿಸಿದೆ. 44% ರಷ್ಟು ಕುಟುಂಬಗಳಲ್ಲಿ ಸ್ವಂತ ನೀರಿನ ಸೌಲಭ್ಯದ ಕೊರತೆಯಿರುವುದು ಅಧ್ಯಯನದಿಂದ ಕಂಡುಬಂದಿದೆ. 21%ರಷ್ಟು ಬುಡಕಟ್ಟು ಕುಟುಂಬಗಳು ಕೃಷಿಕ ಕುಟುಂಬಗಳು ಎಂದು ಅಧ್ಯಯನದ ಮೂಲಕ ದೃಢಪಟ್ಟಿದೆ. ಹೆಚ್ಚಾಗಿ ಈ ಕುಟುಂಬಗಳಲ್ಲಿ ತೆಂಗು, ಅಡಿಕೆ, ಮಲ್ಲಿಗೆ, ಭತ್ತ, ತರಕಾರಿಗಳನ್ನು ಮುಖ್ಯವಾಗಿ ಬೆಳೆಯುತ್ತಾರೆ. ಭತ್ತದ ಕೃಷಿ 3.34%ರಷ್ಟಿದ್ದು ಬಹಳ ಕಡಿಮೆ ಎಂದು ಅಧ್ಯಯನ ಸಾಬೀತುಪಡಿಸಿದೆ.

ಒಟ್ಟಿನಲ್ಲಿ ನೀರಿನ ಕೊರತೆ ಇರುವುದರಿಂದ ಬೇಕಾಗುವ ಪೂರಕ ಬಂಡವಾಳದ ಕೊರತೆಯಿಂದಲೂ ಕೃಷಿ ಮಾಡಲು ಅಸಾಧ್ಯ ಎಂಬುದು ಮಾಹಿತಿದಾರರ ಅಭಿಪ್ರಾಯವಾಗಿದೆ.

ಭತ್ತದ ಕೃಷಿಯಲ್ಲಿ ತೊಡಗಿಕೊಂಡಿರುವವರಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಕುಡುಬಿಯರು ಕಂಡುಬರುತ್ತಾರೆ. ಈ ಅಂಶವನ್ನು ಎ.ವಿ.ನಾವಡ ಅವರು ಕುಡುಬಿಯರ ಕುರಿತಾದ ತನ್ನ ಅಧ್ಯಯನದಲ್ಲಿ "ಭತ್ತದ ಕೃಷಿಯಲ್ಲಿ ತೊಡಗಿಕೊಂಡಿರುವವರಲ್ಲಿ ಹೆಚ್ಚಿನವರು ಕುಡುಬಿಯರು" ಎನ್ನುವುದನ್ನು ಒಪ್ಪಿಕೊಳ್ಳಬಹುದಾಗಿದೆ. ಹಾಗೆಯೇ ಅಧ್ಯಯನದ ಆಧಾರದಲ್ಲಿ

ಸ್ಪಷ್ಟಪಡಿಸುವುದಾದರೆ ಯಾವುದೇ ಕೊರಗ ಕುಟುಂಬಗಳು ಭತ್ತದ ಕೃಷಿಯನ್ನು ಅವಲಂಬಿಸಿಲ್ಲದೇ ಇರುವುದು ಕಂಡುಬರುತ್ತದೆ.

ಎ. ಎಸ್. ಪ್ರಭಾಕರ ಅವರು 'ರಾಷ್ಟ್ರೀಯ ಆದಿವಾಸಿ ನೀತಿಯ' ಕುರಿತಾದ ತನ್ನ ಅಧ್ಯಯನದಲ್ಲಿ ಹೀಗೆ ಪ್ರತಿಕ್ರಯಿಸಿದ್ದಾರೆ. "ಎನ್.ಡಿ.ಎ ಸರಕಾರದಿಂದ ರೂಪಿಸಲ್ಪಟ್ಟು ಈಗ ಕಾರ್ಯರೂಪಕ್ಕೆ ಬಂದಿರುವ ರಾಷ್ಟ್ರೀಯ ಆದಿವಾಸಿ ನೀತಿಗೆ ಮಹತ್ತರ ಒಳನೋಟಗಳಿರದೇ ಇರುವುದು ಮೇಲು ನೋಟಕ್ಕೇನೇ ಗೊತ್ತಾಗುತ್ತದೆ. ಈ ನೀತಿಯು ಅನೇಕ ವಿರೋಧಾಭಾಸಗಳನ್ನು ಧಾರಾಳವಾಗಿ ಪ್ರಕಟಿಸುತ್ತದೆ. ಭೂಮಿಯ ಒಡೆತನ ಮತ್ತು ಆದಿವಾಸಿಗಳ ಬೇಸಾಯ ಪದ್ಧತಿಯ ಕುರಿತು ರಾಷ್ಟ್ರೀಯ ನೀತಿಯಲ್ಲಿ ಅತ್ಯಂತ ಅಸ್ಪಷ್ಟ ನಿಲುವುಗಳು ಗೋಚರಿಸುತ್ತವೆ. ಈಗಾಗಲೇ ತಮ್ಮ ಜಮೀನುಗಳನ್ನು ಅರಣ್ಯ ಇಲಾಖೆಗೆ ಮತ್ತು ಸ್ಥಳೀಯ ಭೂಮಾಲಿಕ ವರ್ಗದವರಿಗೆ ಬಿಟ್ಟುಕೊಟ್ಟಿರುವ ಆದಿವಾಸಿಗಳಿಗೆ ಕೃಷಿ ಭೂಮಿ ಇನ್ನೆಲ್ಲಿಂದ ಬರಬೇಕು.? ಈಗ ಹೊಸದಾಗಿ ಅರಣ್ಯದಲ್ಲಿ ಕೃಷಿ ಭೂಮಿಯನ್ನು ಆದಿವಾಸಿಗಳಿಗೆ ನೀಡಲು ಹೋದರೆ ಅಲ್ಲಿ ಅರಣ್ಯಕ್ಕೆ ಸಂಬಂಧಿಸಿದ ಕಾನೂನುಗಳೇ ಅಡ್ಡಿ ಬರುತ್ತವೆ. ತಮ್ಮ ಭೂ ಒಡೆತನದ ಕುರಿತು ಆದಿವಾಸಿಗಳ ಮೌಖಿಕ ದಾಖಲೆಗಳನ್ನೇ ಅಧಿಕೃತ ಗೊಳಿಸುವ ರಾಷ್ಟ್ರೀಯ ನೀತಿಯಲ್ಲಿನ ಒಂದು ಅಂಶ ಧನಾತ್ಮಕವಾಗಿದ್ದರೂ ಸಹ, ಈಗಿನ ಸಂದರ್ಭದಲ್ಲಿ ಯಾವ ಆದಿವಾಸಿ ಸಮುದಾಯಗಳು ಸಹ ತಮ್ಮ ಪಾರಂಪರಿಕ ನೆಲೆಯಲ್ಲಿ ವಾಸ ಮಾಡುತ್ತಿಲ್ಲ ಮತ್ತು ಅವರ ಕೃಷಿ ಜಮೀನು ಭೂಮಾಲಿಕರ ಟೀ ಇಲ್ಲವೇ, ಕಾಫಿ ತೋಟಗಳಾಗಿ ಪರಿವರ್ತಿತವಾಗಿವೆ".

"ಇಂತಹ ಸಂದರ್ಭಗಳಲ್ಲಿ ಅವರಲ್ಲಿ ಎಂತಹ ಮೌಖಿಕ ದಾಖಲೆಗಳಿದ್ದರೂ, ಎಸ್ಟೇಟ್ ಮಾಲಿಕರು ಮತ್ತು ಭೂಮಾಲೀಕರು ಅತ್ಯಂತ ಸುಲಭವಾಗಿ ಕಾನೂನಿನ ರಕ್ಷಣೆ ಪಡೆಯುತ್ತಾರೆ. ಆಧುನಿಕ ಕೃಷಿಯನ್ನು ಜಾರಿಗೊಳಿಸಿ ಆದಿವಾಸಿಗಳ ಬೇಸಾಯ ಕ್ರಮವನ್ನು ಉತ್ತಮ ಪಡಿಸಬೇಕೆಂಬುದು ಪ್ರಗತಿಪರವಾದ ನಿಲುವಾದರೂ ಸಹ, ಭೂರಹಿತ ಆದಿವಾಸಿಗಳೇ ಹೆಚ್ಚಾಗಿರುವ ಈ ದೇಶದಲ್ಲಿ ಪ್ರಸ್ತುತ ಕಾರ್ಯಕ್ರಮದಿಂದ ಬೆರಳೆಣಿಕೆಯಷ್ಟು ಆದಿವಾಸಿಗಳಿಗೆ ಉಪಯೋಗ ಪಡೆಯಬಹುದಷ್ಟೇ. ಜೊತೆಗೆ ಆದಿವಾಸಿಗಳು ಹೊಂದಿರುವ ಭಾವನಾತ್ಮಕ ಆಸ್ತಿಯ ಹಕ್ಕುಗಳನ್ನು ರಕ್ಷಿಸಲಾಗುತ್ತದೆ ಎಂದು ರಾಷ್ಟ್ರೀಯ ನೀತಿ ಹೇಳುತ್ತಿದ್ದರೂ ಸಹ ವಾಸ್ತವದಲ್ಲಿ ಅದು ಎಷ್ಟರ ಮಟ್ಟಿಗೆ ಸಾಧ್ಯ ಎಂಬುದನ್ನು ಯೋಚಿಸಬೇಕಾಗುತ್ತದೆ". (2005: ಪು.ಸಂ 149 ಮತ್ತು 150). ಎನ್ನುವ ಅಭಿಪ್ರಾಯದಲ್ಲಿ ಪ್ರಸ್ತುತ ದಕ್ಷಿಣ ಕನ್ನಡ ಬುಡಕಟ್ಟು

ಕುಟುಂಬಗಳ ಆರ್ಥಿಕ ಪರಿಸ್ಥಿತಿಗೂ ಈ ಮೇಲಿನ ಉಲ್ಲೇಖಕ್ಕೂ ಸಾಮ್ಯತೆಯಿರುವ ಅಂಶವನ್ನು ಗಮನಿಸಬಹುದಾಗಿದೆ.

ಕೇವಲ 8.57% ಮಹಿಳೆಯರು ಮಾತ್ರ ತಮ್ಮ ಬೀಡಿ ಕಸುಬಿನೊಂದಿಗೆ ಬುಟ್ಟಿ ತಯಾರಿಕೆ, ಮಲ್ಲಿಗೆ ಕೃಷಿ, ಹೈನುಗಾರಿಕೆ ಹಾಗೂ ವ್ಯಾಪಾರಗಳಂತಹ ಸ್ವ ಉದ್ಯೋಗದಲ್ಲಿ ನಿರ್ಧಾರ ತೆಗದುಕೊಳ್ಳುತ್ತಿದ್ದಾರೆ. ಸಮಾನತೆಯ ಅಂಶದೊಂದಿಗೆ 4.00% ಬುಡಕಟ್ಟು ಕುಟುಂಬಗಳಲ್ಲಿ ಪತಿಯಂದಿರ ಪ್ರಧಾನ ಮೌಲ್ಯದ ಅಡಿಪಾಯವೂ ಇದೆ ಎನ್ನುವುದು ಸ್ಪಷ್ಟವಾಗುತ್ತದೆ.

ಸರಕಾರವು ಕೊಡಮಾಡಲ್ಪಟ್ಟ ಸ್ವ ಉದ್ಯೋಗದ ಕುರಿತು, ವಿಶೇಷವಾಗಿ ಕೊರಗ ಸಮುದಾಯವನ್ನು ದೃಷ್ಟಿಯಲ್ಲಿರಿಸಿಕೊಂಡು **ಕೊರಗರ ವರ್ತಮಾನದ ಸ್ಥಿತಿ**- ಗತಿಗಳ ಕುರಿತಾದ ತನ್ನ ಅಧ್ಯಯನದಲ್ಲಿ, ಮತ್ತಾಡಿ ಕೊರಗ ಅವರು ಈ ರೀತಿ ಪ್ರತಿಕ್ರಯಿಸಿದ್ದಾರೆ. "ಸಾಂಪ್ರದಾಯಿಕ ಮೌಲ್ಯಗಳನ್ನು ಹೊಂದಿ ಅನ್ಯೋನ್ಯವಾಗಿದ್ದ ಜನರನ್ನು ವಿವಿಧ ರೀತಿಯ ಅತಂತ್ರ ಸ್ಥಿತಿಗೆ ನೂಕಿ ಏಕಕಾಲದಲ್ಲಿ ಅವರಲ್ಲಿ ಬದಲಾವಣೆ ತರಲು ಸಾಧ್ಯವಿಲ್ಲ. ಸ್ವಯಂ ಉದ್ಯೋಗಕ್ಕೆ ಏಕಕಾಲದಲ್ಲಿ ಮೂರು ಕೋಟಿ ಖರ್ಚು ಮಾಡಿದ ಎಸ್.ಸಿ, ಎಸ್.ಟಿ ನಿಗಮದ ಕಾರ್ಯ ವೈಖರಿಯನ್ನು ವಿಶ್ಲೇಷಿಸಿದಾಗ ಪ್ರಭುತ್ವದ ಕೊರತೆ ಪ್ರತಿಬಿಂಬಿಸುತ್ತದೆ. ಕಂಪ್ಯೂಟರ್ ತರಬೇತಿ, ಆಟೋರಿಕ್ಷಾ ಇನ್ನಿತರ ಸ್ವಯಂ ಉದ್ಯೋಗದ ಯೋಜನೆಗಳು ಸ್ಪಷ್ಟ ರಹಿತ ಸ್ಥಿತಿಯಲ್ಲಿರುವುದು ಖಚಿತವಾಗುತ್ತದೆ". (2012: ಪು.ಸಂ 76) ಎನ್ನುವ ಅಭಿಪ್ರಾಯದಲ್ಲಿ ಸ್ವಯಂ ಉದ್ಯೋಗದ ಯೋಜನೆಗಳು ಬುಡಕಟ್ಟು ಸಮುದಾಯಕ್ಕೆ ಪರಿಣಾಮಕಾರಿಯಾಗಿ ತಲುಪಿಲ್ಲದಿರುವ ಕೊರತೆಯನ್ನು ಕಾಣಬಹುದಾಗಿದೆ.

ಬುಡಕಟ್ಟು ಮಹಿಳೆಯರಲ್ಲಿ ಹೆಚ್ಚಿನ ಆದಾಯ ಗಳಿಸುವಲ್ಲಿ ಅವರ ಯೋಚನೆಗಳನ್ನು ಕುರಿತು ಪ್ರಸ್ತಾಪಿಸಿದಾಗ ಕೇವಲ 6.67% ಮಹಿಳೆಯರು ಮಾತ್ರ ಮುಂದಿನ ಉದ್ಯೋಗದ ಕುರಿತು ಯೋಚನೆಗಳಲ್ಲಿ ಸ್ಪಷ್ಟತೆ ಇರುವುದು ಅಧ್ಯಯನದಿಂದ ಗಮನಿಸಬಹುದಾಗಿದೆ.

ಕೆ.ಕೇಶವನ್ ಪ್ರಸಾದ್ ಅವರು 'ಸೋಲಿಗರ ಪರಿಸರ ಪ್ರಜ್ಞೆಯ' ಕುರಿತಾದ ತನ್ನ ಅಧ್ಯಯನದಲ್ಲಿ "ಬುಡಕಟ್ಟು ಜನರು ಅವರವರ ಜೀವನಕ್ಕೆ ಬೇಕಾದುದನ್ನು ಪಡೆದುಕೊಂಡು ಒಂದು ಅಂತರದಲ್ಲಿ ಬದುಕನ್ನು ಸಾಗಿಸುವುದು ಹಾಗೂ ಬುಡಕಟ್ಟು ಜನರದ್ದು

ಸಮತೂಕದ ಬದುಕು ಎಂದಿರುವುದನ್ನು ಇಲ್ಲಿ ಒಪ್ಪಬಹುದಾಗಿದೆ. ಬುಡಕಟ್ಟು ಜನರಿಗೆ ಮುಂದಿನ ಭವಿಷ್ಯದ ಕುರಿತು, ಮುಖ್ಯವಾಹಿನಿಯ ಜನರಂತೆ ಮಹತ್ತರವಾದ ಆಶೋತ್ತರಗಳಿಲ್ಲ ಮತ್ತು ಅದಕ್ಕಾಗಿ ಅವರು ಪ್ರಯತ್ನಿಸುವುದಿಲ್ಲ" (2008: ಪು.ಸಂ 245) ಎಂಬ ಅಭಿಪ್ರಾಯವನ್ನು ಇಲ್ಲಿ ಒಪ್ಪಬಹುದಾಗಿದೆ.

ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರಿಗೆ ತಮ್ಮ ಮನೆಗೆ ಬೇಕಾಗುವ ವಸ್ತುಗಳನ್ನು ಖರೀದಿಸುವ ಸ್ವಾತಂತ್ರ್ಯವಿದ್ದು, ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರು ತಮಗೆ ಮನೆಯ ವಸ್ತುಗಳನ್ನು ಮಾರುವ ಅಧಿಕಾರವಿಲ್ಲ ಎಂದು ಪ್ರತಿಕ್ರಯಿಸಿದ್ದಾರೆ.

ಇಲ್ಲಿ ಮನೆಯ ವಸ್ತುಗಳನ್ನು ಮಾರುವಲ್ಲಿ ಪತಿಯಂದಿರ ಅನುಮತಿಯ ಅಗತ್ಯಕ್ಕಿಂತ ಅವರ ಅಭಿಪ್ರಾಯಕ್ಕೆ ಮನ್ನಣೆಬೇಕು ಎನ್ನುವ ಅಭಿಪ್ರಾಯ ಬುಡಕಟ್ಟು ಮಹಿಳೆಯರ ಮುಖಭಾವದಲ್ಲಿ ವ್ಯಕ್ತವಾಗಿರುವುದು ಬುಡಕಟ್ಟು ಕುಟುಂಬಗಳಲ್ಲಿ ಸಾಮರಸ್ಯದ ಅಂಶವನ್ನು ದೃಢೀಕರಿಸುತ್ತದೆ.

ಬುಡಕಟ್ಟು ಮಹಿಳೆಯರ ಆರ್ಥಿಕ ಸಬಲೀಕರಣದ ಮಾನದಂಡವಾಗಿ ಸ್ವಂತದ ಉಪಯೋಗಕ್ಕಾಗಿ ಅವರಲ್ಲಿರುವ ಒಟ್ಟು ಚಿನ್ನದ ಒಡವೆಗಳನ್ನು ಗ್ರಾಂಗಳಲ್ಲಿ ಅಂದಾಜಿನ ಮೂಲಕ ಮಾಹಿತಿ ಸಂಗ್ರಹಿಸಿದ್ದು 31% ಮಹಿಳೆಯರು ನಾಲ್ಕರಿಂದ ಎಂಟು ಗ್ರಾಂನಷ್ಟು ಚಿನ್ನದ ಒಡವೆಗಳಿರುವುದನ್ನು ಸ್ಪಷ್ಟಪಡಿಸಿರುತ್ತಾರೆ. ನಾಲ್ಕು ಬುಡಕಟ್ಟು ಮಹಿಳೆಯರಲ್ಲಿ ಈ ಕುರಿತಾದ ತುಲನಾತ್ಮಕ ಅಧ್ಯಯನದಲ್ಲಿ ಕೊರಗ ಮಹಿಳೆಯರಲ್ಲಿ ಅಲ್ಪ ಪ್ರಮಾಣದಲ್ಲಿ ಚಿನ್ನದ ಒಡವೆಯಿರುವುದು ಕಂಡುಬಂದಿದೆ.

ಹಿಂದೆ ಕೊರಗ ಮಹಿಳೆಯರು ಪಂಚೆಯನ್ನು ('ಮುಂಡು') ಸೊಂಟಕ್ಕೆ ಕಟ್ಟಿ ರವಿಕೆಯನ್ನು ತೊಡುತ್ತಿದ್ದರೂ, ಸೆರಗು ಹಾಕುತ್ತಿರಲಿಲ್ಲ. ಇಂದಿಗೂ ಹಳ್ಳಿ ಪ್ರದೇಶದ ವಯಸ್ಸಾದ ಮಹಿಳೆಯರು ಅದೇ ಹಳೆಯ ಪದ್ಧತಿ ಅನುಸರಿಸುತ್ತಿದ್ದಾರೆ. ಆದರೆ ಪೇಟೆ, ಪಟ್ಟಣಗಳ ಸಂಪರ್ಕದಲ್ಲಿರುವ ಕೊರಗ ಹೆಂಗಸರು ಇತರೇ ಹಿಂದು ಮಹಿಳೆಯರಂತೆ ಸೀರೆ ಉಡುತ್ತಾರೆ.

ನಿರಾಭರಣ ಸುಂದರರಾದ ಕೊರಗರು ವಿವಿಧ ಬಣ್ಣ ಬಣ್ಣಗಳ ಮಣಿಸರ ಪ್ರಿಯರು, ಕೈಗೆ ಹಿತ್ತಾಳೆ, ಕಬ್ಬಿಣ, ತಾಮ್ರದಿಂದ ಮಾಡಿದ ಬಳೆಗಳನ್ನು ತೊಡುತ್ತಿದ್ದರು. ಇಂದಿನ ಕೊರಗ ಮಹಿಳೆಯರು ಎಲ್ಲರಂತೆ ಗಾಜಿನ ಬಳೆ, ಕರಿಮಣಿ ಸರ ಧರಿಸುತ್ತಾರೆ. (ಕೊರಗ

ಜನಾಂಗ ವಿಶ್ಲೇಣಾತ್ಮಕ ಅಧ್ಯಯನ ಅರವಿಂದ ಮಾಲಗತ್ತಿ, ಒಡೆಯರಡಿ ಹೆಗ್ಗಡೆ ಪು.ಸಂ 16 ಇಸವಿ ಲಭ್ಯವಿಲ್ಲ)

ಸವಿತಾ ನಾಯಿಕ ಅವರು ಬುಡಕಟ್ಟು ಮಹಿಳೆಯರ ಪ್ರಸಾದನ ಕಲೆಯ ಕುರಿತಾದ ತಮ್ಮ ಅಧ್ಯಯನದಲ್ಲಿ ಉತ್ತರ ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ವಿಶಿಷ್ಟ ಸಂಸ್ಕೃತಿಯೊಂದಿಗೆ ಬಾಳುತ್ತಿರುವ ಒಕ್ಕಲು ಬುಡಕಟ್ಟು ಮಹಿಳೆಯರ ಪ್ರಸಾದನ ಕಲೆಯನ್ನು ಕುರಿತು ವಿಶ್ಲೇಷಿಸಿದ್ದಾರೆ. ಕಾಡಿನ ನಡುವೆ ತಮ್ಮ ಬದುಕಿನ ಬಹುಕಾಲವನ್ನು ಕಳೆಯುವ ಬುಡಕಟ್ಟು ಮಹಿಳೆಯರು ತಮ್ಮ ಪರಿಸರದ ಸುತ್ತಮುತ್ತಲಿನ ವನಸ್ಪತಿ ಜನ್ಯ ಹಾಗೂ ಪ್ರಾಣಿಜನ್ಯ ಪ್ರಸಾಧನ ಸಾಮಾಗ್ರಿಗಳನ್ನು ಬಳಸುವಾಗ ಅವುಗಳಲ್ಲಿಯ ಔಷಧೀಯ ಗುಣಗಳನ್ನು ಪರಿಗಣಿಸಿರುವುದು ಕಂಡುಬರುತ್ತದೆ.

ಬುಡಕಟ್ಟು ಮಹಿಳೆಯರು ತೊಡುವ ತೊಡುಗೆಗಳಲ್ಲಿ ಮತ್ತು ಆಭರಣ ಕಲೆಯಲ್ಲಿ ಪ್ರಾಚೀನ ಮಾನವನ ತೊಡುಗೆಯ ಆಸಕ್ತಿಯನ್ನು ಕಾಣಬಹುದಾಗಿದೆ. ಒಕ್ಕಲು ಬುಡಕಟ್ಟು ಮಹಿಳೆಯರು ವಾಲೆ, ಕುಡುಕು(ಕೆಂಪು ಬಿಳಿ ಬಣ್ಣದ ಸಾಮಾನ್ಯ ಹರಳುಗಳನ್ನು ಚಿನ್ನದಲ್ಲಿ ಕಟ್ಟಿಸಿಕೊಂಡಿರುವಂತಹ ಕಿವಿಯ ಒಡವೆ) ಮೂಗಿನ ತೊಡುಗೆ, ಕೊರಳ ಸರಗಳು, ಕರಿಮಣಿ ಸರಗಳು, ಬಣ್ಣದ ಮಣಿಸರ, ಬೀಜದ ಮಣಿಸರಗಳು, ನಿಸರ್ಗದಲ್ಲಿ ಕಂಡುಬರುವ ಕಾಕಿ ಬೀಜ, ಕೆಂಪು ಬಣ್ಣದ ಗುರಗುಂಜಿ, ಕಾಕಿ ಮಣಿಸರ, ಗುರಗಂಜಿ ಸರಗಳಾಗಿ ಇವರ ಕೊರಳನ್ನಲಂಕರಿಸಿವೆ. ದುಡ್ಡಿನ ಸರಗಳು (ಒಕ್ಕಲು ಬುಡಕಟ್ಟು ಮಹಿಳೆಯರು ಆಂಗ್ಲರ ಕಾಲದಲ್ಲಿ ಭಾರತದಲ್ಲಿ ಬಳಕೆಯಲ್ಲಿದ್ದ ರೂಪಾಯಿ ಎಂಟಾಣೆ ಮತ್ತು ನಾಲ್ಕಾಣೆ ಬಿಲ್ಲೆಗಳನ್ನು ತೂಟ್ಟು ಕಟ್ಟಿಸಿ ಸರಮಾಡಿ ಧರಿಸುತ್ತಾರೆ. ಇವಕ್ಕೆ ಪಾವ್ಲಿಸರ, ಚವಲಿಸರ, ತಾಳಿಸರ ಎಂದು ಹೆಸರಿದೆ.) ಇವರಲ್ಲಿ ಸಾಮಾನ್ಯ ಆಭರಣಗಳಾಗಿವೆ.

ಸೊಂಟದ ತೊಡುಗೆಗಳಾದ ಗೆಜ್ಜೆ, ಸೊಂಟ ಪಟ್ಟಿ, ಉಡುದಾರ, ತೋಳ್ಬಳೆ ಇತ್ಯಾದಿಗಳು ಮುಖ್ಯವಾಗಿವೆ. ಇಲ್ಲಿನ ಬುಡಕಟ್ಟು ಮಹಿಳೆಯರಿಗೆ ಗಾಜಿನ ಬಳೆಗಳೆಂದರೆ ಬಹಳ ಅಚ್ಚು ಮೆಚ್ಚಾಗಿದ್ದು ಇವನ್ನು ಮಣ್ಣಿನ ಬಳೆ ಅಥವಾ ಕಲ್ ಬಳೆ ಎಂದು ಕರೆಯುತ್ತಾರೆ. ಹಾಲಕ್ಕಿ ಒಕ್ಕಲತಿಯರು ಹೆಣ್ಣಿನ ನಿಶ್ಚಯಕ್ಕೆ ಬರುವಾಗ ಒಂದು ತೆಂಗಿನಕಾಯಿ ಮತ್ತು ನಾಲ್ಕು ಕಪ್ಪು ಗಾಜಿನ ಬಳೆಗಳನ್ನು ತರುವ ಸಂಪ್ರದಾಯವಿದ್ದು, ಕರಿಬಳೆಗಳು ನಿಶ್ಚಯದ ಬಳೆಗಳಾಗಿ ಮುಖ್ಯ ಪಾತ್ರ ವಹಿಸುತ್ತಿದ್ದವು. ಎಂದು ಅಧ್ಯಯನಕಾರರು ಅಭಿಪ್ರಾಯ ಪಟ್ಟಿದ್ದಾರೆ.

ಕೈ ಬೆರಳಿನ ತೊಡುಗೆಗಳ ಬಗ್ಗೆಯೂ ಪ್ರಸ್ತಾಪಿಸುತ್ತ ಅಧ್ಯಯನಕಾರರು ಕಂಚು, ತಾಮ್ರ ಮತ್ತು ಹಿತ್ತಾಳೆಯ ಕಾಲುಂಗುರದ ಬಗ್ಗೆ ಬುಡಕಟ್ಟು ಮಹಿಳೆಯರು ಲೇಪನವಾಗಿ ಬಳಸುವ ಕಾಡಿಗೆ, ತೆಂಗಿನೆಣ್ಣೆ, ಹೊನ್ನೆಣ್ಣೆ, ಚಿಗುರೆಣ್ಣೆಗಳು ಶಾಂಪೂವಿನಂತೆ ಬಳಸುವ ದಾಸವಾಳ ಎಲೆ, ಅಂಟುವಾಳಕಾಯಿ, ಸೀಗೆಕಾಯಿಯ ಬಗ್ಗೆ ಹೆಚ್ಚಿನ ಪ್ರಚಾರ ಹಾಗೂ ಉಪಯೋಗವು ಸಾಧ್ಯವಾಗುವುದಾದರೆ ಜನತೆಯ ಆರೋಗ್ಯದ ಜೊತೆಗೆ ಹಣವೂ ಉಳಿತಾಯವಾದೀತು. ಇಂಥ ಅಪೂರ್ವ ಕಲೆಯನ್ನು ಆಧುನಿಕ ರೀತಿಯಲ್ಲಿ ವಿಡಿಯೋ, ಆಡಿಯೋ ಮುಂತಾದ ತಾಂತ್ರಿಕ ಸಾಧನಗಳನ್ನು ಬಳಸಿ ಉಳಿಸಿಕೊಳ್ಳಬೇಕು. ಹಾಗೂ ಬುಡಕಟ್ಟು ಪ್ರಸಾದನ ಕಲೆಯ ಮೌಲ್ಯಗಳನ್ನು ಪ್ರಚಾರ ಮಾಡುವುದು ಅಗತ್ಯವಿದೆ. ಎಂದು ಪ್ರತಿಕ್ರಯಿಸಿದ್ದಾರೆ. (2000: ಪು.ಸಂ 22 ರಿಂದ 32)

ಕಾಡಿನೊಳಗೆ ಜೀವಿಸುತ್ತಿದ್ದ ಬುಡಕಟ್ಟು ಸಮುದಾಯದ ಮಹಿಳೆಯರು ಹಿಂದೆ ತಮ್ಮ ಭೌಗೋಳಿಕ ಪರಿಸರಕ್ಕೆ ಅನುಗುಣವಾಗುವಂತೆ ಅಲ್ಲಿ ದೊರಕುತ್ತಿದ್ದ ವಿವಿಧ ವಸ್ತುಗಳಿಂದ ತೊಡುಗೆಗಳನ್ನು ಧರಿಸಿಕೊಳ್ಳುತ್ತಿದ್ದರೂ ಈಗ ಆಧುನಿಕ ಕಾಲಕ್ಕೆ ಅನುಗುಣವಾಗುವಂತೆ ಮುಖ್ಯವಾಹಿನಿಯ ಮಹಿಳೆಯರಂತೆಯೇ ತಮ್ಮ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಚಿನ್ನದ ಒಡವೆಯೊಂದಿಗೆ ಇತರ ಒಡವೆಗಳನ್ನು ತೊಟ್ಟುಕೊಳ್ಳುವುದು ಅಧ್ಯಯನದಿಂದ ಸ್ಪಷ್ಟವಾಗಿದೆ. ಆರ್ಥಿಕವಾಗಿ ಹಿಂದುಳಿದ ಕೊರಗ ಸಮುದಾಯದಲ್ಲಿ ಹೆಚ್ಚಿನ ಮಹಿಳೆಯರಲ್ಲಿ ಚಿನ್ನದ ಒಡವೆಗಳು ಇಲ್ಲ ಎಂದು ಗಮನಿಸಬಹುದಾಗಿದೆ.

ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು 75% ಸ್ವ ಸಹಾಯ ಸಂಘಗಳಲ್ಲಿ ಸದಸ್ಯತ್ವ ಹೊಂದಿದ್ದು ಇದರಲ್ಲಿ 54.34% ಮಹಿಳೆಯರು ಸ್ವ ಸಹಾಯ ಗುಂಪುಗಳ ಆರ್ಥಿಕ ಚಟುವಟಿಕೆಗಳ ಚರ್ಚೆಗಳಲ್ಲಿ ಸಲಹೆ ನೀಡುವುದು ಅಧ್ಯಯನದಿಂದ ಸ್ಪಷ್ಟವಾಗಿದೆ. ಇದರಲ್ಲಿ ಅತ್ಯಂತ ಹೆಚ್ಚಿನವರು ಮರಾಠಿ ನಾಯ್ಕ ಗುಂಪಿಗೆ ಸೇರಿದವರಾಗಿದ್ದಾರೆ. ಹಾಗೂ 58.66% ಮಹಿಳೆಯರು ಸಾಲವನ್ನು ಪಡಕೊಂಡಿದ್ದು, ಇದರಲ್ಲಿ 49% ಮಹಿಳೆಯರು ಸ್ವಸಹಾಯ ಸಂಘಗಳ ಮೂಲದಿಂದ ಸಾಲವನ್ನು ಪಡೆದಿದ್ದಾರೆ. ಹೆಚ್ಚಾಗಿ ಅನುತ್ಪಾದಕ ಉದ್ದೇಶಗಳಿಗೆ ಬುಡಕಟ್ಟು ಮಹಿಳೆಯರು ಸಾಲ ಪಡಕೊಳ್ಳುತ್ತಿರುವುದು ಸ್ಪಷ್ಟವಾಗಿದೆ.

ಒಟ್ಟು 85.33% ಮಹಿಳೆಯರು ವಿವಿಧ ಆರ್ಥಿಕ ಸಂಸ್ಥೆಗಳಲ್ಲಿ ಉಳಿತಾಯ ಮಾಡುವ ಹವ್ಯಾಸವನ್ನು ಪ್ರಾರಂಭಿಸಿದ್ದು 67.67% ದಷ್ಟು ಮಹಿಳೆಯರು ತಮ್ಮ ಉಳಿತಾಯದ ಹಣ ಸ್ವಸಹಾಯ ಸಂಘಗಳಲ್ಲಿ ಇರುವುದೆಂದು ಪ್ರತಿಕ್ರಯಿಸಿದ್ದಾರೆ. ಒಟ್ಟು 85.33%

ಮಹಿಳೆಯರಲ್ಲಿ 72.34% ಮಹಿಳೆಯರು ತಮ್ಮ ಉಳಿತಾಯದ ಬಗ್ಗೆ ತಾವೇ ನಿರ್ಧಾರಗಳನ್ನು ತೆಗೆದುಕೊಳ್ಳುವುದೆಂದು ಅಭಿಪ್ರಾಯ ಪಟ್ಟಿರುವುದು ಅಧ್ಯಯನದಿಂದ ಸ್ಪಷ್ಟವಾಗಿದೆ. ಆದರೆ ಉಳಿತಾಯದಲ್ಲಿ ಹೆಚ್ಚಿನ ಪಾಲು ಮನೆಯ ನಿರ್ವಹಣೆಗೆ ಸೇರುವುದರಿಂದ ವೈಯಕ್ತಿಕ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಆರ್ಥಿಕ ಪರಿಸ್ಥಿತಿ ತಡೆಯುಂಟುಮಾಡಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಬುಡಕಟ್ಟು ಮಹಿಳೆಯರ ದುಡಿಮೆಯ ಗಳಿಕೆಯಲ್ಲಿಯೂ ಹೆಚ್ಚಿನ ಪಾಲು ಮನೆ ನಿರ್ವಹಣೆಗೆ ಸೇರುತ್ತದೆ ಎಂದು 70% ಮಹಿಳೆಯರು ಪ್ರತಿಕ್ರಯಿಸಿರುವುದು ಕೌಟುಂಬಿಕ ಜೀವನದ ಆರ್ಥಿಕ ನಿರ್ವಹಣೆಯಲ್ಲಿ ಬುಡಕಟ್ಟು ಮಹಿಳೆಯ ಪಾತ್ರದ ಮಹತ್ವವನ್ನು ಅಧ್ಯಯನದ ಮೂಲಕ ಅರ್ಥ ಮಾಡಿಕೊಳ್ಳಬಹುದಾಗಿದೆ. ಆರ್ಥಿಕ ಮುಗ್ಗಟ್ಟು ಉಂಟಾದಾಗ ಹೆಚ್ಚಿನ ಮಹಿಳೆಯರು (65%) ತಮ್ಮ ಪತಿಯಂದಿರಲ್ಲಿ ಈ ಕುರಿತಾಗಿ ಚರ್ಚಿಸುತ್ತೇವೆ ಎನ್ನುವುದು ಬುಡಕಟ್ಟು ಕುಟುಂಬಗಳಲ್ಲಿ ದಂಪತಿಗಳಲ್ಲಿ ಆರ್ಥಿಕ ಸ್ಥಿತಿಗೆ ಸಂಬಂಧಿತ ಮಾತುಕತೆಗಳು ನಡೆಯುತ್ತವೆ ಎನ್ನುವುದಕ್ಕೆ ನಿದರ್ಶನವಾಗಿದೆ.

ಸಿ. ಪಾರ್ವತಮ್ಮ ಅವರು ಆದಿವಾಸಿ ಸಮುದಾಯಗಳ ಅಭಿವೃದ್ಧಿಯ ಕುರಿತಾದ ತಮ್ಮ ಅಧ್ಯಯನದಲ್ಲಿ ಕರ್ನಾಟಕ ರಾಜ್ಯದ ಮೈಸೂರು ಜಿಲ್ಲೆಯ ಬುಡಕಟ್ಟು ಜನರೊಂದಿಗೆ ಕೆಲಸ ಮಾಡುವ ಮೂರು ಸ್ವಯಂ ಸೇವಾ ಸಂಸ್ಥೆಗಳಾದ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಡೀಡ್ಸ್ ಸಂಸ್ಥೆ ಮತ್ತು ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್ ಎನ್ನುವ ಸೇವಾ ಸಂಸ್ಥೆಗಳ ಕೆಲಸದ ಮೌಲ್ಯಮಾಪನದ ಕುರಿತಾದ ಅಧ್ಯಯನದಲ್ಲಿ ಬುಡಕಟ್ಟು ಜನರು ತಮ್ಮ ಅಭಿವೃದ್ಧಿ ಸಂಘಗಳನ್ನು ರಚಿಸಿರುವುದು ಸಂಘಟನೆ ಪ್ರಧಾನವಾದ ಸಾಧನೆಗಳಲ್ಲೊಂದು ಎಂದು ಹೇಳಬೇಕು. ಇದರಿಂದಾಗಿ ಬುಡಕಟ್ಟು ನಾಯಕರು ಹೊರಹೊಮ್ಮಿದ್ದು , ಇವರು ಸಾಮಾಜಿಕ ನ್ಯಾಯವನ್ನು ಕೇಳುವುದರ ಜೊತೆಗೆ ಸರಕಾರವು ತನ್ನ ಜವಾಬ್ದಾರಿಯನ್ನು ನಿರ್ವಹಿಸುತ್ತದೆಯೇ ಎಂಬುದರ ಕುರಿತು ನಿಗಾ ಇಡುವಷ್ಟು ಪ್ರಜ್ಞಾವಂತರಾಗಿದ್ದಾರೆ. ಒಂದು ಎದ್ದು ಕಾಣುವ ಕೊರತೆ ಎಂದರೆ ಸಾಕಷ್ಟು ಸಂಖ್ಯೆಯಲ್ಲಿ ಮಹಿಳಾ ಮುಖಂಡರು ಹಾಗೂ ಸ್ವಯಂ ಸೇವಕರು ಇಲ್ಲದಿರುವುದು. ಸೋಲಿಗರಲ್ಲಿ ಸಹ ಪುರುಷ ಯಜಮಾನಿಕೆ ಸಾಮಾನ್ಯವಾಗಿದೆ. ಹಿಂದೂ ವ್ಯವಸ್ಥೆಯಲ್ಲಿ ಸಮಾನಾಂತರವಾಗಿರುವಂತೆ ಪುರುಷರು ಹೆಚ್ಚು ಉನ್ನತವಾದ ಅಧಿಕಾರ ಸ್ಥಾನಗಳನ್ನು ಹೊಂದಿರುತ್ತಾರೆ. ಕೌಟುಂಬಿಕ ಮತ್ತು ಆರ್ಥಿಕ ಜವಾಬ್ದಾರಿಯನ್ನು ಹೆಣ್ಣು ಮಕ್ಕಳು ಹೊರುವಾಗಲೂ ಮನೆಯ ಪುರುಷ ಮುಖಂಡನಿಗೆ ಎರಡನೆಯ ಸ್ಥಾನದಲ್ಲಿರುವಂತೆ ಗಂಡ,

ತಂದೆ ಎಂಬ ಪುರುಷರೂಪ, ಮಹಿಳೆಯರು ಮುಖಂಡರಾಗಿ ಹೊರಹೊಮ್ಮಲು ಅಡ್ಡಿಯನ್ನುಂಟುಮಾಡುತ್ತದೆ. ಎನ್ನುವ ವಾದದಲ್ಲಿ ಸ್ವಯಂ ಸೇವಾ ಸಂಘಗಳಲ್ಲಿ ಬುಡಕಟ್ಟು ಮಹಿಳಾ ನಾಯಕತ್ವ ಹೊಮ್ಮಲು ಸೂಕ್ತ ತರಬೇತಿಯ ಕೊರತೆಯಿದೆ ಎನ್ನುವುದು ಪ್ರಸ್ತುತ ಅಧ್ಯಯನದಿಂದ ದೃಢವಾಗುತ್ತದೆ. (2007: ಪು.ಸಂ 59 ಮತ್ತು 60)

ದಕ್ಷಿಣ ಕನ್ನಡದಲ್ಲಿರುವ ಸ್ವಸಹಾಯ ಗುಂಪುಗಳಲ್ಲಿ ಮುಖ್ಯ ವಾಹಿನಿಯ ಇತರ ಮಹಿಳೆಯರೊಂದಿಗೆ ಬುಡಕಟ್ಟು ಮಹಿಳೆಯರು ಸದಸ್ಯತ್ವ ಹೊಂದಿರುತ್ತಾರೆ. ಹೆಚ್ಚಿನ ಸ್ವ ಸಹಾಯ ಸಂಘಗಳು ಉಳಿತಾಯ ಮತ್ತು ಸಾಲದ ಕಡೆಗೆ ಹೆಚ್ಚು ಗಮನ ಕೊಡುತ್ತದೆ. ಕೆಲವು ಸ್ವ ಸಹಾಯ ಸಂಘಗಳಲ್ಲಿ ಮಾತ್ರವೇ ಸದಸ್ಯರ ಅರಿವಿನ ಅಥವಾ ಬೌದ್ಧಿಕ ಮೌಲ್ಯವನ್ನು ವಿಸ್ತರಿಸುವ ಕಾರ್ಯಕ್ರಮಗಳು ನಡೆಯುತ್ತವೆ.

ಬುಡಕಟ್ಟು ಸಮುದಾಯದೊಂದಿಗೆ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರೇತರ ಸಂಘ ಸಂಸ್ಥೆಗಳು ದಕ್ಷಿಣ ಕನ್ನಡದಲ್ಲಿ ಬಹಳ ವಿರಳವೆನ್ನಬಹುದು. ನಾಲ್ಕು ಬುಡಕಟ್ಟುಗಳಲ್ಲಿ ಕೊರಗ ಸಮುದಾಯದೊಂದಿಗೆ ದಕ್ಷಿಣ ಕನ್ನಡದಲ್ಲಿ ಸುಮಾರು 25 ವರ್ಷಗಳಿಂದ ಸಮಗ್ರ ಗ್ರಾಮೀಣ ಆಶ್ರಮ ಎನ್ನುವ ಸಂಸ್ಥೆ ಕಾರ್ಯನಿರ್ವಹಿಸುತ್ತಿದ್ದು, ಅನೇಕ ಸಮುದಾಯ ಪರ ಕಾರ್ಯಕ್ರಮಗಳ ಅನುಷ್ಠಾನದ ಮೂಲಕ ಸಾಕಷ್ಟು ಸಂಖ್ಯೆಯಲ್ಲಿ ಕೊರಗ ಮಹಿಳೆಯರು ಸಮುದಾಯದ ಮುಖಂಡರಾಗಿ ಹೊರಹೊಮ್ಮಿರುವುದು ಸಮುದಾಯಕ್ಕೆ ಆಶಾ ಭಾವನೆಯನ್ನು ಮೂಡಿಸಿದೆ.

ಕುಡುಬಿ, ಮರಾಠಿ ನಾಯ್ಕ, ಮಲೆಕುಡಿಯ, ಮಹಿಳೆಯರಿಗೆ ಹೋಲಿಸಿದರೆ ಸಂಘಟನೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡ ಕೊರಗ ಮಹಿಳೆಯರು ಪ್ರಜ್ಞಾವಂತರಾಗಿ ಕಾಣುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಕುಡುಬಿ, ಮರಾಠಿ ನಾಯ್ಕ, ಮಲೆಕುಡಿಯ ಸಮುದಾಯಕ್ಕೆ ಸೇರಿದ ಸಂಘಟನೆಗಳು ಕಡಿಮೆ ಸಂಖ್ಯೆಯಲ್ಲಿದ್ದರೂ, ಅದರಲ್ಲಿ ವೈಚಾರಿಕ ಪರ ಕಾರ್ಯಕ್ರಮಗಳು ಬಹಳ ಕಡಿಮೆಯಿರುವುದು ಅಧ್ಯಯನದಿಂದ ಕಂಡುಬರುತ್ತದೆ.

ಬುಡಕಟ್ಟು ಮಹಿಳೆಯರಿಗೆಂದೇ ಸೀಮಿತವಾಗಿರುವ ಸಂಘಟನೆಗಳು ಹಾಗೂ ಮಹಿಳೆಯರ ಸಮಗ್ರ ಅಭಿವೃದ್ಧಿಗೆ ಅಗತ್ಯವಿರುವ ಆರ್ಥಿಕ ಚಟುವಟಿಕೆಗಳು ಮತ್ತು ವಿಚಾರ ಪೂರ್ಣ ಕಾರ್ಯಕ್ರಮಗಳ ಕೊರತೆಯಿದೆ ಎಂದು ಅಧ್ಯಯನದ ಮೂಲಕ ಗಮನಿಸಬಹುದಾಗಿದೆ.

ಅಧ್ಯಯನದ ಪ್ರಕಾರ ಕೇವಲ 3.32% ಮಹಿಳೆಯರು ಮಾತ್ರವೇ ಸ್ವಂತ ಉದ್ಯೋಗದಲ್ಲಿದ್ದು (ಹೈನುಗಾರಿಕೆ, ವ್ಯಾಪಾರ, ಕುಲಕಸುಬು, ಮಲ್ಲಿಗೆ)ಮೂಲವಸ್ತುವಿನ ಕೊರತೆ, ಬಂಡವಾಳದ ಕೊರತೆ, ಅಸಮರ್ಪಕ ಕೂಲಿ, ಆರೋಗ್ಯದ ಸಮಸ್ಯೆ ಇತ್ಯಾದಿಗಳಿಂದಾಗಿ ಈ ಕ್ಷೇತ್ರಗಳಲ್ಲಿ ನಿರೀಕ್ಷಿತ ಯಶಸ್ಸು ಸಾಧ್ಯವಾಗಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದು, ಒಟ್ಟು ಬುಡಕಟ್ಟು ಪರ ಸ್ವ ಉದ್ಯೋಗದ ಕುರಿತಾದ ಮಾರ್ಗದರ್ಶನದ ಕೊರತೆಯನ್ನು ಕಾಣಬಹುದಾಗಿದೆ. ಅತ್ಯಂತ ಹೆಚ್ಚಿನ ಸಂಖ್ಯೆಯ 88.33% ಮಹಿಳೆಯರು ತಮ್ಮ ಉದ್ಯೋಗದಲ್ಲಿ ಹೆಚ್ಚಿನ ಉನ್ನತಿಯ ಇಚ್ಛೆ ಇಲ್ಲ ಎಂದು ಪ್ರತಿಕ್ರಯಿಸಿದ್ದನ್ನು ಅವಲೋಕಿಸಿದಾಗ ಬುಡಕಟ್ಟು ಮಹಿಳೆಯರು ಅಲ್ಪ ತೃಪ್ತರು ಎಂದು ಈವರೆಗೆ ಆದ ಅನೇಕ ಅಧ್ಯಯನಗಳು ಸ್ಪಷ್ಟ ಪಡಿಸಿದರೂ, ಆಧುನಿಕ ಜಗತ್ತಿನೊಂದಿಗೆ ಸ್ಪರ್ಧಿಸಲು, ಒಟ್ಟು ದೇಶದ ಪ್ರಗತಿಯಾಗಲು ಬುಡಕಟ್ಟು ಸಮುದಾಯ ಆರ್ಥಿಕವಾಗಿ ಕಾಲಕ್ಕೆ ತಕ್ಕಂತೆ ಸ್ಥಿತ್ಯಂತರಗೊಳ್ಳಲೇಬೇಕಾಗಿದೆ.

ಬುಡಕಟ್ಟು ಸಮೂಹಗಳಲ್ಲಿ ಬದಲಾಗುತ್ತಿರುವ ಆರ್ಥಿಕ ಜೀವನ ಎಂಬ ಅಧ್ಯಯನದಲ್ಲಿ ಅಂಬಳಿಕೆ ಹಿರಿಯಣ್ಣನವರು ಬುಡಕಟ್ಟು ಸಮೂಹಗಳ ಆರ್ಥಿಕ ಜಡತನವನ್ನು ದೂರಮಾಡಲು ಕೆಲವು ಪರಿಹಾರ ಕ್ರಮಗಳನ್ನು ಸೂಚಿಸಿದ್ದಾರೆ.

- ಹೆಚ್ಚು ಕಾಲ ಬಾಳುವಂತಹ ವಾಸದ ಮನೆಯನ್ನು ಕಟ್ಟಿಕೊಡುವುದು.
- ಸಾಧ್ಯವಾದಲ್ಲೆಲ್ಲಾ ಕೃಷಿಗೆ ಯೋಗ್ಯವಾದ ಭೂಮಿಯನ್ನು ವಿತರಿಸುವುದು.
- ಕಾಡಿನ ಸಂಪನ್ಮೂಲಗಳ ಶೇಖರಣೆ ಕ್ರಮಬದ್ಧವಾಗಿರುವಂತೆ ನೋಡಿಕೊಳ್ಳುವುದು.
- ಶೇಖರಿಸಿದ ಸಾಮಾಗ್ರಿಗಳ ಮಾರಾಟಕ್ಕೆ ಸಹಕಾರ ಸಂಘಗಳನ್ನು ಸ್ಥಾಪಿಸುವುದು.
- ಹೊಸ ಆರ್ಥಿಕ ಚಟುವಟಿಕೆಗಳ ಸಂಬಂಧ ಸೂಕ್ತ ರೀತಿಯಲ್ಲಿ ತರಬೇತಿ ನೀಡುವುದು

ಕಾಡಿನ ನಾಶದಿಂದಾಗಿ ಈಗೀಗ ಸಂಪೂರ್ಣವಾಗಿ ಕಾಡನ್ನೇ ಅವಲಂಬಿಸಿ ಜೀವನ ನಡೆಸುವವರು ಯಾರೂ ಇಲ್ಲ, ಕಾಡಿನ ಯಜಮಾನ್ಯವನ್ನು ಉಳಿಸಿಕೊಂಡಿಲ್ಲ. ಅವರ ಹಕ್ಕುಗಳನ್ನು ಮಿತಿಗೊಳಿಸಲಾಗಿದೆ. ಆದರೆ ಕೃಷಿಯನ್ನು ಉತ್ತೇಜಿಸಲಾಗುತ್ತಿದೆ. ಸಾರಿಗೆ ಸಂಪರ್ಕ, ಶಿಕ್ಷಣ ಮತ್ತು ವೈದ್ಯಕೀಯ ಸೌಲಭ್ಯಗಳನ್ನೊದಗಿಸುವಲ್ಲಿ ತಕ್ಕಷ್ಟು ಸುಧಾರಣೆ ಕಂಡುಬಂದಿದೆ. ಕೃಷಿ ಕಾರ್ಯಗಳಿಗಾಗಿ ಉತ್ತಮ ತಳಿಯ ಬೀಜ, ರಾಸಾಯನಿಕ ಗೊಬ್ಬರ

ಬಳಕೆ ಜನಪ್ರಿಯವಾಗುತ್ತಿದ್ದು ಭೂ ಒಡೆತನ ಹೊಂದಿರುವ ಅನೇಕ ಬುಡಕಟ್ಟು ಕುಟುಂಬಗಳು ವರ್ಷಕ್ಕೊಂದು ಬೆಳೆ ತೆಗೆಯುತ್ತಿವೆ.

ಸಂಪನ್ಮೂಲಗಳ ಕೊರತೆಯಿಂದ ಇನ್ನೂ ಅನೇಕ ಕುಟುಂಬಗಳು ಕೃಷಿ ರಂಗಕ್ಕೆ ಇಳಿದಿಲ್ಲದಿರುವುದು ಉಂಟು. ಆದರೂ ಪರಿಸ್ಥಿತಿ ಸುಧಾರಿಸುತ್ತಿದೆ. ಸಾಲ ಮಾಡುವುದು ಕಡಿಮೆಯಾಗುತ್ತಿದೆ. ಶಿಕ್ಷಣ ವಿಸ್ತರಣೆ, ನಗರ ಪ್ರದೇಶಗಳಲ್ಲಿ ಉದ್ಯೋಗಾನ್ವೇಷಣೆ, ಆರಂಭಗೊಂಡಿರುವುದೇ ಅದಕ್ಕೆ ಆಧಾರ. (2000: ಪು.ಸಂ 129 ರಿಂದ 131) ಎಂಬ ಅಭಿಪ್ರಾಯವನ್ನು ದಕ್ಷಿಣ ಕನ್ನಡದ ಕುಡುಬಿ, ಮರಾಠಿ ನಾಯ್ಕ ಮತ್ತು ಮಲೆಕುಡಿಯ ಸಮುದಾಯಕ್ಕೆ ಸಂಬಂಧಪಟ್ಟಂತೆ ಒಪ್ಪಿಕೊಳ್ಳಬಹುದಾಗಿದೆ.

ಸದಾ ಪರಿವರ್ತನಾಶೀಲವಾದ ಮನುಷ್ಯ ಸಂಸ್ಕೃತಿಯನ್ನು ವಿಶ್ಲೇಷಿಸಬೇಕಾದರೆ ಆದಿವಾಸಿಗಳ ಸಂಸ್ಕೃತಿಯನ್ನು ಅವಲೋಕಿಸುವುದು ಬಹಳ ಮುಖ್ಯವಾಗುತ್ತಿದೆ.

ಅನೇಕ ವರ್ಷಗಳಿಂದ ಮುಖ್ಯವಾಹಿನಿಯ ಸಂಸ್ಕೃತಿಯ ಪ್ರಭಾವಕ್ಕೊಳಗಾಗದೆ ಕಾಡು, ಅಡವಿಯಂಚಿನಲ್ಲಿ ತಮ್ಮದೇ ಆದ ಭಾಷೆ, ಮೂಲಪುರುಷ, ಅಧಿದೈವ, ನಂಬಿಕೆ, ಸಂಪ್ರದಾಯಗಳು, ವೈದ್ಯ, ಮಾಟ, ಮಂತ್ರ, ಕ್ರೀಡೆಯ ಕುರಿತಾದ ವಿಶೇಷ ಜ್ಞಾನ, ತಮ್ಮದೇ ಆದ ವಿಧಿ ನಿಷೇಧಗಳನ್ನು, ಕಾಯಿದೆ ಕಟ್ಟಳೆಗಳು ಹಾಗೂ ಸುಸಂಘಟಿತ ಸಾಮಾಜಿಕ ವ್ಯವಸ್ಥೆಯೊಂದಿಗೆ ಬದುಕುತ್ತಿರುವ ಬುಡಕಟ್ಟು ಜನಾಂಗಗಳು ಮೂಲತಃ ಒಂದೆಡೆ ನಿಂತು ವ್ಯವಸಾಯ ಮಾಡಿದವರಲ್ಲ.

ಕಾಡಿನ ಉತ್ಪನ್ನಗಳನ್ನೇ ಅವಲಂಬಿಸಿ ಬೇಸಾಯ ಕ್ಷೇತ್ರವನ್ನು ಮೇಲಿಂದ ಮೇಲೆ ಬದಲಾಯಿಸುವಂತೆ, ವರ್ತಮಾನದ ಅಗತ್ಯಕ್ಕೆ ಮಾತ್ರ ಹೆಚ್ಚಿನ ಕಾಳಜಿ ವಹಿಸುವ ಬುಡಕಟ್ಟು ಸಮುದಾಯ ಭವಿಷ್ಯಕ್ಕಾಗಿ ಸಂಪತ್ತನ್ನು ಕೂಡಿ ಹಾಕಿದವರಲ್ಲ. ಬ್ರಿಟಿಷರು, ಭಾರತವನ್ನಾಶ್ರಯಿಸಿ ನಾಡಿನ ಮತ್ತು ಕಾಡಿನ ಹಿಡಿತ ಸಾಧಿಸಿದ ಮೇಲೆ ಕಾಡಿನ ಸಂಪತ್ತನ್ನು ಅನುಭವಿಸುವ ಇವರ ಹಕ್ಕನ್ನು ಕಸಿದುಕೊಂಡ ಕಾರಣ ಅನೇಕ ಬುಡಕಟ್ಟು ಜನರು ಅನಾಥರಾದರು. ಕಾಡಿನಲ್ಲಿ ಜೀವನ ಸಾಗಿಸುವುದು ಕಷ್ಟವಾಗಿ ಕೆಲವರು ಕಾಡನ್ನು ತ್ಯಜಿಸಿ ಗ್ರಾಮದಲ್ಲಿ ನೆಲೆಸಿ ಬದಲಾದ ಸ್ಥಿತಿಗೆ ಹೊಂದಿಕೊಳ್ಳುತ್ತ, ಇನ್ನೊಬ್ಬರೊಡನೆ ಹೆಚ್ಚು ಬೆರೆಯದೆ ತಮ್ಮ ಬುಡಕಟ್ಟು ಲಕ್ಷಣಗಳನ್ನು ತೊರೆಯದೆ, ಇನ್ನೂ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ

ಪೂರ್ಣವಾಗಿ ಬೆರೆಯದೆ, ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆ ಹಾಗೂ ವೈಶಿಷ್ಟ್ಯಗಳನ್ನು ಉಳಿಸಿಕೊಂಡಿದ್ದಾರೆ.

"ಸರ್ವರಿಗೂ ಸಮಪಾಲು ಸರ್ವರಿಗೂ ಸಮಬಾಳು" ಎಂಬ ತತ್ವದ ಅಡಿಯಲ್ಲಿ ಭಾರತ ಸಂವಿಧಾನವು ರೂಪಿತವಾಗಿದೆ ಎಂದು ಅದೆಷ್ಟು ಜನರಿಗೆ ತಿಳಿದಿದೆಯೋ ಹೇಳಲು ಸಾಧ್ಯವಿಲ್ಲ. ಆದರೆ ಕಾಡುವಾಸಿಗಳಾದ ಬುಡಕಟ್ಟು ಸಮುದಾಯಗಳು ಮಾತ್ರ ತಮಗೆ ಅರಿವಿಲ್ಲದಂತೆಯೇ ಭಾರತದ ಸಂವಿದಾನದ ಈ ತತ್ವವನ್ನು ಪಾಲಿಸುತ್ತಿದ್ದಾರೆ. ಏಕೆಂದರೆ ಕಾಡಿನಲ್ಲಿ ದೊರೆಯುವ ಆಹಾರ ಯೋಗ್ಯ ಉತ್ಪನ್ನಗಳನ್ನು ಸಂಗ್ರಹ ಸಾಮರ್ಥ್ಯವಿರುವ ಕಾಡು ಮಾನವ ಸಂಪೂರ್ಣ ತನ್ನದಾಗಿಸಿಕೊಳ್ಳಬಲ್ಲ. ಆದರೆ ಅದರಿಂದ ಎದುರಾಗಬಹುದಾದ ವ್ಯತಿರಿಕ್ತ ಪರಿಣಾಮದ ಅರಿವಿರುವುದರಿಂದ ಯಾವುದೇ ಆಹಾರ ಉತ್ಪನ್ನದ ಸಂಗ್ರಹವೇ ಇರಲಿ ಆಯಾ ದಿನಕ್ಕೆ ಅಗತ್ಯವಾದುದಷ್ಟನ್ನು ಮಾತ್ರ ಬಳಸಿಕೊಳ್ಳುತ್ತಾನೆ. ಉಳಿದಿದ್ದನ್ನು ತನ್ನ ಗುಂಪಿನ ಜನರಿಗೆ ಹಂಚುವ ಮೂಲಕ ಪೋಲಾಗುವ ಆಹಾರವನ್ನು ಸದ್ಬಳಕೆ ಮಾಡುವುದೇ ಅಲ್ಲದೇ ಕಾಡಿನಲ್ಲಿ ದೊರೆಯುವ ಅಮೂಲ್ಯವಾದ ಆಹಾರ ಉತ್ಪನ್ನಗಳ ಸಂರಕ್ಷಣೆಯನ್ನು ಮಾಡುತ್ತಾನೆ.

ಕಾಡುವಾಸಿ ಅಥವಾ ಬುಡಕಟ್ಟು ಸಮುದಾಯಗಳನ್ನು ಅವರ ವೇಷ ಭೂಷಣ, ಆಹಾರ ಕ್ರಮ, ಜೀವನ ಶೈಲಿಯನ್ನು ಗಮನಿಸಿ ಕಾಡು ಜನರು, ಅನಾಗರಿಕರು, ಮೂಢರು ಎಂದು ಅರ್ಥೈಸಿಕೊಳ್ಳುವುದು ಸಾಮಾನ್ಯವಾಗಿದೆ. ಆದರೆ ಅವರಿಗಿರುವ ಪಾರಂಪರಿಕ ಜ್ಞಾನ ಅಪಾರವಾದದು.

ಎಲ್ಲಾ ಬುಡಕಟ್ಟು ಸಮುದಾಯಗಳು ಕಾಲಕಾಲಕ್ಕೆ ರೂಪಿಸಲಾಗುತ್ತಿರುವ ಅರಣ್ಯ ಕಾಯ್ದೆಯ ಅನ್ವಯ ತಮ್ಮ ಮೂಲ ನೆಲೆಗಳನ್ನು ತೊರೆದು ಕಾಡಿನಿಂದ ಹೊರಗೆ ಬರುವುದು ಅನಿವಾರ್ಯವಾಗಿದೆ. ಇದರಿಂದ ಅವರು ತಮ್ಮ ಆಹಾರ ಪದ್ಧತಿ, ಕೃಷಿ ಪದ್ಧತಿ, ಸಾಂಸ್ಕೃತಿಕ ಜೀವನ ಕ್ರಮ, ರೋಗರುಜಿನಗಳಿಗೆ ನೀಡುತ್ತಿದ್ದ ಗಿಡಮೂಲಿಕೆ ಜ್ಞಾನ, ಅವರು ಪ್ರೀತಿಸುತ್ತಿದ್ದ ಕಾಡನ್ನು ಬಿಟ್ಟು ಹೊರಗೆ ಬಂದಿರುವುದರಿಂದ ತಮ್ಮದೆನ್ನುವ ಸರ್ವಸ್ವವನ್ನು ಕಳೆದುಕೊಂಡಿದ್ದಾರೆ. ಅದ್ದರಿಂದ ಅಳಿದು ಉಳಿದಿರುವ ಅವರ ಪಾರಂಪರಿಕ ಜ್ಞಾನ ನಿಧಿಯನ್ನು ಸಂಗ್ರಹಿಸಿಕೊಳ್ಳುವ ಕೆಲಸವೂ ತುರ್ತಾಗಿ ಆಗಬೇಕಿದೆ. ಆ ಮೂಲಕವಾದರೂ ಬುಡಕಟ್ಟು ಸಮುದಾಯದ ಜನರ ಜ್ಞಾನ ಎಲ್ಲರಿಗೂ ತಿಳಿಯಬೇಕು ಹಾಗೂ ಸೂಕ್ತ ಎನಿಸಿದವುಗಳನ್ನು ರೂಢಿಸಿಕೊಳ್ಳಲು ಸಾಧ್ಯವಾಗಬೇಕಿದೆ.

ಪ್ರಸ್ತುತ ಆಧುನಿಕತೆಯ ಕಡೆಗೆ ಸಾಗುತ್ತಿರುವ ಬುಡಕಟ್ಟು ಸಮುದಾಯಗಳು ತೀವ್ರಗತಿಯಲ್ಲಿ ಬದಲಾವಣೆ ಹೊಂದುತ್ತಿದೆ. ಬುಡಕಟ್ಟುಗಳಲ್ಲಿ ಏನು ಮತ್ತು ಹೇಗೆ ಬದಲಾವಣೆಯಾಗುತ್ತಿದೆ? ಬದಲಾವಣೆಯಾಗುತ್ತಿರುವುದಕ್ಕೆ ಕಾರಣಗಳೇನು? ಬದಲಾವಣೆಯಿಂದ ಆ ಸಮುದಾಯಗಳ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ರಾಜಕೀಯ ಅಂಶಗಳ ಮೇಲೆ ಆದ ಪರಿಣಾಮಗಳೇನು ಎನ್ನುವುದನ್ನು ತಿಳಿದುಕೊಳ್ಳುವುದು ಇಂದು ಅಗತ್ಯವಿದೆ.

ಇದರಲ್ಲೂ ಬುಡಕಟ್ಟು ಸಮುದಾಯದಲ್ಲಿ ಗಂಡನೊಂದಿಗೆ ಹೆಗಲು ಕೊಟ್ಟು ದುಡಿಯುತ್ತ, ಮನೆ ಮಕ್ಕಳನ್ನು ನಿಭಾಯಿಸುತ್ತ (ಅನಾದಿ ಕಾಲದಿಂದಲೂ ಭೂಮಿಯ ಜೊತೆ ಸಂಬಂಧವಿದ್ದರೂ ಸಾಮ್ಯತೆಯನ್ನು ಪಡೆಯಲಾಗದೆ) ಮುಗ್ಧತೆಯ ರೂಪವೆತ್ತಂತೆ ಇರುವ ಆದಿವಾಸಿ ಮಹಿಳೆಯರ ಕುರಿತು ಅಭಿವೃದ್ಧಿ ಚಿಂತನೆ ಮಾಡುವುದು ಅನಿವಾರ್ಯವಾಗಿದೆ.

ಅಭಿವೃದ್ಧಿಯ ಕುರಿತಾಗಿ ಈಗಾಗಲೇ ನಮ್ಮ ದೇಶದಲ್ಲಿ ಅನೇಕ ಕಾರ್ಯಕ್ರಮಗಳು ಅನುಷ್ಠಾನಗೊಂಡಿವೆ. ಯಾವುದೇ ಒಂದು ಅಭಿವೃದ್ಧಿ ನೀತಿಯು ಇಡೀ ದೇಶದ ಅರಣ್ಯವಾಸಿ, ಜನ ಸಮುದಾಯವನ್ನೊಳಗೊಂಡು, ಆದಿವಾಸಿ ಜನಪರವಾಗಿ ನಿಲ್ಲುವುದೇ ಎನ್ನುವುದು ಪ್ರಶ್ನೆಯಾಗಿದೆ. ಅದರಲ್ಲೂ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಕ್ಕೆ ಸಿಲುಕಿ ಅದೆಷ್ಟೋ ಬುಡಕಟ್ಟು ಜನರ ಪರಂಪರಾಗತ ಜ್ಞಾನವನ್ನು ಸ್ವಾಧೀನ ಮಾಡಿಕೊಂಡಿದ್ದು, ಈ ಅವಧಿಯಲ್ಲಿ ಬದುಕಿಗೆ ಭದ್ರತೆಯಿಲ್ಲದೆ ಅನೇಕ ಬುಡಕಟ್ಟು ಜನರು ಅತಂತ್ರ ಜೀವನ ನಡೆಸುತ್ತಿದ್ದಾರೆ.

ಇಂತಹ ಪರಿಸ್ಥಿತಿಯಲ್ಲಿ ಗಿರಿಜನ ಮಹಿಳೆಯರ ಅಭಿವೃದ್ಧಿಯ ಪ್ರಕ್ರಿಯೆಗಳು ನಿಧಾನವಾಗಿ ನಡೆಯುತ್ತಿರುವುದು ಅವರ ಹಿಂದುಳಿಯುವಿಕೆಗೆ ಕಾರಣವಾಗಿದೆ. ಮಹಿಳಾ ಅಭಿವೃದ್ಧಿ ಪರಿಕಲ್ಪನೆಯ ಕಾರ್ಯಯೋಜನೆಗಳು ರೂಪ ತಳೆದಿರುವುದೇ 21ನೇ ಶತಮಾನದಲ್ಲಿ. ಭಾರತ ಸರ್ಕಾರವು ಕ್ರಿ.ಶ 2001 ನೇ ವರ್ಷವನ್ನು '**ಮಹಿಳಾ ಸಶಕ್ತೀಕರಣ ವರ್ಷ**' ಎಂದು ಘೋಷಿಸಿತು. ಆದರೂ ಬುಡಕಟ್ಟು ಮಹಿಳೆಯರ ಸ್ಥಿತಿ-ಗತಿಯಲ್ಲಿ ಸುಧಾರಣೆಯಾಗಿಲ್ಲ ಎಂದು ವಿವಿಧ ಅಧ್ಯಯನಗಳಿಂದ ಗಮನಿಸಬಹುದು.

ಬುಡಕಟ್ಟು ಮಹಿಳೆಯ ಪ್ರಸ್ತುತ ಸ್ಥಿತಿ-ಗತಿಗಳನ್ನು ವಿಶ್ಲೇಷಿಸಲು ಮೂರು ರೀತಿಯ ದೃಷ್ಟಿಕೋನಗಳು ಅನಿವಾರ್ಯವಾಗಿದೆ. ಅವುಗಳು

1. ಲಿಂಗಅಸಮಾನತೆ,
2. ಪುರುಷ(ಪಿತೃ) ಪ್ರಧಾನ ಮೌಲ್ಯಗಳು ತುಂಬಿರುವ ನಮ್ಮ ದೇಶದ ಒಬ್ಬ ಸಾಮಾನ್ಯ ಎರಡನೇ ದರ್ಜೆಯ ಪ್ರಜೆಯಾಗಿ ಮತ್ತು
3. ಒಬ್ಬ ಬುಡಕಟ್ಟು ಮಹಿಳೆಯಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ಮಹಿಳೆಯಾಗಿ ಅವಲೋಕಿಸಬೇಕಾಗುತ್ತದೆ.

ಜಾತಿ ವ್ಯವಸ್ಥೆಯೊಳಗೆ ಸೇರದ ಬುಡಕಟ್ಟು (ಮಹಿಳೆಯರಿಗೆ) ಸಮುದಾಯಕ್ಕೆ ಅಸ್ಪೃಶ್ಯತೆಯ ಸೋಂಕು (ವಿಶೇಷವಾಗಿ ಕೊರಗ ಬುಡಕಟ್ಟು) ತಗುಲಿದಾಗ ಈ ಎಲ್ಲಾ ತೊಡಕುಗಳೊಂದಿಗೆ ಬುಡಕಟ್ಟು ಮಹಿಳೆಯರ ಬದಲಾವಣೆಯ ಪ್ರಕ್ರಿಯೆಯು ಬಹಳ ನಿಧಾನವಾಗುವುದನ್ನು ಅವಲೋಕಿಸಬಹುದು.

ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರು ಸಾಮಾಜಿಕ, ಆರ್ಥಿಕ ಶೈಕ್ಷಣಿಕ, ರಾಜಕೀಯವಾಗಿ ಸಾಮಾನ್ಯ ಮಹಿಳೆಯರಿಗಿಂತಲೂ ಹಿಂದುಳಿದಿದ್ದಾರೆ. ಹೆಚ್ಚಿನ ಬುಡಕಟ್ಟು ಮಹಿಳೆಯರು ಪ್ರಾಥಮಿಕ ಹಂತದ ಶಿಕ್ಷಣ ಪಡೆದಿದ್ದು ಎಂದರೆ 46% ಹಾಗೂ 32.67% ಮಹಿಳೆಯರು ಪದವಿ ಹಂತದ ವ್ಯಾಸಂಗ ಪಡೆದಿದ್ದು ದೇಶದಲ್ಲಿ 1961ರ ಜನಗಣತಿಯಂತೆ 8.53% ಒಟ್ಟು ಬುಡಕಟ್ಟು ಶೇಕಡಾವಾರು ಅಕ್ಷರಸ್ಥರಿದ್ದು, 1971ರಲ್ಲಿ 11.30% 1981 ರಲ್ಲಿ 16.35% 1991 ರಲ್ಲಿ 29.60% ಹಾಗೂ 2001ರಲ್ಲಿ 47.10% ಅಕ್ಷರಸ್ಥರು ಇರುವರೆಂದು ಅಂಕಿಅಂಶಗಳು ತಿಳಿಸುತ್ತವೆ. ಈ ಅಂಕಿಅಂಶಗಳು ಒಟ್ಟು ದೇಶದ ಬುಡಕಟ್ಟು ಸಾಕ್ಷರತೆಯಲ್ಲಾದ ಬದಲಾವಣೆಗಳನ್ನು ಬಿಂಬಿಸುತ್ತಿದ್ದು ಬುಡಕಟ್ಟು ಸಮುದಾಯ ಶಿಕ್ಷಣದಲ್ಲಿ ಸ್ಥಿತ್ಯಂತರಗೊಳ್ಳುತ್ತಿವೆ ಎನ್ನುವುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ.

ಹಾಗೆಯೇ ಬಡತನ, ಅರಿವಿನ ಕೊರತೆ, ಸಮುದಾಯಗಳಲ್ಲಿ ಶಿಕ್ಷಣಕ್ಕೆ ಮಾದರಿಯ ಕೊರತೆ, ಶಿಕ್ಷಣ ಪೂರಕವಲ್ಲದ ಮನೆಯ ವಾತಾವರಣ, ಮಕ್ಕಳ ನಿರಾಸಕ್ತಿ, ಹೆತ್ತವರ ಅನಕ್ಷರತೆ, ಮತ್ತು ದುಶ್ಚಟಗಳು, ಬುಡಕಟ್ಟು ಸಂಸ್ಕೃತಿಯಿಂದ ಅಂತರದಲ್ಲಿರುವ ಔಪಚಾರಿಕ ಪಠ್ಯಕ್ರಮ, ಗಿರಿಜನ ಆಶ್ರಮ ಶಾಲೆಗಳ ಅಸಮರ್ಪಕ ಸ್ಥಿತಿ ಇತ್ಯಾದಿಗಳು ದಕ್ಷಿಣ ಕನ್ನಡದಲ್ಲಿ ಬುಡಕಟ್ಟು ಶಿಕ್ಷಣಕ್ಕಿರುವ ಅಡ್ಡಿಗಳಾಗಿವೆ ಎಂದು ಅಧ್ಯಯನವು ಸಾಬೀತುಪಡಿಸಿದೆ.

ಇತರ ಸಮುದಾಯಗಳೊಂದಿಗೆ ಹೊಂದಾಣಿಕೆಯೊಂದಿಗೆ ಜೀವನ ನಡೆಸುತ್ತಿರುವ ಬುಡಕಟ್ಟು ಮಹಿಳೆಯರು ಬಿಡುವಿನ ವೇಳೆಯಲ್ಲೂ ಮನೆಕೆಲಸವನ್ನು ಮಾಡುತ್ತ ಇನ್ನೂ ಅನೇಕರು ಬಿಡುವಿನ ವೇಳೆಯಲ್ಲಿ ದೂರದರ್ಶನ ವೀಕ್ಷಿಸುತ್ತಾರೆ. ಹಾಗೂ ಇತರ ಮನೆ ಭೇಟಿಯೊಂದಿಗೆ ಹರಟೆಯಲ್ಲಿ ತೊಡಗುತ್ತಾರೆ. ಅಲ್ಪ ಪ್ರಮಾಣದಲ್ಲಿ ಮಹಿಳೆಯರಿಗೆ ಪತ್ರಿಕೆ ಓದುವ ಹವ್ಯಾಸವಿದೆ.

ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ಪಿತೃ ಪ್ರಧಾನವಾಗಿದ್ದರೂ (ಕೊರಗರು ಮಾತೃ ಮೂಲೀಯರು) ಗಂಡು ಹೆಣ್ಣಿನ ಸಂಬಂಧ ಮೇಲು-ಕೀಳು ಅಂತರ ಹೊಂದಿಲ್ಲ. ಇಬ್ಬರೂ ಸಮಾನರು. ನಾಗರಿಕ ಸಮಾಜದ ಪರಿಸ್ಥಿತಿಯಂತೆ ಹೆಣ್ಣು ದುರ್ಬಲಳು, ಅವಳು ಸ್ವಾತಂತ್ರ್ಯಕ್ಕೆ ಅನರ್ಹಳು ಎಂಬ ನಂಬಿಕೆ ಈ ಸಮುದಾಯದಲ್ಲಿ ಕಂಡುಬರುವುದಿಲ್ಲ. ಬುಡಕಟ್ಟು ಅಧ್ಯಯನ ಎಂಬ ನಿಯತಕಾಲಿಕದಲ್ಲಿ ಬುಡಕಟ್ಟು ಸಮುದಾಯಗಳಲ್ಲಿ ಮಾತೃಪ್ರಧಾನತೆಯ ಕುರಿತಾದ ತಮ್ಮ ಅಧ್ಯಯನದಲ್ಲಿ ವಿಜಯಲಕ್ಷ್ಮಿ ಅವರು ಮಾತೃ ಪ್ರಧಾನತೆ ಎಂಬ ಸಂಕಥನ ರೂಪಿಸಿ ಅದಕ್ಕೆ ಒಂದು ತಾತ್ವಿಕ ಚೌಕಟ್ಟನ್ನು ರೂಪಿಸಿದವರು ಮಾರ್ಕ್ಸ್‌ವಾದಿ ಚರಿತ್ರೆಕಾರರು ಅದಕ್ಕೆ ಮುನ್ನ ಲೂವಿಸ್ ಹೆನ್ರಿ ಮಾರ್ಗನ್ ಎಂಬ ಅಮೇರಿಕಾದ ಸಾಮಾಜಿಕ ಮಾನವಶಾಸ್ತ್ರಜ್ಞ ಹಾಗೂ ವಿದ್ವಾಂಸ ತನ್ನ "Ancient Societies" ಎಂಬ ಪುಸ್ತಕದಲ್ಲಿ ಮಾತೃ ಪ್ರಧಾನತೆಯನ್ನು ಕುರಿತು ಪ್ರಸ್ತಾಪಿಸುತ್ತಾರೆ. ಮಾರ್ಗನ್‌ರ ಕೃತಿಯೊಳಗಿನ ಪ್ರಸ್ತಾಪವನ್ನು ಸೈದ್ಧಾಂತಿಕವಾಗಿ ನಿರೂಪಿಸಿದವರು ಫ್ರೆಡರಿಕ್ ಎಂಗೆಲ್ಸ್ ಅವರು .ಈ ಎಲ್ಲ ಮಹತ್ವದ ಚಿಂತಕರ ಚರ್ಚೆಗಳ ಪ್ರಕಾರ

1) ಆಹಾರ ಸಂಗ್ರಹಣೆ ಹಂತದಿಂದ ಲಘು ಕೃಷಿ ಹಂತದವರೆಗೆ ಮಾನವ ಸಮಾಜ ಗಣ ಸಮಾಜವಾಗಿತ್ತು.

2) ತಾರತಮ್ಯಗಳಿಲ್ಲದ ಸಮಾಜವು ಆದಿಮ ಗಣ ಸಮಾಜವಾಗಿತ್ತು. ವರ್ಗಭೇದ, ಲಿಂಗಭೇದಗಳಿರಲಿಲ್ಲ. ಅದು ಮಾತೃ ಪ್ರಧಾನ ಸಮಾಜವಾಗಿತ್ತು. ಉತ್ಪಾದನಾ ವಿಧಾನ ಸೀಮಿತವಾಗಿತ್ತು. ಉತ್ಪಾದನೆಯು ಗಣನೀಯವಾಗಿ ಕಡಿಮೆ ಪ್ರಮಾಣದಲ್ಲಿತ್ತು. ಮಿಗುತಾಯವಿರದ ಕಾರಣ ಮಾಲಿಕ ಮತ್ತು ಶ್ರಮಿಕ ಎಂಬ ವರ್ಗಗಳಿರಲಿಲ್ಲ.

ಈ ಆದಿಮ ಗಣ ಸಮಾಜದಲ್ಲಿ ಸ್ತ್ರೀ ಮುಖ್ಯವಾಗಿದ್ದಳು. ಮತ್ತು ಅವಳೇ ಗಣದ ಕೇಂದ್ರವಾಗಿದ್ದಳು. ಗಣದ ಪ್ರತಿ ಸದಸ್ಯನ ಏಕೈಕ ಜೈವಿಕ ಚಹರೆಯೆಂದರೆ ಅದು ತನ್ನ ತಾಯಿ ಮಾತ್ರ. ಈ ಕಾರಣಕ್ಕಾಗಿ ಆದಿಮ ಗಣ ಸಮಾಜವು ಮಾತೃ ಪ್ರಧಾನ ಸಮಾಜವಾಗಿತ್ತು.

ಕೃಷಿ ಹಂತದ ಸಂದರ್ಭದಲ್ಲಿ ಉತ್ಪಾದನಾ ವಿಧಾನದಲ್ಲಿ ಆದ ಬದಲಾವಣೆಗಳು ಗಣದ ಸಾಮಾಜಿಕ ಸಂಬಂಧಗಳನ್ನು ನಿರ್ಣಾಯಕವಾಗಿ ರೂಪಾಂತರಿಸಿದವು. ಕಬ್ಬಿಣ ಮತ್ತು ನೇಗಿಲ ಬಳಕೆಯಿಂದ ಉತ್ಪಾದನಾ ವ್ಯವಸ್ಥೆಯು ಪುರುಷನ ಕೈವಶವಾಯಿತು. ಗಣದ ಸಂಪತ್ತು ಬಲಶಾಲಿಯೊಬ್ಬನ ಕೈವಶವಾಗಿ ಗಣದಲ್ಲಿ ದುಡಿವ ಸದಸ್ಯರು ಈ ಬಲಶಾಲಿಯ ಆಳುಗಳಾದರು. ಮಹಿಳೆಯು ಈ ಯಜಮಾನನ ಆಸ್ತಿಯನ್ನು ಕಾಪಾಡಲೆಂದು ಹುಟ್ಟುವ ಮಗುವಿಗೆ ತಾಯಿಯಾಗುವುದಕ್ಕೆ ಮಾತ್ರ ಸೀಮಿತವಾಗಿ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಅಧೀನ ಸ್ಥಿತಿಗೆ ತಳ್ಳಲ್ಪಟ್ಟಳು.

ಆದರೆ ಇಂದಿಗೂ ಮಾತೃಪ್ರಧಾನತೆ ಪಾರಂಪರಿಕ ಕೃಷಿಕ ಮತ್ತು ಬುಡಕಟ್ಟು ಸಮಾಜಗಳಲ್ಲಿ ಸಂಕೇತದ ಮಟ್ಟದಲ್ಲಿದ್ದು ಆ ಸಮುದಾಯಗಳ ಆಚರಣೆಗಳಲ್ಲಿ ಅದು ವ್ಯಕ್ತವಾಗುತ್ತದೆ. (2013: ಪು ಸಂ 42 ಮತ್ತು 47).

ಬುಡಕಟ್ಟು ಮಹಿಳೆಯರಲ್ಲಿ ಪ್ರಸ್ತುತ ಸಮಾಜದಲ್ಲಿ ಗಂಡು-ಹೆಣ್ಣು ಮಕ್ಕಳು ಎನ್ನುವ ತಾರತಮ್ಯ ಕುಟುಂಬದಲ್ಲಿಲ್ಲ. ಶಿಕ್ಷಣ ಉದ್ಯೋಗ ಸಮಾನವಾಗಿ ಗಂಡು ಹೆಣ್ಣು ಮಕ್ಕಳಿಗೆ ಲಭ್ಯವಾಗಬೇಕು. ಹಾಗೇ ಹೆಣ್ಣು ಮಕ್ಕಳಿಗೆ 21 ರ ವಯಸ್ಸಿನ ನಂತರವೇ ವಿವಾಹ ಮಾಡುವುದು, ಅವರ ಆರೋಗ್ಯದ ದೃಷ್ಟಿಯಿಂದ ಉತ್ತಮ ಎನ್ನುವ ಅರಿವು ಇದೆ. ಇದರೊಂದಿಗೆ ಮಕ್ಕಳ ಶಿಕ್ಷಣ ಅಂಕಪಟ್ಟಿಯ ಕುರಿತು ಬುಡಕಟ್ಟು ಮಹಿಳೆಯರು ಗಮನಿಸುತ್ತಾರೆ. ಹೆತ್ತವರು ಮತ್ತು ಶಿಕ್ಷಕರ ಸಭೆಗೆ ಹೆಚ್ಚಾಗಿ ಬುಡಕಟ್ಟು ಮಹಿಳೆಯರು ಹಾಜರಾಗುತ್ತಾರೆ.

ದಕ್ಷಿಣ ಕನ್ನಡ ಬುಡಕಟ್ಟು ಕುಟುಂಬಗಳಲ್ಲಿ ಹೆಣ್ಣು ಋತುಮತಿಯಾದಾಗ ಈಗಲೂ ಗ್ರಾಮೀಣ ಪ್ರದೇಶಗಳಲ್ಲಿ ಅವರವರ ಆರ್ಥಿಕ ಶಕ್ತಿಗೆ ಅನುಗುಣವಾಗಿ ಆಚರಿಸುತ್ತಾರೆ. ಹಾಗೂ ಹೆಚ್ಚಿನ ಬುಡಕಟ್ಟು ಮಹಿಳೆಯರು ದೈವ ದೇವರುಗಳಿಗೆ ಸಂಬಂಧಿಸಿದಂತೆ ಋತುಮತಿಯಾಗುವ ಹೆಣ್ಣು ಅಸ್ಪೃಶ್ಯಳು ಎಂದು ಅಭಿಪ್ರಾಯಪಡುತ್ತಾರೆ.

ಸ್ವಸಹಾಯ ಸಂಘಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಮಹಿಳೆಯರಲ್ಲಿ ಋತುಮತಿಯಾಗುವುದರ ಕುರಿತಂತೆ ಹಾಗೂ ಋತುಬಂಧದ ಕುರಿತಂತೆ ಮಾಹಿತಿಯ ಜ್ಞಾನವಿದೆ. ಅಲ್ಪಸಂಖ್ಯಾತ ಬುಡಕಟ್ಟು ಮಹಿಳೆಯರು ಈ ಕುರಿತಾಗಿ ತಮ್ಮ ಹೆಣ್ಣು ಮಕ್ಕಳಿಗೆ ಮಾಹಿತಿಯನ್ನು ನೀಡಿದ್ದಾರೆ. 39% ಮಹಿಳೆಯರು ಋತುಮತಿಯಾಗುವ ದೈಹಿಕ ಸಮಸ್ಯೆಗಳಿಗೆ

ಮನೆ ಮದ್ದನ್ನು ಅವಲಂಬಿಸಿದ್ದಾರೆ. 57% ಮಹಿಳೆಯರಿಗೆ ಮುಟ್ಟಿನ ಹಾಗೂ ಅದರ ಹಿಂದಿನ ದಿನಗಳಲ್ಲಾಗುವ ಮಾನಸಿಕ ಸಮಸ್ಯೆಗಳ ಕುರಿತು ಅರಿವಿಲ್ಲದೇ ಇರುವುದು ಸ್ಪಷ್ಟವಾಗಿದೆ. ಹಾಗೂ ಅತಿ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರಿಗೆ ಋತುಬಂಧದ ಸಮಸ್ಯೆಗಳಿಲ್ಲ ಎಂದು ಸ್ಪಷ್ಟವಾಗಿದೆ.

ಹೆಚ್ಚಿನ ಬುಡಕಟ್ಟು ಮಹಿಳೆಯರು ಹೆರಿಗೆಗಾಗಿ ಸರಕಾರಿ ಆಸ್ಪತ್ರೆಯ ಪ್ರಯೋಜನ ಪಡೆದುಕೊಳ್ಳುತ್ತಿದ್ದು, ಹೆರಿಗೆಯ ನಂತರ ಹೆಚ್ಚಾಗಿ ಒಂದು ತಿಂಗಳು ಮನೆಯಮದ್ದು ಮತ್ತು ಆಹಾರದ ಔಷಧಿ ಸೇವಿಸುತ್ತಾರೆ. ಹೆಚ್ಚಿನ ಬುಡಕಟ್ಟು ಮಹಿಳೆಯರು ಹೆರಿಗೆಯ ನಂತರ ಎರಡರಿಂದ ಮೂರು ತಿಂಗಳು ವಿರಾಮವನ್ನು ತೆಗೆದುಕೊಳ್ಳುತ್ತಾರೆ. ಅರ್ಧಕ್ಕಿಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ಪತಿಯೊಂದಿಗೆ ಚರ್ಚಿಸಿ ಕುಟುಂಬ ಯೋಜನೆಯ ಕುರಿತಾದ ನಿರ್ಧಾರ ತೆಗೆದುಕೊಳ್ಳುತ್ತಾರೆ. ಅತ್ಯಂತ ಹೆಚ್ಚಿನ ಸಂಖ್ಯೆಯ ಬುಡಕಟ್ಟು ಮಹಿಳೆಯರಿಗೆ ಋತುಬಂಧದ ಕುರಿತಾಗಿ ಸಮಸ್ಯೆಗಳಿಲ್ಲ ಎನ್ನುವುದು ಗಮನಿಸಬಹುದಾಗಿದೆ.

ಬುಡಕಟ್ಟು ಮಹಿಳೆಯರ ಆರೋಗ್ಯ ಸ್ಥಿತಿಯೂ ಉತ್ತಮವಾಗಿಲ್ಲ. ನಿಸರ್ಗದತ್ತವಾಗಿ ಸಿಗುತ್ತಿದ್ದ ಆಹಾರವನ್ನು ಸೇವಿಸುತ್ತಿದ್ದ ಬುಡಕಟ್ಟು ಮಹಿಳೆಯರು ಈಗ ಪೇಟೆ ಪಟ್ಟಣಗಳಲ್ಲಿ ಸಿಗುವ ಆಹಾರ ಸಾಮಾಗ್ರಿಗಳನ್ನು ಅವಲಂಬಿಸಿರುವುದು, ಇದು ಮುಖ್ಯವಾಹಿನಿಯ ಮಹಿಳೆಯರಂತೆ ಆರೋಗ್ಯದ ಮೇಲೆ ಪರಿಣಾಮ ಬೀರಿದೆ. ರಕ್ತಹೀನತೆ, ಕ್ಷಯ, ಚರ್ಮರೋಗ ಇತ್ಯಾದಿಗಳು ಸಾಮಾನ್ಯವಾಗಿವೆ. ಸಮತೂಕದ ಆಹಾರದ ಅರಿವಿನ ಕೊರತೆಯೊಂದಿಗೆ ಹಾಲು ಹಣ್ಣಿನ ಉಪಯೋಗದ ಕೊರತೆಯೂ ಆರೋಗ್ಯದತ್ತ ಪರಿಣಾಮ ಬೀರಿದೆ.

ಬುಡಕಟ್ಟು ಮಹಿಳೆಯರ ಆರೋಗ್ಯಕ್ಕೂ ಆರ್ಥಿಕ ಸ್ಥಿತಿ ಗತಿಗೂ ನೇರ ಸಂಬಂಧವಿರುವುದನ್ನು ಗಮನಿಸಬಹುದಾಗಿದೆ. ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರು ಬೀಡಿ ಕಟ್ಟುವ ಕಸುಬನ್ನು ಅವಲಂಬಿಸಿದ್ದು ಒಟ್ಟು ಕುಟುಂಬ ಆದಾಯ ಮಾಸಿಕ ಸರಾಸರಿ 5,450 ಆಗಿರುತ್ತದೆ. ಇಲ್ಲಿ ಮರಾಠಿ ನಾಯ್ಕ ಸಮುದಾಯದ ಮಹಿಳೆಯರು ಆರ್ಥಿಕವಾಗಿ ಮುನ್ನಡೆ ಸಾಧಿಸುತ್ತಿದ್ದು ಕೊರಗ ಸಮುದಾಯದ ಮಹಿಳೆಯರ ಆರ್ಥಿಕ ಸ್ಥಿತಿ ತೀರಾ ಹಿಂದುಳಿದಿದೆ.

ಅಲ್ಪಸಂಖ್ಯೆಯ ಬುಡಕಟ್ಟು ಮಹಿಳೆಯರ ಹೆಸರಿನಲ್ಲಿ ಸ್ವಂತ ಭೂಮಿಯಿದೆ. ೮೦%ರಷ್ಟು ಮಹಿಳೆಯರಲ್ಲಿ ಭೂಮಿಯ ಒಡೆತನ ಇಲ್ಲದೇ ಇರುವುದು ಅಧ್ಯಯನದಿಂದ ತಿಳಿದುಬಂದಿದೆ. ಬುಡಕಟ್ಟು ಕುಟುಂಬಗಳಲ್ಲಿ ಸ್ವಂತ ನೀರಿನ ಸೌಲಭ್ಯದ ಕೊರತೆಯೂ ಇದ್ದು ಕೃಷಿಯಲ್ಲಿ ತೊಡಗಿಸಿಕೊಳ್ಳದೇ ಇರಲು ಇದೂ ಒಂದು ಕಾರಣವಾಗಿದೆ.

ಸ್ವಉದ್ಯೋಗದಲ್ಲಿ ತೊಡಗಿಸಿಕೊಂಡಿರುವ ಮಹಿಳೆಯರ ಸಂಖ್ಯೆಯೂ ಅತೀ ಕಡಿಮೆ ಇದೆ. ಅತ್ಯಂತ ಹೆಚ್ಚಿನ ಬುಡಕಟ್ಟು ಮಹಿಳೆಯರಲ್ಲಿ ತಮ್ಮ ಔದ್ಯೋಗಿಕ ಭವಿಷ್ಯ ಜೀವನದ ಕುರಿತು ಹೆಚ್ಚಿನ ಯೋಚನೆಗಳಿಲ್ಲದೇ ಇರುವುದು, ಬುಡಕಟ್ಟು ಸಮುದಾಯವು ಇದ್ದುದರಲ್ಲೇ ತೃಪ್ತಿ ಪಡುವ ಅಂಶವನ್ನು ಸ್ಪಷ್ಟಪಡಿಸುತ್ತದೆ.

ಮನೆಗೆ ಬೇಕಾಗುವ ವಸ್ತುಗಳನ್ನು ಖರೀದಿ ಮಾಡುವಲ್ಲಿ ಬುಡಕಟ್ಟು ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರ್ಯವಿದ್ದು, ಮನೆಯ ಒಳಗೆ ಸರಳವಾದ ಅಡುಗೆಗೆ ಉಪಯೋಗಿಸುವ ಸಾಮಾಗ್ರಿಗಳಿವೆ. ಸರಳವಾದ ಆಸನಗಳು, ಒಳಗಡೆ ಸರಳ ಪಾತ್ರೆ, ತಟ್ಟೆಗಳು ಹಾಗೂ ಕೆಲವು ಮನೆಗಳಲ್ಲಿ ಮಾತ್ರವೇ ಅಡಿಗೆಗೆ ವಿದ್ಯುತ್ ಚಾಲಿತ ಉಪಕರಣಗಳಿವೆ.

ಪ್ರಕೃತಿ ಆರಾಧನೆಯೊಂದಿಗೆ ತೃಪ್ತರಾಗಿದ್ದ ಬುಡಕಟ್ಟು ಸಮುದಾಯ ಇಂದು ಮುಖ್ಯವಾಹಿನಿಯ ಜನರಂತೆ ಜಾತಿವ್ಯವಸ್ಥೆಯ ದೇವರುಗಳನ್ನು ಆರಾಧಿಸಲು ಪ್ರಾರಂಭಿಸಿದ್ದಾರೆ.

ಅನೇಕ ಬುಡಕಟ್ಟು ಮನೆಗಳಲ್ಲಿ ದೈವಗಳ ಆರಾಧನೆಯೊಂದಿಗೆ ಶ್ರೀ ರಾಮ, ಕೃಷ್ಣ, ಸತ್ಯನಾರಾಯಣ ಹಾಗೂ ಇನ್ನಿತರ ದೇವರುಗಳ ಭಾವಚಿತ್ರಗಳಿವೆ. ಹಾಗೂ ಮದುವೆ ಇನ್ನಿತರ ಕಾರ್ಯಕ್ರಮಗಳಿಗೆ ಹೊರಗಿನಿಂದ ಪೂಜೆ ನೆರವೇರಿಸಲು ಪುರೋಹಿತರನ್ನು ಆಹ್ವಾನಿಸುತ್ತಾರೆ.

ಹೆಚ್ಚಿನ ಮನೆಗಳಲ್ಲಿ ದೂರದರ್ಶನ ಸೌಲಭ್ಯವಿದೆ. ಆಧುನಿಕ ಯುಗದ ಸಂವಹನ ಸೌಲಭ್ಯವಾದ ಮೊಬೈಲ್‌ಗಳ ಉಪಯೋಗ ಇದೆ. ಮಹಿಳೆಯರು ಪೇಟೆಗೆ ಹೋಗಿ ಬರುವುದರಿಂದಲೂ ಪೇಟೆಗೆ ಹತ್ತಿರವಿರುವ ಪ್ರದೇಶದಲ್ಲಿ ಬುಡಕಟ್ಟು ಮಹಿಳೆಯರು ವಾಸಿಸುವುದರಿಂದಲೂ ಉಡುಪುಗಳಲ್ಲಿ ಮಹತ್ತರ ಬದಲಾವಣೆಗಳಾಗಿವೆ. ಸಲ್ವಾರ್ ಕಮೀಜ್, ರಾತ್ರಿಯ ಉಡುಪುಗಳು, ಬುಡಕಟ್ಟು ಮಹಿಳೆಯರಲ್ಲಿ ಈಗ ಪ್ರಿಯವಾಗಿವೆ.

ತಮ್ಮದೇ ಆಹಾರ ಪದ್ಧತಿ ರೂಢಿಸಿಕೊಂಡು ಬುಡಕಟ್ಟುಗಳ ಜನರು ಈಗ ಹೊರ ಪ್ರಪಂಚದ ಪ್ರಭಾವದಿಂದಾಗಿ ಹೋಟೇಲುಗಳಲ್ಲಿ ತಯಾರಿಸಿದ ಆಹಾರವನ್ನು ತಿನ್ನಲು ಪ್ರಾರಂಭಿಸದ್ದಾರೆ. ವಿಶೇಷವಾಗಿ ಕುಡುಬಿ ಮಹಿಳೆಯರು ತಮ್ಮ ಮಕ್ಕಳು ಹೊರಗಡೆ ಮಾಂಸಾಹಾರ, ಮೀನು ಇತ್ಯಾದಿಗಳನ್ನು ಸೇವಿಸಲು ಪ್ರಾರಂಭಿಸಿದ್ದಾರೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬುಡಕಟ್ಟುಗಳಲ್ಲಿ ಆಧುನಿಕ ಜಗತ್ತಿನ ಪ್ರಭಾವದಿಂದ ಪುರುಷರು ಮತ್ತು ಮಹಿಳೆಯರಲ್ಲಿ ಮದ್ಯಪಾನ, ಗುಟ್ಕಾ, ತಂಬಾಕು ಸೇವನೆಯಂಥ ಕೆಟ್ಟ ಚಟಗಳ ಅಭ್ಯಾಸಗಳು ಇರುವುದನ್ನು ಅವಲೋಕಿಸಲಾಗಿದೆ. ಮದ್ಯಸೇವನೆಯಿಂದ ಮನೆಗಳಲ್ಲಿ ಹೆಂಗಸರ ಮೇಲೆ ದೌರ್ಜನ್ಯ ನಡೆಸುವುದೂ ಅಲ್ಲಲ್ಲಿ ಕಂಡುಬರುತ್ತದೆ.

ಒಟ್ಟಿನಲ್ಲಿ ಸಮಾಜದಲ್ಲಿ ಸಂಸ್ಕೃತಿ ಎಂದಿಗೂ ಚಲನಶೀಲವಾಗಿರುವುದರಿಂದ ಬುಡಕಟ್ಟು ಸಮುದಾಯದಲ್ಲಿ ಸಂಸ್ಕೃತಿ ಬದಲಾಗುತ್ತಿರುವುದು ಸಹಜವಾಗಿದೆ. ಈ ದೃಷ್ಟಿಯಲ್ಲಿ ಆದಿವಾಸಿಗಳು ತಮ್ಮದೇ ಆದ ಧನಾತ್ಮಕವಾದ ಕೆಲವು ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರಲ್ಲಿ ಅನೇಕ ತೊಡಕುಗಳನ್ನು ಕಾಣಬಹುದು.

ಬುಡಕಟ್ಟು ಸಮುದಾಯವು ಹೊಂದಿರುವ ಅಸ್ಮಿತೆಯು(Identity) ಅವುಗಳ ಭೌಗೋಳಿಕ ನಿವೇಶನ, ಅವು ಹೊಂದಿರುವ ಸಂಸ್ಕೃತಿ, ಇತ್ಯಾದಿಗಳ ವೈಶಿಷ್ಟ್ಯದಿಂದ ನಿರ್ಮಾಣವಾಗಿರುತ್ತದೆ. ಇವುಗಳ ಮಹತ್ವದಲ್ಲಿ ಮಾತ್ರ ರೂಪಾಂತರವಾಗದೆ ಇವುಗಳ ಅಸ್ಮಿತೆಯಲ್ಲೂ ಪರಿವರ್ತನೆ ಕಾಣುತ್ತದೆ. ಬುಡಕಟ್ಟಿನ ಜನರು ಸಾಮಾನ್ಯವಾಗಿ ಗುಡ್ಡ, ಅರಣ್ಯಗಳಲ್ಲಿ ವಾಸ ಮಾಡುತ್ತಿರುತ್ತಾರೆ. ಅವರ ಜೀವನ ನಿರ್ವಹಣೆಯು ಸಾಧ್ಯವಾದಷ್ಟು ಮಟ್ಟಿಗೆ ಪ್ರಕೃತಿಗೆ ತೀರಾ ನಿಕಟವಾಗಿರುತ್ತದೆ. ಸರಳವಾಗಿರುತ್ತದೆ. ಪರಂಪರೆಯ ಹಿಡಿತವು ಅವರ ಮೇಲೆ ಬಲಿಷ್ಠವಗಿರುತ್ತದೆ.

ಬುಡಕಟ್ಟು ಸಮುದಾಯವು ಅನ್ಯ ಸಮುದಾಯಗಳೊಡನೆ ನಿಕಟವಾದ ಸಂಪರ್ಕವನ್ನು ಇರಿಸಿಕೊಳ್ಳಲು ಹೆಚ್ಚು ಅಪೇಕ್ಷೆಯನ್ನು ಹೊಂದಿರುವುದಿಲ್ಲ. ಅದಕ್ಕೆ ಆತುರವನ್ನು ತೋರುವುದಿಲ್ಲ. ಅನ್ಯರ ಜೀವನ ಕ್ರಮಗಳನ್ನು ಅಂಗೀಕರಿಸಲು ಸಿದ್ಧವಾಗಿರುವುದಿಲ್ಲ. ಸಾಮಾನ್ಯವಾಗಿ ಗುಂಪುಗಳಲ್ಲಿ ವಲಸೆ ಹೋಗುತ್ತಾರೆ. ಹೋದಂತೆ ತಮ್ಮ ಅಸ್ಮಿತೆಯನ್ನು ಕಾಪಾಡಿಕೊಂಡು ಬರುತ್ತಾರೆ. ಅನ್ಯ ಸಾಂಸ್ಕೃತಿಕ ವಲಯದಲ್ಲಿ ನೆಲೆಸಿದಾಗಲಂತೂ ಅವರ

ಪರಂಪರೆಯು ಇನ್ನೂ ಬಲಿಷ್ಠವಾಗುವುದುಂಟು. ಹೀಗಾಗಿ ಅವರು ಎಲ್ಲಿಯಾದರೂ ವಲಸೆ ಹೋದರೆ ಅಲ್ಲಿನ ಜೀವನ ಪ್ರವಾಹದಲ್ಲಿ ಗ್ರಾಮೀಣ ಜನರಂತೆ ಅವರು ಸರಳವಾಗಿ ಬೆರೆಯುವುದಿಲ್ಲ.

ಬುಡಕಟ್ಟು ಮಹಿಳೆಯರ ಸಬಲೀಕರಣದ ಕುರಿತು ದೃಷ್ಟಿಹಾಯಿಸುವುದಾದರೆ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳಿಗೆ ಸಶಕ್ತೀಕರಣ ಎನ್ನುವುದು ತಕ್ಷಣದ ಪರಿಹಾರವಲ್ಲ.

ಭಿನ್ನ ಸಾಮಾಜಿಕ, ಆರ್ಥಿಕ ಪರಿಸರಗಳನ್ನು ಎದುರಿಸುತ್ತಿರುವಂತಹ ಮಹಿಳೆಯರ ಬದುಕಿನ ಅವಶ್ಯಕತೆಗಳು, ಪ್ರಾಧಾನ್ಯತೆಗಳೂ ಬೇರೆ ಬೇರೆಯೇ ಆಗಿರುತ್ತವೆ. ಜೀವನಾವಶ್ಯಕತೆಗಳ ಪೂರೈಕೆಗಾಗಿಯೇ ದಿನನಿತ್ಯದ ಸಂಘರ್ಷವನ್ನು ಎದುರಿಸಬೇಕಾಗಿರುವ ಮಹಿಳೆಯರಿಗೆ ಪೌಷ್ಠಿಕ ಆಹಾರ, ಪರಿಶುದ್ಧ ಕುಡಿಯುವ ನೀರು, ಪ್ರಾಥಮಿಕ ಶಿಕ್ಷಣ, ಪ್ರಾಥಮಿಕ ಆರೋಗ್ಯ ಸೇವೆಗಳು, ಆದಾಯ ಗಳಿಕೆಗೆ ಅವಕಾಶಗಳು ಇವೇ ಸಶಕ್ತೀಕರಣದ ಪ್ರಥಮ ಮೆಟ್ಟಿಲುಗಳಾದರೆ ಈಗಾಗಲೇ ಈ ಅನುಕೂಲಗಳನ್ನು ಹೊಂದಿದವರಿಗೆ ಅವರ ಶಿಕ್ಷಣ ಮಟ್ಟದಲ್ಲಿ, ಉದ್ಯೋಗದಲ್ಲಿ ಅಥವಾ ಇತರ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಅರಸಲು ಮೇಲ್ಮುಖ ಚಲನೆಯನ್ನು ಪಡೆಯಲು ಇನ್ನೂ ಹೆಚ್ಚಿನ ಅವಕಾಶಗಳನ್ನು ಪಡೆಯುವುದು ಸಶಕ್ತೀಕರಣವೆನಿಸಬಹುದು.

ಎಲ್ಲಕ್ಕಿಂತ ಹೆಚ್ಚಾಗಿ ದೌರ್ಜನ್ಯರಹಿತ ಸಮಾಜದ ಸೃಷ್ಟಿಯೂ ಸಶಕ್ತೀಕರಣದ ಆದ್ಯತೆಗಳಲ್ಲಿ ಒಂದಾಗಬೇಕಿದೆ. ಸಶಕ್ತೀಕರಣವೆನ್ನುವುದು ನಿರಂತರ ಪ್ರಕ್ರಿಯೆ. ಸಶಕ್ತೀಕರಣದ ಕನಸು ಸಾಕಾರವಾಗುವುದನ್ನು ಮಹಿಳೆಯರಿಗೆ ತಮ್ಮ ಬದುಕಿನ ಕುರಿತಂತೆ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುವಲ್ಲಿ ಹಾಗೂ ಬದುಕು ಮುನ್ನಡೆಯಬೇಕಾದ ಹಾದಿಯನ್ನು ಆಯ್ಕೆ ಮಾಡಿಕೊಳ್ಳಲು ಪೂರಕವಾದ ವಾತಾವರಣ ನಿರ್ಮಾಣವಾದಾಗ ಮಾತ್ರ. ಇಂತಹ ವಾತಾವರಣದ ಕೊರತೆಯನ್ನು ಪ್ರಸ್ತುತ ಅಧ್ಯಯನದ ಆಧಾರದಲ್ಲಿ ಕಂಡುಕೊಳ್ಳಲಾಗಿದೆ.

ಮಾರ್ಕ್ಸ್‌ವಾದದ ಪ್ರಕಾರ ಸಬಲೀಕರಣ ಪ್ರಕ್ರಿಯೆಯನ್ನು ಆರ್ಥಿಕ ನೆಲೆಯಲ್ಲಿ ಗುರುತಿಸಲಾಗಿದೆ. ಅಂದರೆ ಕೆಳವರ್ಗದ ಜನರು ಆರ್ಥಿಕ ಸ್ವಾವಲಂಬಿಗಳಾದರೆ ಸಬಲರಾಗುವರೆಂಬ ಗ್ರಹಿಕೆ ಇದ್ದು ಹಣದಿಂದ ಮಾತ್ರ ಜನರು ಸಬಲರಾಗುವರೇ ಎನ್ನುವುದು ಮಾರ್ಕ್ಸ್‌ವಾದದ ಇತಿಮಿತಿಯಾಯಿತು.

ಬಡತನ ಕೇವಲ ಆರ್ಥಿಕ ಸಮಸ್ಯೆ ಮಾತ್ರವಲ್ಲದೆ ಇತರ ಅಂಶಗಳೊಂದಿಗೆ ಸಂಬಂಧವಿರುವುದು ಕಂಡುಬಂದು ಸಬಲೀಕರಣದ ಪರಿಕಲ್ಪನೆಯ ವ್ಯಾಪ್ತಿ ಬೆಳೆದು ಅದು ವೈಯಕ್ತಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯವೆನ್ನುವ ಆಯಾಮ ಪಡೆದುಕೊಂಡಿತು. ಅಂದರೆ ಅದು ಬಹುಮುಖಿ ಪ್ರಕ್ರಿಯೆಯಾಗಿ ಪರಿಗಣಿಸಲ್ಪಟ್ಟಿತು. ಈ ದಿಶೆಯಲ್ಲಿ ಸೈದ್ಧಾಂತಿಕವಾಗಿ ಗುರುತಿಸಲ್ಪಟ್ಟವರು ಬ್ರೆಜಿಲ್‌ನ ಶಿಕ್ಷಣ ತಜ್ಞ ಪೌಲೋಪ್ರೇರಿಯವರು. ಇವರು ಸಬಲೀಕರಣ ಚಳುವಳಿಯ ಮೂಲ ಪುರುಷ ಮಾತ್ರವಲ್ಲದೇ ವಯಸ್ಕರ ಶಿಕ್ಷಣ, ಶೋಷಿತರ ಶಿಕ್ಷಣ ಹಾಗೂ ಭಾರತದ ಔಪಚಾರಿಕ ಶಿಕ್ಷಣ ಕ್ರಮವನ್ನು ಅಧ್ಯಯನ ಮಾಡಿ ಅದಕ್ಕೆ **ಠೇವಣಿ ಶಿಕ್ಷಣ** ಎಂದು ಹೆಸರಿತ್ತರು. ಡೆಸ್ಮೆಂಡ್ ಡಿ. ಅಬೇರೋ ಅವರು ಪೌಲೋಪ್ರೇರಿಯವರು ಮಂಡಿಸಿದ ದುರ್ಬಲ ವರ್ಗದವರ ಅರಿವಿನ ಶಿಕ್ಷಣದ ಸಿಧ್ಧಾಂತದ ಕುರಿತಾದ ತನ್ನ ಅಧ್ಯಯನದಲ್ಲಿ ಹೀಗೆ ಪ್ರಸ್ತಾಪಿಸಿದ್ದಾರೆ. ಪೌಲೇಪ್ರೇರಿಯವರು ಸಬಲೀಕರಣ ಪ್ರಕ್ರಿಯೆಯಲ್ಲಿ ಎರಡು ಮುಖ್ಯ ಆಯಾಮಗಳನ್ನು ಗುರುತಿಸುತ್ತಾರೆ. ಒಂದು **"ಅಡ್ಡಿ ಆತಂಕಗಳ ಅನುಭವ ಮತ್ತು ಅರಿವು"**, ಎರಡನೇ ಹಂತ **"ವಿವೇಚಿತ ಕ್ರಿಯೆ"**. ಅರಿವಿನ ಜಾಗೃತಿಯಲ್ಲಿ ಸಾಮಾಜಿಕ, ರಾಜಕೀಯ, ಮತ್ತು ಆರ್ಥಿಕ ತಡೆಗಳನ್ನು ಗ್ರಹಿಸುವುದು ಮತ್ತು ಅವುಗಳ ವಿರುದ್ಧ ಕಾರ್ಯಮಗ್ನರಾಗಿ ತಮ್ಮ ಬದುಕನ್ನು ರೂಪಿಸುವ, ಸಾಮಾಜಿಕ ವೈಷಮ್ಯಗಳ ಆಳವಾದ ಅರಿವು ಪಡೆಯುವುದು, ಅರಿವಿನ ಜಾಗೃತಿ. ಇದೊಂದು ಹೊಸ ಚಿಂತನೆ. ಇದು ಜಾತಿ, ವರ್ಗ, ಭಾಷೆ ಮತ್ತು ಲಿಂಗದ ಆಧಾರದಲ್ಲಿ ಮಾಡಿದ ಯಾವುದೇ ತಾರತಮ್ಯವನ್ನು ಗುರುತಿಸುತ್ತದೆ.

ಅರಿವಿನ ಜಾಗೃತಿಯ ಮೂಲಕ ಜನರು ಎಚ್ಚೆತ್ತು ಸಮಾಜದಲ್ಲಿನ ತಮ್ಮ ಪಾತ್ರವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ ಅದನ್ನು ಪುನರ್ ರಚಿಸಲು ವಿವೇಚನೆಯಿಂದ ಕಾರ್ಯಮಗ್ನರಾಗುವುದು **"ಸಬಲೀಕರಣ ಪ್ರಕ್ರಿಯೆ"**.

**ಸಬಲೀಕರಣವು ಒಟ್ಟಿನಲ್ಲಿ ನಾಲ್ಕು ಅಂಶಗಳನ್ನು ಒಳಗೊಂಡಿದೆ.**

1) ಅಶಕ್ತರು ತಮ್ಮ ಪರಿಸ್ಥಿತಿ ಅರ್ಥಮಾಡಿಕೊಳ್ಳುವುದು ಹಾಗೂ ಅದರ ಪ್ರಭಾವವನ್ನು ತಿಳಿದುಕೊಳ್ಳುವುದು

2) ಸ್ವಸಾಮರ್ಥ್ಯ ಮತ್ತು ಕೌಶಲ್ಯಗಳನ್ನು ಉಪಯೋಗಿಸಿ ತಮ್ಮ ಬದುಕಿನ ಮೇಲೆ ಹಿಡಿತ ಸಾಧಿಸುವುದು.

3) ಇತರರ ಹಕ್ಕುಗಳಿಗೆ ತೊಂದರೆ ಕೊಡದೆ ಸಾಮಾಜಿಕ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವುದು

4) ಸಂವಾದ ಮತ್ತು ಸಹಭಾಗಿತ್ವದಿಂದ ಸಂಘಟಿತರಾಗಿ ಸಮುದಾಯದ ಸಬಲೀಕರಣಕ್ಕಾಗಿ ದುಡಿಯುವುದು. ಪೌಲೋಪ್ರೇರಿಯವರ ಪ್ರಕಾರ ಸಬಲೀಕರಣವೆಂದರೆ ಪರಾವಲಂಬನೆಯಿಂದ ಸ್ವಾವಲಂಬನೆಯ ಕಡೆಗೆ, ಅರಿವಿನ ಕೊರತೆಯಿಂದ ವಿಮರ್ಶೆಯ ಚಿಂತನೆಯತ್ತಾ ಸಾಗುವುದು.

ಪೌಲೋಪ್ರೇರಿಯವರು ಮುನುಷ್ಯರಲ್ಲಿ ಮತ್ತು ಸಮುದಾಯದಲ್ಲಿ ಮೂರು ಹಂತದ ಅರಿವು (**Consciousness**) ಇದೆ ಎಂದು ಗುರುತಿಸುತ್ತಾರೆ.

**ಮೊದಲನೆಯದು ಮಾಯಾ ಪ್ರಜ್ಞೆ (Magical Consciousness)** ಈ ಹಂತದಲ್ಲಿ ಮನುಷ್ಯರ ಪ್ರಯತ್ನಗಳು ಕೇವಲ ಮೂಲಭೂತ ಅವಶ್ಯಕತೆಗಳಾದ ನಿದ್ರೆ, ನೀರುಗಳ ಪೂರೈಕೆಗೆ ಮತ್ತು ಹಸಿವನ್ನು ನೀಗಿಸುವಿಕೆಗೆ ಸೀಮಿತವಾಗಿರುತ್ತದೆ. ಈ ಹಂತದಲ್ಲಿ ಸಮಸ್ಯೆಗಳಾದರೆ ಅವ್ಯಕ್ತ ಶಕ್ತಿಗಳಿಂದ ಅಥವಾ ದೇವರು ಮುನಿಸಿಕೊಂಡಾಗ ಸಮಸ್ಯೆಯಾಗುವುದು ಎಂಬ ಅರಿವು ಇರುತ್ತದೆ. ಈ ಸಮಸ್ಯೆಗಳ ಕುರಿತಾಗಿ ಹೆಚ್ಚು ಯೋಚಿಸುವ ಶಕ್ತಿ ಮುನುಷ್ಯರಲ್ಲಿ ಇರುವುದಿಲ್ಲ. ಈ ಹಂತವನ್ನು ಪೌಲೋಪ್ರೇರಿಯವರು ಆದಿವಾಸಿ ಸಮುದಾಯಕ್ಕೆ (Closed Community) ಹೋಲಿಸಿದ್ದಾರೆ.

**ಎರಡನೆಯ ಹಂತ ಸ್ಥಿತ್ಯಂತರ ಪ್ರಜ್ಞೆ (Transitive Consciousness)** ಇಲ್ಲಿ ಮನುಷ್ಯರಿಗೆ ಸಮಸ್ಯೆಗಳ ಅರಿವಾಗುತ್ತದೆ. ಆದರೆ ಯಾವ ಕಾರಣದಿಂದ ಸಮಸ್ಯೆಗಳು ಉದ್ಭವಿಸಿವೆ ಎನ್ನುವ ಯೋಚನೆ ಮಾನವನಲ್ಲಿರುವುದಿಲ್ಲ. ಸಮಸ್ಯೆಯ ಕಾರಣಗಳನ್ನು ಅರಿತುಕೊಳ್ಳುವ ಶಕ್ತಿ ಇರುವುದಿಲ್ಲ.

**ಮೂರನೆಯ ಹಂತ ಅರಿವಿನ ಜಾಗೃತಿ(Critical Consciousness)** ಈ ಹಂತದಲ್ಲಿ ಮನುಷ್ಯರಿಗೆ ತಮ್ಮ ಸಮಸ್ಯೆಗಳೇನು? ಯಾಕಾಗಿ ಉದ್ಭವಿಸಿವೆ ಆ ಸಮಸ್ಯೆಗಳನ್ನು ಯಾವ ರೀತಿ ಬಗೆಹರಿಸಿಕೊಳ್ಳಬೇಕು. ಎನ್ನುವುದರ ಅರಿವಿನ ಜಾಗೃತಿ ಮೂಡುತ್ತದೆ.(1989 ಪು.ಸಂ.161, 162,163 ಮತ್ತು 323)

ಮೂರನೇ ಜಗತ್ತಿನ ರಾಷ್ಟಗಳನ್ನು ತೆಗೆದುಕೊಂಡರೆ ಅಲ್ಲಿ ಬಡ ಮಹಿಳೆಯರ ಸಶಕ್ತೀಕರಣವು ಮಧ್ಯಮ ಮತ್ತು ಮೇಲುವರ್ಗದ ಮಹಿಳೆಯರ ಸಶಕ್ತೀಕರಣಕ್ಕಿಂತ ಭಿನ್ನವಾಗಿರುತ್ತದೆ. ಬಡಮಹಿಳೆಯರು ಲಿಂಗ, ಜಾತಿ ಮತ್ತು ವರ್ಗದ ತಾರತಮ್ಯಗಳಿಂದ ಹೆಚ್ಚು ದುರ್ಬಲರಾಗಿರುತ್ತಾರೆ. ಕೆಳಜಾತಿ ಮತ್ತು ಕೆಳ ವರ್ಗಕ್ಕೆ ಸೇರಿರುವುದರಿಂದ ಪುರುಷರೊಂದಿಗೆ ತುಳಿತಕ್ಕೆ ಒಳಗಾಗಿ, ಇವೆರಡರ ಜೊತೆ ಲಿಂಗವ್ಯವಸ್ಥೆಯ ಕಾರಣದಿಂದ ತುಳಿತಕ್ಕೊಳಗಾಗುವ ಬಡ ಮಹಿಳೆಯರು ಹೆಚ್ಚು ಅಶಕ್ತರಾಗಿರುತ್ತಾರೆ. ಇಲ್ಲಿ ಕೆಳವರ್ಗದ ಮಹಿಳೆಯರನ್ನು ಸಶಕ್ತಗೊಳಿಸುವುದೆಂದರೆ ಅವರಿಗೆ ಮೂಲಭೂತ ಅಗತ್ಯಗಳ ಪೂರೈಕೆಯಾಗಬೇಕು. ಆದಾಯ ಹೆಚ್ಚಿಸಬೇಕು. ಸಾಕ್ಷರತೆಯ ಮಟ್ಟ ಏರಿಸಬೇಕು. ಆರೋಗ್ಯ ಸುಧಾರಿಸಬೇಕು ಮತ್ತು ಕೌಶಲ್ಯ

ಅಭಿವೃದ್ಧಿಯಾಗಬೇಕು. ಹಾಗೂ ಅವರ ಮೇಲಿರುವ ಕೆಲಸ ಹಾಗೂ ಜವಾಬ್ದಾರಿಯ ಹೊರೆ ಸಡಿಲಗೊಳ್ಳಬೇಕು ಎನ್ನುವುದು ಇಂದಿನ ಆಧುನಿಕ ವಿಚಾರಗಳಾಗಿವೆ. ಆದರೆ ಮಧ್ಯಮ ಮತ್ತು ಮೇಲು ವರ್ಗದ ಮಹಿಳೆಯರನ್ನು ಸಶಕ್ತಗೊಳಸಲು ಅವರ ಮೇಲಿರುವ ಪುರುಷ ಪ್ರಧಾನ ಮೌಲ್ಯಗಳ ಹಿಡಿತ ಸಡಿಲಗೊಳ್ಳಬೇಕು ಎನ್ನುವ ಅಂಶವನ್ನು ಇಲ್ಲಿ ಅವಲೋಕಿಸಬಹುದು.

1980ರ ದಶಕದಲ್ಲಿ ಸಶಕ್ತೀಕರಣ ಪರಿಕಲ್ಪನೆ ಹುಟ್ಟಿಕೊಂಡರೂ ಭಾರತದ ಅಭಿವೃದ್ಧಿ ನೀತಿ ಮತ್ತು ಕಾರ್ಯಕ್ರಮಗಳಲ್ಲಿ ಮಹಿಳಾ ಸಶಕ್ತೀಕರಣದ ಪ್ರಕ್ರಿಯೆ 1970ರ ದಶಕದಲ್ಲೆ ಬೇರುಬಿಟ್ಟಿತು. ಅಭಿವೃದ್ಧಿ ಚಿಂತನೆಯ ದಿಕ್ಕು ಯಾವಾಗ ಕ್ಷಿಪ್ರ ಆರ್ಥಿಕ ಬೆಳವಣಿಗೆಯಿಂದ ಬಡತನ ನಿರ್ಮೂಲನೆ ಮತ್ತು ಜನರಲ್ಲಿ ಸಾಮರ್ಥ್ಯ ಬೆಳೆಸುವ ಕಡೆಗೆ ಬದಲಾಯಿಸಿತೋ, ಆವಾಗಿನಿಂದಲೇ ಮಹಿಳಾ ಸಶಕ್ತೀಕರಣದ ಪ್ರಕ್ರಿಯೆ ಪರೋಕ್ಷವಾಗಿ ಪ್ರಾರಂಭವಾಯಿತು ಎಂದು ಹೇಳಬಹುದು.

ಮಹಿಳಾ ಕಲ್ಯಾಣ, ಲಿಂಗ ಸಮಾನತೆಯ ಸಾಧನೆ, ಮತ್ತು ಮಹಿಳೆಯ ಸ್ಥಾನವನ್ನು ಉತ್ತಮ ಪಡಿಸುವ ಸಲುವಾಗಿ ಅನುಸರಿಸಿದ ನೀತಿ ಕಾರ್ಯಕ್ರಮಗಳ ತಂತ್ರಗಳಲ್ಲೆ ಸಶಕ್ತೀಕರಣವನ್ನು ನೋಡಲಾಗುತ್ತಿತ್ತು. ಆದರೆ ಇವುಗಳಲ್ಲಿ ಮಹಿಳೆಯನ್ನು ಕಲ್ಯಾಣ ಕಾರ್ಯಕ್ರಮಗಳ ಫಲಾನುಭವಿಗಳನ್ನಾಗಿ ನೋಡಲಾಗುತ್ತಿತ್ತು.

1970ರ ದಶಕದ ಅಂತ್ಯ ಭಾಗದಲ್ಲಿ ಮಹಿಳಾ ಅಭಿವೃದ್ಧಿ ನೀತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮಹಿಳೆಯರನ್ನು ಅಭಿವೃದ್ಧಿಯ ಏಜೆಂಟ್ ಆಗಿ ಮತ್ತು ಪಾಲುಗಾರರನ್ನಾಗಿ ಪರಿಗಣಿಸುವ ಕಾರ್ಯ ಪ್ರಾರಂಭವಾಯಿತು. 1990ರ ದಶಕದ ಹೊತ್ತಿಗೆ ಮಹಿಳಾ ಅಭಿವೃದ್ಧಿ ಮತ್ತು ಲಿಂಗಸಮಾನತೆಯ ಚರ್ಚೆಯಲ್ಲಿ ಮಹಿಳಾ ಸಶಕ್ತೀಕರಣವು ಕೇಂದ್ರ ಬಿಂದುವಾಯಿತು.

1960 ಮತ್ತು 1970ರ ದಶಕಗಳಲ್ಲಿ ಮಹಿಳಾ ಕಲ್ಯಾಣಕ್ಕೋಸ್ಕರ ನೀತಿ ಕಾರ್ಯಕ್ರಮಗಳು ಮುಖ್ಯವಾಗಿ ಬಡತನ ನಿರ್ಮೂಲನಾ ಕಾರ್ಯಕ್ರಮಗಳಲ್ಲಿ ಮಹಿಳೆಯರಿಗೆ ಆದ್ಯತೆ ನೀಡಿ, ಅವುಗಳ ಲಾಭ ನೇರವಾಗಿ ಮಹಿಳೆಯರಿಗೆ ತಲುಪುವಂತೆ ಮಾಡಲಾಯಿತು. ಗ್ರಾಮಾಂತರ ಪ್ರದೇಶದಲ್ಲಿ ಮಹಿಳಾ ಮಂಡಳಿಗಳನ್ನು ಸ್ಥಾಪಿಸಿ ಮಹಿಳೆಯರನ್ನು ಸಂಘಟಿಸುವ ಪ್ರಯತ್ನ ನಡೆಯಿತು.

ಎಪ್ಪತ್ತರ ದಶಕದಲ್ಲಿ ಮಹಿಳೆಯರ ಸ್ಥಿತಿಯನ್ನು ಉತ್ತಮಗೊಳಿಸಲು ಅವರ ಶಿಕ್ಷಣ ಮತ್ತು ಆರೋಗ್ಯಕ್ಕೆ ಹೆಚ್ಚಿನ ಗಮನ ನೀಡಲಾಯಿತು. ಕಡ್ಡಾಯ ಮತ್ತು ಉಚಿತ ಶಿಕ್ಷಣ, ಸಾಕ್ಷರತಾ ಆಂದೋಲನ, ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರಾಮುಖ್ಯತೆ. ವಯಸ್ಕರ ಶಿಕ್ಷಣ, ರಾಷ್ಟ್ರೀಯ ಶಿಕ್ಷಣ ನೀತಿ, ಗ್ರಾಮೀಣ ಹೆಣ್ಣು ಮಕ್ಕಳಿಗೆ ಶಿಷ್ಯ ವೇತನ, ಹಾಗೂ ಉಚಿತ ವೃತ್ತಿ ತರಬೇತಿ ಕಾರ್ಯಕ್ರಮಗಳು ಮಹಿಳೆಯರ ಸಾಕ್ಷರತೆ ಮತು ಶಿಕ್ಷಣ ಮಟ್ಟವನ್ನು ಉತ್ತಮ ಪಡಿಸಲು ಸಹಾಯಕವಾದವು.

ಮುಂದೆ ಮಹಿಳೆಯರ ಆರೋಗ್ಯ ಮಟ್ಟ ಸುಧಾರಿಸಲು ಐ.ಸಿ.ಡಿ.ಎಸ್ (Integrated Child Development Scheme) ರಾಷ್ಟ್ರೀಯ ನೀತಿ ಮತ್ತು ಪೌಷ್ಠಿಕ ನೀತಿಯನ್ನು ಅಳವಡಿಸಿಕೊಳ್ಳಲಾಯಿತು. ಮಹಿಳೆಯರ ಅಶಕ್ತತೆಗೆ ಅವರ ಆರ್ಥಿಕ ಪರಾವಲಂಬನೆಯೇ ಮುಖ್ಯ ಕಾರಣ ಎಂದರಿತ ಸರ್ಕಾರ ಮಹಿಳೆಯರ ಆರ್ಥಿಕ ಪರಿಸ್ಥಿತಿ ಉತ್ತಮಪಡಿಸಲು ಅವರ ಉತ್ಪಾದನಾ ಸಾಮರ್ಥ್ಯ ಮತ್ತು ಆದಾಯ ಹೆಚ್ಚಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರನ್ನು ಗುರಿಯಾಗಿಸಿದ (ಟಾರ್ಗೆಟ್) ಗುಂಪಾಗಿ ಪರಿಗಣಿಸಿ ೩೩ಶೇ ಮೀಸಲಾತಿಯನ್ನು ನೀಡಿತು. ಆದಾಯ ಗಳಿಕೆಯ ಗೃಹಾಧಾರಿತ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಯಿತು. ಮಹಿಳಾ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿ ಮಹಿಳಾ ಉದ್ಯಮಿಗಳಿಗೆ ಕೌಶಲ್ಯ ಅಭಿವೃದ್ದಿ ಮತ್ತು ಮಾರುಕಟ್ಟೆ ವ್ಯವಸ್ಥೆ ಮಾಡಿಕೊಟ್ಟಿತು. ರಾಷ್ಟ್ರೀಯ ಮಹಿಳಾ ಕೋಶ, ಮಹಿಳಾ ಸಮೃದ್ಧಿ ಯೋಜನೆ, ಇಂದಿರಾ ಮಹಿಳಾ ಯೋಜನೆ, ಉದ್ಯೋಗಸ್ಥ ಮಹಿಳೆಯರಿಗೆ ವಸತಿ ನಿಲಯ ಇತ್ಯಾದಿ ಕಾರ್ಯಕ್ರಮಗಳನ್ನು ಮಹಿಳೆಯರ ಆರ್ಥಿಕ ಸ್ವಾವಲಂಬನೆಯ ದೃಷ್ಟಿಯಿಂದ ಹಮ್ಮಿಕೊಳ್ಳಲಾಯಿತು.

ಗ್ರಾಮಮಟ್ಟ ಮತ್ತು ಸ್ಥಳೀಯ ರಾಜಕೀಯದಲ್ಲಿ ಮಹಿಳೆಯರ ಪ್ರಾತಿನಿಧ್ಯವನ್ನು ಹೆಚ್ಚಿಸುವ ದೃಷ್ಟಿಯಿಂದ ಶೇ೩೩ ಮೀಸಲಾತಿ ನೀಡಿಕೆಯು ಮಹಿಳೆಯ ರಾಜಕೀಯ ಸಶಕ್ತೀಕರಣಕ್ಕೆ ದಾರಿಯಾಗಿದೆ.

ಮಹಿಳಾ ಸಶಕ್ತೀಕರಣವನ್ನು ನೇರವಾದ ಗುರಿಯಾಗಿಟ್ಟುಕೊಂಡು ಭಾರತ ಸರ್ಕಾರ ಅಂತರ ರಾಷ್ಟ್ರೀಯ ಸಂಸ್ಥೆಯೊಂದಿಗೆ **'ಮಹಿಳಾ ಸಮಖ್ಯ'** ಎಂಬ ಕಾರ್ಯಕ್ರಮವನ್ನು ಕಳೆದ ಹತ್ತು ವರ್ಷಗಳಿಂದ ದೇಶದ ಕೆಲವು ರಾಜ್ಯಗಳಲ್ಲಿ ನಡೆಸುತ್ತಿದೆ. ಅಂತರಾಷ್ಟ್ರೀಯ

ಮಹಿಳಾ ವರ್ಷ (1975) ಅಂತರಾಷ್ಟ್ರೀಯ ಮಹಿಳಾ ದಶಕ (1976- 1986) ಅಂತರಾಷ್ಟ್ರೀಯ ಹೆಣ್ಣು ಮಗು ವರ್ಷ (1991) ಮತ್ತು ದಶಕ ಆಚರಣೆ (1991 – 2000) ಮಹಿಳೆಯರ ಪರವಾಗಿ ನೀತಿ ಮತ್ತು ಸಮಿತಿಗಳ ರಚನೆ (1974) ಮಹಿಳಾ ಸಶಕ್ತೀಕರಣದ ರಾಷ್ಟ್ರೀಯ ನೀತಿ 2001, ಇತ್ಯಾದಿಗಳು ಮಹಿಳೆಯರ ಸಶಕ್ತೀಕರಣಕ್ಕೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕೊಡುಗೆ ನೀಡಿದೆ.

ಭಾರತದಲ್ಲಿ ಇಷ್ಟೆಲ್ಲಾ ನೀತಿ ಕಾರ್ಯಕ್ರಮಗಳು ಮತ್ತು ಮಹಿಳಾ ಪರ ಕಾಳಜಿಗಳು ಬೆಳೆದಿದ್ದರೂ ಮಹಿಳೆಯರ ಸ್ಥಾನವನ್ನು ಸೂಚಿಸುವ ಅಂಕಿ ಅಂಶಗಳನ್ನು ನೋಡಿದರೆ ಅವರಿನ್ನೂ ಸಂಪೂರ್ಣವಾಗಿ ಸಶಕ್ತಗೊಂಡಿಲ್ಲ ಅನ್ನುವುದನ್ನು ತೋರಿಸುತ್ತದೆ.

ಪರಿಪೂರ್ಣ ಸಶಕ್ತತೆ ಎನ್ನುವುದು ಪ್ರಕ್ರಿಯೆಯಾದುದರಿಂದ ಇದನ್ನು ತಲುಪಲು ಸಮಯ ಬೇಕಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಜೀವನವು ವಿವಿಧ ಘಟಕ, ಸಂಸ್ಥೆ ಮತ್ತು ಸಮುದಾಯಗಳೊಂದಿಗೆ ಬೆರೆತು, ಬೆಳೆಯುತ್ತ ಹೋಗುತ್ತದೆ. ಕುಟುಂಬ ಪ್ರಾರಂಭಿಕ ಘಟಕ, ಆದುದರಿಂದ ಸಶಕ್ತೀಕರಣ ಪ್ರಕ್ರಿಯೆ ಕುಟುಂಬದಿಂದ ಆರಂಭವಾಗಬೇಕು. ಗೃಹಕೆಲಸದಲ್ಲಿರುವ ಕಟ್ಟು ನಿಟ್ಟಿನ ಲಿಂಗಾಧಾರಿತ ಶ್ರಮವಿಭಜನೆಯನ್ನು ಹೋಗಲಾಡಿಸಿ ಪುರುಷ ಮಹಿಳೆಯರಿಬ್ಬರೂ ಮನೆಕೆಲಸ ಹಂಚಿಕೊಂಡು ಮಾಡಬೇಕು.

ಮಹಿಳೆಯರ ವಿಕಸನದ ದೃಷ್ಟಿಯಿಂದ ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹಿಸಬೇಕು. ಹೆಣ್ಣು ಮಕ್ಕಳ ಶಾಲೆ ಬಿಡುವಿಕೆಯನ್ನು ನಿಯಂತ್ರಿಸಬೇಕು. ಆರ್ಥಿಕ ಕ್ಷೇತ್ರದಲ್ಲೂ ಸಶಕ್ತೀಕರಣ ಪ್ರಕ್ರಿಯೆ ವಿವಿಧ ರೂಪಗಳಲ್ಲಿ ನಡೆಯಬೇಕಿದೆ.

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳಾ ವಿಷಯಗಳು, ಲಿಂಗ ಕಾಳಜಿಗಳು ಸಮಗ್ರಗೊಳ್ಳಬೇಕೆಂದರೆ ಮತ್ತು ಮಹಿಳೆಯರು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಸಶಕ್ತರಾಗಬೇಕೆಂದರೆ ಔಪಚಾರಿಕ ರಾಜಕೀಯ ಪ್ರಕ್ರಿಯೆಯಲ್ಲಿ ಅವರ ಭಾಗವಹಿಸುವಿಕೆ ಹೆಚ್ಚಾಗಬೇಕು. ಅಂದರೆ ಮತದಾರರಾಗಿ, ಚುನಾವಣಾ ಅಭ್ಯರ್ಥಿಯಾಗಿ ಅವರ ಸಂಖ್ಯೆ ಹೆಚ್ಚಾಗಬೇಕು. ನಿರ್ಧಾರ ಕೈಗೊಳ್ಳುವ ಸ್ಥಾನಗಳಲ್ಲಿ ಅವರಿಗೆ ಸೂಕ್ತ ಪ್ರಾತಿನಿಧ್ಯ ಸಿಗಬೇಕು.

ಮಹಿಳೆಯ ಅಶಕ್ತತೆಗೆ ಕಾರಣವಾಗಿರುವ ಮಹಿಳಾ ದೌರ್ಜನ್ಯಗಳು ಕಡಿಮೆಯಾಗಬೇಕು. ಮಹಿಳಾ ವಿರೋಧಿಯಾಗಿರುವ ನಮ್ಮ ಸಾಮಾಜಿಕ ಕಟ್ಟುಪಾಡುಗಳು, ನಂಬಿಕೆಗಳು ಮತ್ತು ಆದರ್ಶಗಳನ್ನು ಹೋಗಲಾಡಿಸಬೇಕು.

ಒಂದು ಪರಿಕಲ್ಪನೆಯಾಗಿ ಸಶಕ್ತೀಕರಣವು ಎಲ್ಲಾ ವರ್ಗ ಮತ್ತು ಗುಂಪಿನ ಮಹಿಳೆಯರಿಗೆ ಅನ್ವಯವಾಗುತ್ತದೆ. ಆದರೆ ಪ್ರಕ್ರಿಯೆಯಾಗಿ ವಿವಿಧ ಗುಂಪಿನ ಮಹಿಳೆಯರಿಗೆ ವಿವಿಧ ತಂತ್ರಗಳು, ವಿಧಾನ, ಆಯಾಮಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಆಯಾ ದೇಶ, ಧರ್ಮ, ಜಾತಿ, ವರ್ಗ, ಪ್ರದೇಶ ಮತ್ತು ಜನಾಂಗೀಯ ಮಹಿಳೆಯರಿಗೆ ತಕ್ಕಂತೆ ತಂತ್ರ ಮತ್ತು ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಉದಾಹರಣೆಗೆ ಮೂರನೇ ಜಗತ್ತಿನ ಮಹಿಳೆಯರ ಪರಿಸ್ಥಿತಿ, ಸ್ಥಾನ, ಸಮಸ್ಯೆಗಳ ಸ್ವರೂಪ, ಮೊದಲ ಜಗತ್ತಿನ ಮಹಿಳೆಯರಿಗಿಂತ ಭಿನ್ನವಾಗಿರುತ್ತದೆ. ಇಲ್ಲಿ ಬಡತನ, ಅಧಿಕವಾಗಿದ್ದು ಬಡತನದ ಸ್ತ್ರೀಕರಣವಾಗುತ್ತದೆ. ಮಹಿಳಾ ಸಾಕ್ಷರತೆ ಕಡಿಮೆಯಿದ್ದು ದುಡಿಮೆ ಅಗೋಚರವಾಗಿರುತ್ತದೆ. ಪುರುಷ ಪ್ರಧಾನತೆಯ ನಿಯಂತ್ರಣ ಮತ್ತು ಸಮುದಾಯದ ಮೌಲ್ಯಗಳು ಪ್ರಬಲವಾಗಿರುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಮಹಿಳಾ ಸಶಕ್ತೀಕರಣದ ಅಳವಡಿಕೆಯ ಅಗತ್ಯ ಹೆಚ್ಚಾಗಿರುತ್ತದೆ.

ಬುಡಕಟ್ಟು ಮಹಿಳೆಯರ ಸಬಲೀಕರಣದ ಪ್ರಕ್ರಿಯೆಯನ್ನು ಗಮನಿಸುವುದಾದರೆ ಹೆಚ್ಚಿನ ಮಹಿಳೆಯರು ಕುಟುಂಬದ ಇತರರೊಂದಿಗೆ ಸೇರಿ ಮನೆಯ ಮುಖ್ಯ ಚಟುವಟಿಕೆಯಲ್ಲಿ ನಿರ್ಧಾರ ತೆಗೆದುಕೊಳ್ಳುತ್ತಾರಾದರೂ, ಜೊತೆಯಲ್ಲಿ ನಿರ್ಧಾರ ತೆಗೆದುಕೊಳ್ಳಲು ಪುರುಷರನ್ನು ಸಹ ಅವಲಂಬಿಸಿದ್ದಾರೆ. ಹೆಚ್ಚಿನ ಮಹಿಳೆಯರು ಸಾಮಾಜಿಕ ಚಟುವಟಿಕೆಗಳಲ್ಲಿ ಸ್ವತಂತ್ರರಾಗಿದ್ದು ಮಹಿಳೆಯರ ಸ್ವ ಇಚ್ಛೆಗೆ ಪುರುಷರು ಗೌರವಿಸುತ್ತಾರೆ.

ಮುಖ್ಯವಾಹಿನಿಯ ಮಹಿಳೆಯರಂತೆಯೇ ಮನೆಯೊಳಗಿನ ಕೆಲಸ ನಿರ್ವಹಣೆಯು ಬುಡಕಟ್ಟು ಮಹಿಳೆಯರಿಗೆ ಸೇರಿದೆ. ಹಾಗೂ ಅಡಿಗೆ ಕೆಲಸದ ಒತ್ತಡವಿದೆ. ಅತಿ ಹೆಚ್ಚಿನ ಬುಡಕಟ್ಟು ಮಹಿಳೆಯರು ತಮ್ಮ ವೈಯಕ್ತಿಕ ಸಮಸ್ಯೆಗಳನ್ನು ತಮ್ಮ ಪತಿಯಂದಿರಲ್ಲಿ ಹಂಚಿಕೊಳ್ಳುತ್ತಾರೆ. ಬುಡಕಟ್ಟು ಮಹಿಳೆಯರ ಹೆಚ್ಚಿನ ದುಡಿಮೆಯ ಸಂಪಾದನೆಯು ಮನೆ ಖರ್ಚಿನ ನಿರ್ವಹಣೆಗೆ ಸೇರುವುದನ್ನು ಗಮನಿಸಿದಾಗ ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿನ ಅವಳ ಮಹತ್ವದ ಪಾತ್ರವನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. ಹಾಗೂ ದುಡಿಮೆಯ ಹಣದಲ್ಲಿ ತನಗಿಷ್ಟವಾದ ವಸ್ತುಗಳನ್ನು ಖರೀದಿಸುವಲ್ಲಿ ಬುಡಕಟ್ಟು ಮಹಿಳೆ ಸ್ವತಂತ್ರಳು.

ಅತ್ಯಂತ ಹೆಚ್ಚಿನ ಮಹಿಳೆಯರು ಸ್ವಸಹಾಯ ಸಂಘದಲ್ಲಿ ಸದಸ್ಯತನ ಹೊಂದಿದ್ದು, ವಿವಿಧ ಕಾರಣಗಳಗೋಸ್ಕರ ಸಾಲ ಪಡೆದುಕೊಂಡಿದ್ದು, ಸಂಘಗಳು ಪ್ರಯೋಜನ ಕಾರಿಯಾಗಿರುವುದು ಹಣದ ಸಹಕಾರಕ್ಕೆ ಎನ್ನುವ ಅರಿವನ್ನು ಹೊಂದಿರುತ್ತಾರೆ. ಅತೀ ಕಡಿಮೆ ಬುಡಕಟ್ಟು ಮಹಿಳೆಯರು ರಾಜಕೀಯ ಮತ್ತು ಇತರ ಸಂಘಸಂಸ್ಥೆಗಳ ಸದಸ್ಯತ್ವ ಪಡೆದುಕೊಂಡಿದ್ದಾರೆ. ಸ್ವಸಹಾಯ ಸಂಘಗಳಲ್ಲಿ ಉಳಿತಾಯದ ಹವ್ಯಾಸವನ್ನು ಬೆಳೆಸಿಕೊಂಡ ಬುಡಕಟ್ಟು ಮಹಿಳೆಯರು ಇದಕ್ಕೆ ಸಂಬಂಧಿಸಿದಂತೆ ತಾವೇ ನಿರ್ಧಾರ ತೆಗೆದುಕೊಳ್ಳುತ್ತಾರೆ.

ಸಬಲೀಕರಣದ ಗುಣಾತ್ಮಕ ಸೂಚಿಗಳಗೂ, ಪ್ರಸ್ತುತ ದಕ್ಷಿಣ ಕನ್ನಡದ ಬುಡಕಟ್ಟು ಮಹಿಳೆಯರ ಸಬಲೀಕರಣ ಪ್ರಕ್ರಿಯೆಯನ್ನು ತುಲನೆ ಮಾಡಿದರೆ, ಆರ್ಥಿಕ ಸ್ವಾವಲಂಬನೆ, ಮುಕ್ತ ಸಂಚಾಲನೆ, ಸಂಘಟನೆ ಮತ್ತು ಮಹಿಳಾ ಗುಂಪುಗಳಲ್ಲಿ ಸದಸ್ಯತ್ವ ಪಡೆಯುವಿಕೆ, ನಿರ್ಧಾರ ಕೈಗೊಳ್ಳುವ ಹಕ್ಕು, ಖರೀದಿಯ ಸ್ವಾತಂತ್ರ್ಯ ಕುಟುಂಬದೊಳಗೆ ಲಿಂಗ ಸಮಾನತೆ ಈ ಅಂಶಗಳಲ್ಲಿ ಬುಡಕಟ್ಟು ಮಹಿಳೆ ಪರಿಸ್ಥಿತಿಯ ಒತ್ತಡದಿಂದಾಗಿ ಸಶಕ್ತಳು ಎಂದು ಒಪ್ಪಿಕೊಳ್ಳಬಹುದು.

ಆದರೆ ಆತ್ಮವಿಶ್ವಾಸ, ಆತ್ಮಗೌರವ, ಸ್ವಅರಿವು, ಅಭಿವ್ಯಕ್ತ ಪಡಿಸುವಿಕೆ, ಪರಿಸ್ಥಿತಿಯ ಅರಿವು, ಆರೋಗ್ಯ, ಪೌಷ್ಠಿಕತೆ, ಹಕ್ಕು ಮತ್ತು ಕರ್ತವ್ಯ, ಕಾನೂನುಗಳು, ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳು, ಕಡಿಮೆ ಕೆಲಸದ ಹೊರೆ ಮತ್ತು ವಿರಾಮದ ಸಮಯ ಹೊಂದಿರುವುದು, ಕುಟುಂಬದೊಳಗಿನ ಪಾತ್ರ ಮತ್ತು ಜವಾಬ್ದಾರಿಯ ಬದಲಾವಣೆ, ಆಸ್ತಿ ಕೊಂಡುಕೊಳ್ಳುವ ಮತ್ತು ಮಾರಾಟ ಮಾಡುವ ಹಕ್ಕು, ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದು, ಜ್ಞಾನ ಮಾಹಿತಿ ಮತ್ತು ಕೌಶಲ್ಯಗಳನ್ನು ಹೊಂದಿರುವುದರ ಅಂಶಗಳನ್ನು ಕುರಿತಂತೆ ಬುಡಕಟ್ಟು ಮಹಿಳೆಯರು ಸಶಕ್ತರು ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಸಬಲೀಕರಣದ ಪರಿಮಾಣಾತ್ಮಕ ಸೂಚಿಗಳಲ್ಲಿ ವಿವಾಹ ವಯಸ್ಸಿನ ಏರಿಕೆ, ಮಹಿಳೆಯರ ಆರೋಗ್ಯ ಮತ್ತು ಪೌಷ್ಟಿಕತೆಯ ಮಟ್ಟ ಉತ್ತಮವಾಗಿರುವುದು, ಸರ್ಕಾರದ ಕಾರ್ಯಕ್ರಮಗಳ ಫಲಾನುಭವಿಗಳಾಗಿರುವುದು, ಮಹಿಳೆಯರ ಸಾಕ್ಷರತೆಯ ಮಟ್ಟ ಹೆಚ್ಚಾಗುವುದು, ಸ್ಥಳೀಯ ಸರ್ಕಾರ ಅಥವಾ ರಾಜಕೀಯ ಪಕ್ಷಗಳ ಸದಸ್ಯರಾಗಿ ಸರ್ಕಾರದಲ್ಲಿ ಜನರ ಪ್ರತಿನಿಧಿಯಾಗಿ ಕೆಲಸ ಮಾಡುವುದು, ಸಂಘಟಿತ ಕ್ಷೇತ್ರದಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ಹೆಚ್ಚಾಗುವುದು ಹಾಗೂ ಮಹಿಳೆಯರ ಮೇಲಿನ ದೌರ್ಜನ್ಯ ಕಡಿಮೆಯಾಗುವುದು

ಇತ್ಯಾದಿಗಳನ್ನು ಬುಡಕಟ್ಟು ಮಹಿಳೆಯರಿಗೆ ಹೋಲಿಸಿದಾಗ ಇವೆಲ್ಲದರ ಕೊರತೆ ಬುಡಕಟ್ಟು ಮಹಿಳೆಯರಲ್ಲಿ ಪ್ರತಿಬಿಂಬಿಸುತ್ತದೆ.

ಬುಡಕಟ್ಟು ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಗಳಾದರೂ, ದುಡಿಮೆಯ ಗಳಿಕೆ ಅಲ್ಪಪ್ರಮಾಣದಲ್ಲಿ ಇರುವುದರಿಂದ ಕುಟುಂಬವು ಆರ್ಥಿಕವಾಗಿ ಕೆಳಮಟ್ಟದಲ್ಲಿದೆ. ಶಿಕ್ಷಣದ ಹಾಗೂ ಪೂರಕ ಕೌಶಲ್ಯಗಳ ಕೊರತೆ, ಬುಡಕಟ್ಟು ಮಹಿಳೆಯರಿಗೆ ಉತ್ತಮ ಉದ್ಯೋಗಾವಕಾಶ ನೀಡುವಲ್ಲಿ ತಡೆಯುಂಟು ಮಾಡಿದೆ. ಇದರಿಂದಾಗಿ ಸ್ವ ಅರಿವಿನಲ್ಲೂ ಕೊರತೆಯನ್ನು ಕಾಣಬಹುದಾಗಿದೆ.

ಅಭಿವೃದ್ಧಿ ಹೊಂದುತ್ತಿರುವ ರಾಷ್ಟಗಳ ಬುಡಕಟ್ಟು ಕುಟುಂಬಗಳಲ್ಲಿ, ಕುಟುಂಬದ ನಿರ್ವಹಣೆಯ ಜವಾಬ್ದಾರಿ ಸಂಪೂರ್ಣ ಮಹಿಳೆಯರ ಮೇಲಿರುತ್ತದೆ ಎನ್ನುವ ಮಾತು ಬುಡಕಟ್ಟು ಮಹಿಳೆಯರಿಗೂ ಅನ್ವಯವಾಗುತ್ತದೆ.

ಮೂಲಭೂತ ಅಗತ್ಯತೆಗಳಾದ ಆಹಾರ, ಬಟ್ಟೆ, ವಸತಿ, ಆದಾಯ, ಶಿಕ್ಷಣ, ಆರೋಗ್ಯ, ಆರೈಕೆ, ಕುಡಿಯುವ ನೀರು, ಶೌಚಾಲಯ, ಎರವಲು ಮುಂತಾದವುಗಳನ್ನು ಹೊಂದಲು ಹೋರಾಡುತ್ತಿರುವ ಈ ಸಮುದಾಯಗಳಿಗೆ ಇವುಗಳನ್ನು ಮೊದಲು ಪೂರೈಸುವುದು ಸಬಲೀಕರಣದ ಮೊದಲ ಹಂತವಾಗುತ್ತದೆ. ಮೂಲಭೂತ ಅವಶ್ಯಕತೆಗಳ ಪೂರೈಕೆಯೊಂದಿಗೆ ಪುರುಷ ಪ್ರಧಾನ ಮೌಲ್ಯಗಳನ್ನು ಸಡಿಲಗೊಳಿಸುವುದು, ಸಾಮಾಜಿಕ ಪ್ರತ್ಯೇಕತೆಯನ್ನು ಹೋಗಲಾಡಿಸುವುದು, ಪುರುಷ ಮತ್ತು ಮಹಿಳೆಯರಿಬ್ಬರಲ್ಲೂ ಲಿಂಗ ಸೂಕ್ಷ್ಮತೆ ಬೆಳೆಸುವುದು, ಆರ್ಥಿಕ ಸ್ವಾವಲಂಬನೆ ಸಿಗುವುದು, ಲಿಂಗಾಧಾರಿತ ಶ್ರಮವಿಭಜನೆ ಹೋಗಲಾಡಿಸುವುದರ ಮೂಲಕ ಸಶಕ್ತತೆಯನ್ನು ತಲುಪಲು ಸಾಧ್ಯವಿದೆ. ಇದು ನಿಧಾನ ಪ್ರಕ್ರಿಯೆಯಾದರೂ ಪೂರ್ಣ ಪ್ರಮಾಣದ ಸಶಕ್ತತೆ ಸಾಧ್ಯವಾಗುತ್ತದೆ,

ಇತ್ತೀಚಿನ ವರದಿಗಳ ಪ್ರಕಾರ (25-10-2013 ವಿಜಯ ಕರ್ನಾಟಕ) ಭಾರತಕ್ಕೆ ಲಿಂಗಸಮಾನತೆಯಲ್ಲಿ 101ನೇ ಸ್ಥಾನ ಲಭಿಸಿರುವುದು ಲಿಂಗ ಸೂಕ್ಷ್ಮತೆಯ ಅರಿವಿನ ಕೊರತೆ ಸಮಾಜದಲ್ಲಿ ಸ್ಪಷ್ಟವಾಗುತ್ತದೆ.

"ಬಡ ಹಾಗೂ ಕೆಳ ವರ್ಗದ ಮಹಿಳೆಯರ ಸಬಲೀಕರಣ ತಾನಾಗಿಯೇ ಆಗುವುದಿಲ್ಲ. ಹೊರಗಿನಿಂದ ಸರ್ಕಾರದ ಹಾಗೂ ಸರ್ಕಾರೇತರ ಸಂಘಸಂಸ್ಥೆಗಳ ಮಧ್ಯ

ಪ್ರವೇಶದ ಅಗತ್ಯವಿದೆ. ಮಹಿಳೆಯರ ಸಶಕ್ತೀಕರಣದ ಸೃಷ್ಟಿಯಿಂದಲೇ ಮೂಲಭೂತ ಅಗತ್ಯತೆಗಳನ್ನು ಪೂರೈಸುವುದು ಸರ್ಕಾರದ ಕರ್ತವ್ಯವಾದರೆ, ಅದಕ್ಕೆ ಬೆಂಬಲವಾಗಿ ಕುಟುಂಬ, ಶಿಕ್ಷಣ, ಉದ್ಯೋಗ ಹಾಗೂ ಅಭಿವೃದ್ಧಿ ಸಂಸ್ಥೆಗಳು ಕೆಲಸ ಮಾಡಬೇಕಾಗುತ್ತದೆ". ಎನ್ನುವ ಹೇಮಲತಾ ಎಚ್ ಎಂ ಅವರ ಅಭಿಪ್ರಾಯವನ್ನು (ಮಹಿಳಾ ಸಶಕ್ತೀಕರಣ 2003: ಪುಸಂ 35 ಮತ್ತು 36) ಇಲ್ಲಿ ಸ್ವೀಕರಿಸಬಹುದಾಗಿದೆ.

ಕಾರ್ಲ್‌ಮಾರ್ಕ್ಸ್ ಮತ್ತು ಏಂಗೆಲ್ಸ್ ಅವರ ಪ್ರಕಾರ, ಆದಿವಾಸಿ ಸಮುದಾಯಗಳಲ್ಲಿ ಸಾಮಾಜಿಕ ವರ್ಗಗಳಿಲ್ಲ. ಬದಲಾಗಿ ರಕ್ತ ಸಂಬಂಧಗಳಿಗೆ ಮಹತ್ವವಿದೆ. ಬೇಟೆಯಾಡುವುದು ಪುರುಷರ ಕೆಲಸವಾಗಿದ್ದರೆ, ಮನೆ ನಿರ್ವಹಣೆ ಮಹಿಳೆಯರ ಜವಾಬ್ದಾರಿಯಾಗಿತ್ತು. ಶ್ರಮ ವಿಭಜನೆ ಆದಿವಾಸಿಗಳಲ್ಲಿ ಸ್ವಾಭಾವಿಕವಾಗಿತ್ತು. ಜನಸಂಖ್ಯೆ ಹೆಚ್ಚಾದಂತೆ, ಗುಲಾಮ ಸಂಸ್ಕೃತಿ ಪ್ರಾರಂಭವಾಗಿ ಖಾಸಗಿ ಆಸ್ತಿಯ ಪರಿಕಲ್ಪನೆಗೆ ಕಾರಣವಾಯಿತು. ಆದಿವಾಸಿಗಳಿಂದ ಸ್ವಾವಲಂಬಿಯ ಜೀವನ ದೂರವಾಗಿ ಕುಟುಂಬ ನಿರ್ವಹಣೆಗೆ ಮಹಿಳಾ ದುಡಿಮೆಯು ಅನಿವಾರ್ಯವಾಯಿತು.

1972-73ರಲ್ಲಿ ಒಟ್ಟು 54.5% ಪುರುಷರು ಗ್ರಾಮೀಣ ಪ್ರದೇಶದಲ್ಲಿ ದುಡಿಯುವವರಿದ್ದರೆ 31.8% ಮಹಿಳೆಯರಿದ್ದು, 2004-05 ರಲ್ಲಿ 54.6% ಪುರುಷ ದುಡಿಮೆಗಾರರಿದ್ದು ಪೂರಕವಾಗಿ 32.7% ಮಹಿಳಾ ವರ್ಗ ದುಡಿಮೆಗಾರರನ್ನು ಗಮನಿಸಿದರೆ ಗ್ರಾಮೀಣ ಪ್ರದೇಶದಲ್ಲಿ ಮಹಿಳಾ ದುಡಿಮೆಗಾರರು ಹೆಚ್ಚುತ್ತಿದ್ದಾರೆ ಎಂದು ಅರ್ಥೈಸಿಕೊಳ್ಳಬಹುದು.

ಇತ್ತೀಚಿನ ಅಂಕಿಅಂಶಗಳ ಪ್ರಕಾರ ನಗರ ಪ್ರದೇಶದಲ್ಲಿ 73% ಮುಸ್ಲಿಂ ಮಹಿಳೆಯರು ಮತ್ತು 55% ಹಿಂದು ಮಹಿಳೆಯರು ಸ್ವ ಉದ್ಯೋಗಿಗಳಾಗಿದ್ದಾರೆ. 45% ದಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಸೇರಿದ ಮಹಿಳೆಯರು ದಿನಗೂಲಿಗಳಾಗಿ ಹಾಗೂ ಈ ಪ್ರಮಾಣ ಮುಸ್ಲಿಂ ಮಹಿಳೆಯರಲ್ಲಿ 20% ಹಾಗೂ ಹಿಂದೂ ಮಹಿಳೆಯರಲ್ಲಿ 15%ದಷ್ಟಿದೆ ಎಂದು ವರದಿಗಳು ಪ್ರಸ್ತುತಪಡಿಸಿವೆ.

1981 ರಲ್ಲಿ 11% ದಷ್ಟು ಮಹಿಳೆಯರು ಕೇಂದ್ರ, ರಾಜ್ಯ ಮತ್ತು ಸ್ಥಳೀಯ ಸರ್ಕಾರಿ ಸಂಸ್ಥೆಗಳಲ್ಲಿ ಉದ್ಯೋಗಿಗಳಾಗಿದ್ದು, 2004 ರಲ್ಲಿ ಈ ಪ್ರಮಾಣ 18.5% ಕ್ಕೆ ಏರಿದೆ. (ಮೂಲ : ನಿರ್ದೇಶನಾಲಯ ಉದ್ಯೋಗ ಮತ್ತು ತರಬೇತಿ – ಕಾರ್ಮಿಕ ಸಚಿವಾಲಯ

ನವದೆಹಲಿ) ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ 72ನೇ ಮತ್ತು 74ನೇ ಸಂವಿಧಾನಾತ್ಮಕ ತಿದ್ದುಪಡಿ 1993 ರ ಪ್ರಕಾರ 1995 ರಲ್ಲಿ 318 ಮಹಿಳೆಯರಿದ್ದರೆ 630 ಪುರುಷ ಸದಸ್ಯರಿದ್ದು, 2001 ರಲ್ಲಿ ಪುರುಷ ಸದಸ್ಯರು 1997ರಷ್ಟಿದ್ದು ಮಹಿಳಾ ಸದಸ್ಯರ ಸಂಖ್ಯೆ 725 ರಷ್ಟಿತ್ತು.

ಈ ಮೇಲಿನ ಅಂಕಿಅಂಶಗಳು ಗುಜರಾತ್, ಹರಿಯಾಣ, ಕರ್ನಾಟಕ, ಕೇರಳ, ಮಧ್ಯಪ್ರದೇಶ, ಪಂಜಾಬ್, ರಾಜಸ್ಥಾನ, ತ್ರಿಪುರ ಮತ್ತು ಪಶ್ಚಿಮ ಬಂಗಾಳ ಹೀಗೆ ಒಂಭತ್ತು ರಾಜ್ಯಗಳಿಗೆ ಹೋಲಿಸಿ ಕೊಡಲ್ಪಟ್ಟಿದೆ. ಆದರೂ ಮಹಿಳೆಯುರ ಮತ್ತು ಪುರುಷರು ಸಮಪ್ರಮಾಣದಲ್ಲಿರುವ ನಮ್ಮ ದೇಶದಲ್ಲಿ ಮಹಿಳಾ ಭಾಗವಹಿಸುವಿಕೆಯು ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಕಡಿಮೆ ಎಂದು ಅರ್ಥೈಸಿಕೊಳ್ಳಬಹುದು.

ಭಾರತದ ಚುನಾವಣಾ ಆಯೋಗದ ಅಂಕಿಅಂಶದಂತೆ 1999ರಲ್ಲಿ ಪಾರ್ಲಿಮೆಂಟಿನಲ್ಲಿ ಪ್ರತಿನಿಧಿಸಿರುವ ಒಟ್ಟು ಸದಸ್ಯರ ಸಂಖ್ಯೆ 790 ಆಗಿದ್ದು ಇದರಲ್ಲಿ ಮಹಿಳೆಯರು ಕೇವಲ 67. 2001 ರಲ್ಲಿ ಒಟ್ಟು 820 ಪ್ರತಿನಿಧಿಗಳಲ್ಲಿ 750 ಪುರುಷರು, ಹಾಗೂ ಕೇವಲ 70 ಮಾತ್ರ ಮಹಿಳೆಯರು ಪಾರ್ಲಿಮೆಂಟನ್ನು ಪ್ರತಿನಿಧಿಸಿರುವುದು ಒಟ್ಟು ರಾಜಕೀಯ ವ್ಯವಸ್ಥೆಯಲ್ಲಿ ಮಹಿಳಾ ಪ್ರಾತಿನಿದ್ಯದ ಕೊರತೆಯನ್ನು ಸ್ಪಷ್ಟಪಡಿಸುತ್ತದೆ.

ಈ ಎಲ್ಲಾ ಅಂಕಿಅಂಶಗಳನ್ನು ಗಮನಿಸಿದಾಗ ಎಲ್ಲಾ ಕ್ಷೇತ್ರಗಳಲ್ಲೂ ಮಹಿಳಾ ಭಾಗವಹಿಸುವಿಕೆಯ ಕೊರತೆ ಸ್ಪಷ್ಟವಾಗುತ್ತದೆ. ಇದನ್ನು ವಿಶ್ಲೇಷಿಸಿದರೆ ಅಲ್ಪ ಸಂಖ್ಯೆಯಲ್ಲಿರುವ ಬುಡಕಟ್ಟು ಮಹಿಳೆಯರ ಭಾಗವಹಿಸುವಿಕೆ ತೀರಾ ಕಡಿಮೆ ಎಂದು ತಿಳಿದುಕೊಳ್ಳಬಹುದಾಗಿದೆ.

ಆದ್ದರಿಂದ ಸಬಲೀಕರಣ ಎನ್ನುವ ಪರಿಕಲ್ಪನೆಯನ್ನು ಪ್ರಸ್ತುತ ಬುಡಕಟ್ಟು ಮಹಿಳೆಗೆ ಅನ್ವಯಿಸಿ ವಿಶ್ಲೇಷಿಸುವುದು ಸವಾಲಾಗಿದೆ. ದಿನವಿಡೀ ದುಡಿತದೊಂದಿಗೆ ತೊಡಗಿಸಿಕೊಂಡು ದೈನಂದಿನ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಶ್ರಮ ಪಡುತ್ತಿರುವ ಸಮುದಾಯಗಳಿಗೆ **"ಸಬಲೀಕರಣ"** ಎನ್ನುವುದು ಹೊಸ ವಿಷಯ ಹಾಗೂ ಇದು ಹೊರ ಸಮಾಜದ ಪರಿಕಲ್ಪನೆಯಾದುದರಿಂದ ಬುಡಕಟ್ಟು ಮಹಿಳೆಯರು ಇದನ್ನು ಅರ್ಥೈಸಿಕೊಳ್ಳುವುದು ಪ್ರಸ್ತುತ ದಿನಗಳಲ್ಲಿ ಕಷ್ಟವಿದೆ.

ಬುಡಕಟ್ಟು ಮಹಿಳೆಯರು ಸ್ವತಃ ಸಶಕ್ತತೆಯ ಪರಿಕಲ್ಪನೆಯನ್ನು ಅರ್ಥೈಸಿಕೊಂಡು ಸಬಲೀಕರಣದ ಉದ್ದೇಶಕ್ಕಾಗಿ ತನ್ನ ಪಾತ್ರವೇನು ಎನ್ನುವ ಸ್ವಅರಿವು ಮತ್ತು

ಸಬಲೀಕರಣದ ಪ್ರಕ್ರಿಯೆ, ಗುಣಾತ್ಮಕ ಸೂಚಿಗಳು ಹಾಗೂ ಮಜಲುಗಳನ್ನು ಅರಿಯುವುದೇ ನಿಜವಾದ ಸಬಲೀಕರಣ. ಹೊರ ಸಮಾಜವು ಬುಡಕಟ್ಟು ಮಹಿಳೆಯರನ್ನು ಸಬಲರೇ ಇಲ್ಲವೇ ಎಂದು ಗುರುತಿಸುವುದಕ್ಕಿಂತಲೂ ಬುಡಕಟ್ಟು ಮಹಿಳೆಯೇ ಅದನ್ನು ಗುರುತಿಸಲು ಸಾಧ್ಯವಾಗುವುದು ನಿಜವಾದ ಸಬಲೀಕರಣ. ತಾನು ಸಬಲಳು ಎಂದು ಗುರುತಿಸಲು ಸಾಧ್ಯವಾಗುವ ಹಂತವೇ ಬುಡಕಟ್ಟು ಮಹಿಳೆಯರ ಸಬಲೀಕರಣ ಎಂದು ಅರ್ಥೈಸಿಕೊಳ್ಳಬಹುದು.

ಸಾಮಾನ್ಯವಾಗಿ ಅಭಿವೃದ್ಧಿ ಎಂದರೆ ಬೃಹತ್ ಅಣೆಕಟ್ಟುಗಳು, ನೀರಾವರಿ ಯೋಜನೆಗಳು, ವಸತಿಗಳು, ಶೌಚಾಲಯಗಳು, ಸಾಕ್ಷರತಾ ಯೋಜನೆಗಳು ಇತ್ಯಾದಿ. ಇದಕ್ಕೆ ಸಂಬಂಧಿಸಿದಂತೆ ಅಭಿವೃದ್ಧಿಯತ್ತ ಸಾಗುವ ನಿಟ್ಟಿನಲ್ಲಿ, ಅಡವಿಯಲ್ಲಿ ಸ್ವಾವಲಂಬಿಗಳಾಗಿದ್ದ ಬುಡಕಟ್ಟುಗಳನ್ನು ನಾಡಿಗೆ ತಂದಿಟ್ಟ ಪರಿಣಾಮವಾಗಿ ಇವರ ಬದುಕು ಅತಂತ್ರವಾಯಿತು. ಜಾಗತೀಕರಣದ ಪರಿಣಾಮವಾಗಿ ಇಂದು ವಿದೇಶದ ಹಣ ಹಲವು ಯೋಜನೆಗಳಿಗೆ ಖರ್ಚಾಗುತ್ತದೆ. ಆದರೆ ಅಣೆಕಟ್ಟಿನಿಂದ ಹರಿಯುವ ನೀರು, ವಿದ್ಯುತ್ ಆಗಲಿ ಬೇಕಾಗಿರುವುದು ಬುಡಕಟ್ಟುಗಳಿಗಲ್ಲ. ಶ್ರಮಿಕರಿಗಲ್ಲ. ಅವೆಲ್ಲವೂ ಬೇಕಾಗಿರುವುದು ಬಂಡವಾಳಶಾಹಿ ಭೂಮಾಲಿಕರಿಗೆ. ಈ ಕಾರಣಗಳಿಂದಲೇ ದೇಶದಲ್ಲಿ 80%ದಷ್ಟು ಇದ್ದ ಅರಣ್ಯ 20%ಕ್ಕೆ ಇಳಿದಿದೆ.

ಒಂದೆಡೆ ಬುಡಕಟ್ಟು ಸಂಸ್ಕೃತಿಯ ಕುರಿತು ಹೆಮ್ಮೆ ಪಡುವ ನಾವು ಬುಡಕಟ್ಟುಗಳನ್ನು ಅಭಿವೃದ್ಧಿಯತ್ತ ಸಾಗಬೇಕಾದರೆ ಅವರು ತಮ್ಮ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯನ್ನು ಅವಲಂಬಿಸಬೇಕು ಎಂದರೆ ಅವರ ಉತ್ಪಾದನಾ ವ್ಯವಸ್ಥೆಯೊಂದಿಗೆ ಅವರ ಸಾಂಸ್ಕೃತಿಕ ವಿಚಾರಗಳನ್ನು ಬಿಡಬೇಕಾಗುತ್ತದೆ. ಸಾಂಸ್ಕೃತಿಕ ಜಗತ್ತು ದೂರವಾದರೆ ಅನನ್ಯತೆಯ ವಿಚಾರ ಇಲ್ಲಿ ಗೌಣವಾಗುತ್ತದೆ. ವೆರಿಯರ್ ಎಲ್ವಿನ್ ಹೇಳುವಂತೆ "ಅಭಿವೃದ್ಧಿಯ ಶುಷ್ಕ ಆಸ್ಥಿಗಳು ಪ್ರೀತಿಯಿಂದ, ಸ್ಫೂರ್ತಿಗೆಂದು ಪ್ರಜ್ವಲಿಸುವಂತಾದಾಗ ಬುಡಕಟ್ಟು ಜನ ಪ್ರತಿಕ್ರಿಯಿಸುತ್ತಾರೆ. ಅವರು ಬದಲಾವಣೆಯನ್ನು ಬಯಸುತ್ತಾರೆ. ಅವರಿಗೆ ಬದಲಾವಣೆ ಅನಿವಾರ್ಯ" ಎನ್ನುವ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. (ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು: ಎ.ಎಸ್.ಪ್ರಭಾಕರ 2000: ಪು.ಸಂ. 45)

ಒಂದು ಪ್ರದೇಶದ ಸ್ವಾಭಾವಿಕ ಸಂಪನ್ಮೂಲಗಳನ್ನು ನಾಶಗೈದು ಇನ್ನೊಂದು ಪ್ರದೇಶಕ್ಕೆ ನೀರು ಕೊಡುವುದು ಅಭಿವೃದ್ಧಿಯಾಗಲು ಸಾಧ್ಯವಿಲ್ಲ. ಒಂದು ಪ್ರದೇಶದ ಸಂಪತ್ತನ್ನು ನಾಶಗೈದು ಇನ್ನೊಂದು ಕಡೆ ವಿದ್ಯುತ್ ಪೂರೈಸುವುದು ಅಭಿವೃದ್ಧಿಯಾಗಲಾರದು.

ವರ್ತಮಾನ ಕಾಲದಲ್ಲಿ ಬುಡಕಟ್ಟುಗಳ ಜೀವನ ಮತ್ತು ಸರಕಾರದ ಆರ್ಥಿಕ ನೀತಿಗಳಿಗೂ ಬಹಳ ಅಂತರವೇರ್ಪಟ್ಟಿರುವುದು ಸತ್ಯ. ಅಭಿವೃದ್ಧಿಯ ಹೆಸರಲ್ಲಿ ಸರಕಾರದ ಬೃಹತ್ ಯೋಜನೆಗಳು, ನಗರೀಕರಣ ಹಾಗೂ ಕೈಗಾರಿಕೀಕರಣಗಳು ಈ ಅಂತರವನ್ನು ಇನ್ನೂ ಆಳವಾಗಿರಿಸಿರುವುದು ಗಮನಿಸಬಹುದು.

ಎಲ್ಲ ಮಾನವರಂತೆ ಬುಡಕಟ್ಟು ಸಮುದಾಯದ ಜನರಿಗೂ ಗೌರವದಿಂದ ಉತ್ತಮ ಆಹಾರದೊಂದಿಗೆ, ಆರೋಗ್ಯದಿಂದ ಶಿಕ್ಷಣದೊಂದಿಗೆ ಬಾಳುವ ಹಕ್ಕಿದೆ. ಆದುದರಿಂದ ಬುಡಕಟ್ಟುಗಳಿಗೆ ಸರಕಾರ ಯೋಜನೆಗಳನ್ನು ಅನುಷ್ಠಾನಗೊಳಿಸುವ ಮುನ್ನ ಫಲಾನುಭವಿಗಳೊಂದಿಗೆ ಚರ್ಚಿಸುವುದು ಅವರ ಅಭಿಪ್ರಾಯಗಳಿಗೆ ಮನ್ನಣೆ ಕೊಡುವುದರ ಅನಿವಾರ್ಯತೆ ಇದೆ. ಆದ್ದರಿಂದ ಪ್ರಸ್ತುತ ಕಾಲದಲ್ಲಿ ಬುಡಕಟ್ಟು ಅಭಿವೃದ್ಧಿಯೆಂದರೆ ಮೂಲಭೂತ ಅವಶ್ಯಕತೆಗಳೊಂದಿಗೆ ಗೌರವಯುತ ಬದುಕು, ಶಿಕ್ಷಣದೊಂದಿಗೆ, ತನ್ನ ಬಗ್ಗೆ ಮತ್ತು ಸುತ್ತಲಿನ ಸಮಾಜದ ಅರಿವು ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗಿಯಾಗುವ ಸ್ವಾವಲಂಬನೆಯ ಪ್ರಕ್ರಿಯೆಯೇ ಬುಡಕಟ್ಟು ಅಭಿವೃದ್ಧಿ ಎನ್ನಬಹುದು.

ತುಲನಾತ್ಮಕವಾಗಿ ವಿಶ್ಲೇಷಿಸುವುದಾದರೆ ದಕ್ಷಿಣ ಕನ್ನಡದಲ್ಲಿ ಮರಾಠಿ ನಾಯ್ಕ ಮಹಿಳೆಯರು ಉಳಿದ ಬುಡಕಟ್ಟುಗಳ ಮಹಿಳೆಯರಿಗಿಂತ ಆರ್ಥಿಕವಾಗಿ ಮುಂದುವರಿಯುತ್ತಿರುವುದು ಕಂಡುಬಂದಿದೆ. ರಾಜಕೀಯವಾಗಿ ಗುರುತಿಸುವಂತಹ ಬದಲಾವಣೆಗಳು ಮಹಿಳೆಯರಲ್ಲಿ ಆಗಿಲ್ಲ ಎನ್ನುವುದು ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ. ಶಿಕ್ಷಣದತ್ತ ಒಲವು ತೋರಿರುವುದರಿಂದಲೂ ತಮ್ಮದೇ ಆದ ಭೂಮಿಯನ್ನು ಹೊಂದಿರುವುದರಿಂದಲೂ ಹಾಗೂ ಕೃಷಿಯಲ್ಲಿ ಹೆಚ್ಚಿನ ಆಸಕ್ತಿಯಿಂದ ತೊಡಗಿಸಿಕೊಂಡಿರುವುದರಿಂದಲೂ ಮರಾಠಿ ನಾಯ್ಕ ಸಮುದಾಯವು ಉಳಿದ ಆದಿವಾಸಿಗಳಿಗಿಂತ ಅಭಿವೃದ್ಧಿಯತ್ತ ವೇಗವಾಗಿ ಸಾಗುತ್ತಿದೆ. ಕುಡುಬಿ ಸಮುದಾಯವು ತಮ್ಮದೇ ಆದ ಸಂಪ್ರದಾಯಗಳೊಂದಿಗೆ ತಮ್ಮದೇ ಗುಂಪಿನಲ್ಲಿ ವಾಸಿಸುತ್ತಿದ್ದು ಬದಲಾವಣೆಗಳಿಗೆ ಬಹಳ ಬೇಗನೆ ಒಗ್ಗಿಕೊಳ್ಳದೇ ಇರುವುದು ಗಮನಿಸುಬಹುದಾಗಿದೆ. ಕೃಷಿಯಲ್ಲಿ ಅಲ್ಪ ಮಟ್ಟಿಗೆ ತೊಡಗಿಸಿಕೊಂಡಿದ್ದರೂ ಶಿಕ್ಷಣಕ್ಕೆ ಇನ್ನೂ ಹೆಚ್ಚಿನ ಪ್ರಾಧಾನ್ಯತೆ ಕೊಡಬೇಕಾಗಿದೆ. ಕುಡುಬಿಗಳಲ್ಲಿ ಸಂಘಟನಾತ್ಮಕ ಹೋರಾಟವೂ ಅವರ ಅಭಿವೃದ್ಧಿಗೆ ಅಗತ್ಯವಾಗಿದೆ. ರಾಜಕೀಯದತ್ತಲೂ ಕುಡುಬಿ ಬುಡಕಟ್ಟು ಜನರು ಒಲವು ತೋರಿಸಬೇಕಾದ ಅನಿವಾರ್ಯತೆಯಿದೆ.

ಮಲೆಕುಡಿಯ ಸಮುದಾಯದಲ್ಲೂ ಶಿಕ್ಷಣದ ಕೊರತೆಯನ್ನು ಕಾಣಬಹುದಾಗಿದೆ. ಶಿಕ್ಷಣದ ಕೊರತೆಯಿಂದಾಗಿ ಮಹಿಳೆಯರು ಬೀಡಿಯನ್ನು ಅವಲಂಬಿಸಿರುವುದರಿಂದ ಅಲ್ಪ ಆದಾಯ ಗಳಿಕೆಯಿಂದಾಗಿ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ. ರಾಜಕೀಯ ಭಾಗವಹಿಸುವಿಕೆಯೂ ತುಂಬಾ ಕೆಳಮಟ್ಟದಲ್ಲಿದೆ.

ಈ ಮೂರು ಬುಡಕಟ್ಟುಗಳಿಗೆ ಜಾತಿ ವ್ಯವಸ್ಥೆಯ ಅಸ್ಪೃಶ್ಯತೆಯ ಕಳಂಕವಿಲ್ಲ. ಆದರೆ ಕೊರಗ ಸಮುದಾಯ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅತ್ಯಂತ ಹಿಂದುಳಿದ ಸಮುದಾಯವಾಗಿದ್ದು ಇದರೊಂದಿಗೆ ಅಸ್ಪೃಶ್ಯತೆಯೂ ಸೇರಿಕೊಂಡಿದೆ. ಅಸ್ಪೃಶ್ಯತೆ ಹಾಗೂ ಕೀಳರಿಮೆ ಈ ಸಮುದಾಯವನ್ನು ಮುಖ್ಯವಾಹಿನಿಯೊಂದಿಗೆ ಬೆರೆಯಲು ತಡೆ ಮಾಡಿದೆ. ತಮ್ಮ ಮನೆಗಳಿಗೆ ಇನ್ನೊಂದು ಸಮುದಾಯದವರು ಪ್ರವೇಶಿಸುವುದಿಲ್ಲ. ಈ ಸಮುದಾಯದವರು ಇತರ ಸಮುದಾಯದ ಮನೆಗಳಿಗೆ ಸಲೀಸಾಗಿ ಪ್ರವೇಶಿಸುವುದಿಲ್ಲ ಎನ್ನುವುದು ವಾಸ್ತವವಾಗಿರುತ್ತದೆ.

ದಕ್ಷಿಣ ಕನ್ನಡದ ಬುಡಕಟ್ಟು ಸಮುದಾಯದಲ್ಲಿ ಅತೀ ಹಿಂದುಳಿದ ಈ ಜನಾಂಗವನ್ನು ಪ್ರಾಚೀನ ಬುಡಕಟ್ಟು ಸಮುದಾಯ ('ಪ್ರಿಮಿಟಿವ್ ಟ್ರೈಬ್') ಎಂದು ವರ್ಗೀಕರಿಸಲಾಗಿದೆ. ಅತ್ಯಂತ ಹೆಚ್ಚಿನ ಕೊರಗ ಬುಡಕಟ್ಟು ಮನೆಗಳು ವಾಸಿಸಲು ಯೋಗ್ಯವಾಗಿಲ್ಲ. ಜಾತಿ ವ್ಯವಸ್ಥೆ ಮತ್ತು ಇತರ ಸಮುದಾಯದೊಂದಿಗಿನ ಸಂಪರ್ಕದ ಪ್ರಭಾವವು, ಕೊರಗ ಬುಡಕಟ್ಟಿನ ಜನರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಮಹತ್ತರ ಪ್ರಭಾವ ಬೀರಿದೆ.

ಇತರ ಬುಡಕಟ್ಟುಗಳಂತೆ ಕೊರಗ ಸಮುದಾಯವೂ ಪರಂಪರೆಯಿಂದ ಬಂದಿರುವ ಕುಲಕಸುಬಿನ ಅವಕಾಶವನ್ನು ಕಳೆದುಕೊಂಡಿದ್ದು, ಹೆಚ್ಚಿನ ಪುರುಷರು ಕೂಲಿ ಕೆಲಸವನ್ನು ಅವಲಂಬಿಸದ್ದಾರೆ. ಅಸ್ಪೃಶ್ಯತೆಯ ಕಳಂಕದಿಂದಾಗಿ ಹೆಚ್ಚಿನ ಕೊರಗ ಜನರಿಗೆ ಕೃಷಿ ಕೂಲಿಯ ಉದ್ಯೋಗ ನಿರಾಕರಿಸಲ್ಪಟ್ಟಿದೆ ಎಂದು ಅಧ್ಯಯನದ ಮೂಲಕ ತಿಳಿಯಬಹುದಾಗಿದೆ. ಉಳಿದ ಬುಡಕಟ್ಟುಗಳಿಗೆ ಹೋಲಿಸಿದರೆ ಉದ್ಯೋಗದಿಂದಾಗಿ ಆಗುವ ಬದಲಾವಣೆಯ ಪ್ರಕ್ರಿಯೆಯು ಬಹಳ ನಿಧಾನವಾಗಿದೆ.

ಕೊರಗ ಸಮುದಾಯದಲ್ಲಿ ಶಿಕ್ಷಣದ ಮಟ್ಟವೂ ಕಡಿಮೆಯಿದ್ದು, ಅತ್ಯಂತ ಹೆಚ್ಚಿನವರು ನಿರಕ್ಷರಿಗಳಾಗಿದ್ದಾರೆ. ಹೆಚ್ಚಿನ ಯುವಜನಾಂಗ ಪ್ರಾಥಮಿಕ ಶಿಕ್ಷಣವನ್ನು ಮಾತ್ರ ಪೂರೈಸಲು ಶಕ್ತವಾಗಿದೆ.

